# ತ.ರಾ.ಸು ಅವರ ಕಾದಂಬರಿಗಳಲ್ಲಿ ಸ್ತ್ರೀಸಂವೇದನೆ

(ಪಿ.ಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಶೋಧನಾ ಮಹಾಪ್ರಬಂಧ)

ಸಂಶೋಧಕರು

**ಆರ್. ಮಹೇಶ**

ಆಯ್ಕೆ ಶ್ರೇಣಿ ಕನ್ನಡ ಉಪನ್ಯಾಸಕರು

ಸರ್ಕಾರಿ ಪ್ರಥಮದರ್ಜೆ ಕಾಲೇಜು

ಚಳ್ಳಕೆರೆ–೫೭೭೫೨೨

ಮಾರ್ಗದರ್ಶಕರು

**ಡಾ.ವಿಠಲರಾವ್ ಟಿ. ಗಾಯಕ್ವಾಡ್**

ಪ್ರಾಧ್ಯಾಪಕರು

ಭಾಷಾಂತರ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

ಹೊಸಪೇಟೆ (ತಾ), ಬಳ್ಳಾರಿ (ಜಿ)



ಭಾಷಾಂತರ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ–೫೮೩೨೭೬

೨೦೦೯



# ತ.ರಾ.ಸು ಅವರ ಕಾದಂಬರಿಗಳಲ್ಲಿ ಸ್ತ್ರೀಸಂವೇದನೆ

(ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಶೋಧನಾ ಮಹಾಪ್ರಬಂಧ)


ಸಂಶೋಧಕರು

**ಆರ್. ಮಹೇಶ**

ಆಯ್ಕೆ ಶ್ರೇಣಿ ಕನ್ನಡ ಉಪನ್ಯಾಸಕರು

ಸರ್ಕಾರಿ ಪ್ರಥಮದರ್ಜೆ ಕಾಲೇಜು

ಚಳ್ಳಕೆರೆ-೫೭೭೫೨೨

ಮಾರ್ಗದರ್ಶಕರು

**ಡಾ.ವಿಠಲರಾವ್ ಟಿ. ಗಾಯಕ್ವಾಡ್**

ಪ್ರಾಧ್ಯಾಪಕರು

ಭಾಷಾಂತರ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

ಹೊಸಪೇಟೆ (ತಾ), ಬಳ್ಳಾರಿ (ಜಿ)





ಭಾಷಾಂತರ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩೨೭೬

೨೦೦೯

# ಪ್ರಮಾಣ ಪತ್ರ

**"ತ.ರಾ.ಸು ಅವರ ಕಾದಂಬರಿಗಳಲ್ಲಿ ಸ್ತ್ರೀಸಂವೇದನೆ"** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಡಾ.ವಿಠಲರಾವ್ ಟಿ. ಗಾಯಕ್ವಾಡ್ ಅವರ ಮಾರ್ಗದರ್ಶನದಲ್ಲಿ ಬರೆದು ಸಿದ್ಧಪಡಿಸಲಾಗಿದೆ. ಇದನ್ನು ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಭಾಷಾಂತರ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಈ ಮಹಾಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣಿಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ: ೨೮-೦೫-೨೦೦೯

ಸಂಶೋಧಕರು

ಆರ್.ಮಹೇಶ

ಭಾಷಾಂತರ ಅಧ್ಯಯನ ವಿಭಾಗ,

ಕನ್ನಡ ವಿಶ್ವವಿದ್ಯಾಲಯ, ಹಂಪಿ.

# ದೃಢೀಕರಣ ಪತ್ರ

ಶ್ರೀ ಆರ್.ಮಹೇಶ ಅವರು **"ತ.ರಾ.ಸು ಅವರ ಕಾದಂಬರಿಗಳಲ್ಲಿ ಸ್ತ್ರೀಸಂವೇದನೆ"** ಎಂಬ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯದ ಭಾಷಾಂತರ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಈ ಮಹಾಪ್ರಬಂಧವನ್ನು ಸಲ್ಲಿಸಲಾಗುತ್ತಿದೆ. ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರೆ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೨೮-೦೫-೨೦೦೯

**ಡಾ.ವಿಠಲರಾವ್ ಟಿ. ಗಾಯಕ್ವಾಡ್**

**ಮಾರ್ಗದರ್ಶಕರು**

ಭಾಷಾಂತರ ಅಧ್ಯಯನ ವಿಭಾಗ,

ಕನ್ನಡ ವಿಶ್ವವಿದ್ಯಾಲಯ, ಹಂಪಿ.

## ಪರಿವಿಡಿ

### ಅಧ್ಯಾಯ ೧

### ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿ



### ಅಧ್ಯಾಯ ೨

### ಪ್ರಗತಿಶೀಲ ಪಂಥ ಮತ್ತು ತ.ರಾ.ಸು ಅವರ ಕಾದಂಬರಿಗಳು

### ಅಧ್ಯಾಯ ೩

### ಸ್ತ್ರೀಪ್ರಧಾನ ಕನ್ನಡ ಕಾದಂಬರಿಗಳ ಅಧ್ಯಯನ



### ಅಧ್ಯಾಯ ೪

### ಮಹಿಳಾ ಆಂದೋಲನಗಳು ಮತ್ತು ತ.ರಾ.ಸು ಅವರ ಕಾದಂಬರಿಗಳು



### ಅಧ್ಯಾಯ ೫

### ತ.ರಾ.ಸು ಅವರ ಕಾದಂಬರಿಗಳಲ್ಲಿ ಸ್ತ್ರೀಸಂವೇದನೆ



### ಅಧ್ಯಾಯ ೬

### ತ.ರಾ.ಸು ಅವರ ಕಾದಂಬರಿಗಳು ಸಮೂಹ ಮಾಧ್ಯಮದ ಮೂಲಕ ಬೀರಿದ ಪ್ರಭಾವ

## ಅಧ್ಯಾಯ ೭

## ತ.ರಾ.ಸು ಅವರ ಕಾದಂಬರಿಗಳ ಭಾಷಾ ಸಂವೇದನೆಯ ಸ್ವರೂಪ



## ಅಧ್ಯಾಯ ೮

# ಕೃತಜ್ಞತೆಗಳು

ಅಧ್ಯಾಪನ ವೃತ್ತಿಯ ಜೊತೆಗೆ ಓದು ಹಾಗೂ ಸಾಹಿತ್ಯಕವಾದ ಚಟುವಟಿಕೆಗಳಲ್ಲಿ ಕ್ರಿಯಾತ್ಮಕವಾಗಿ ತೊಡಗಿಸಿಕೊಂಡಿದ್ದ ನಾನು ಸಂಶೋಧನೆಯ ಕಡೆಗೆ ಗಮನ ಹರಿಸಿರಲಿಲ್ಲ. ೨೦೦೨ರಲ್ಲಿ ಕನ್ನಡ ವಿ.ವಿ.ಯಲ್ಲಿನ ಪುನರ್‌ಮನನ ಶಿಬಿರದಲ್ಲಿ ಭಾಗವಹಿಸಿದಾಗ ಡಾ.ವಿಠಲರಾವ್ ಟಿ. ಗಾಯಕ್ವಾಡ್ ಅವರ ಉಪನ್ಯಾಸ ನನ್ನ ಸಂಶೋಧನೆಗೆ ಪ್ರೇರಕವಾಯಿತು. ಅನಂತರ ಶ್ರೀಯುತರ ಜೊತೆಗೆ ನಿಕಟವಾದ ಸಂಪರ್ಕವಿರಿಸಿಕೊಂಡು ಸಂಶೋಧನಾ ಕ್ಷೇತ್ರಕ್ಕೆ ನಾನು ತೊಡಗಿಸಿಕೊಂಡೆನು.

ಡಾ ವಿಠಲರಾವ್ ಟಿ. ಗಾಯಕ್ವಾಡ್ ಅವರು ವೈಚಾರಿಕ ನೆಲೆಗಟ್ಟಿನ ಚಿಂತಕರು ಹಾಗೂ ಭಾಷಾ ತಜ್ಞರು. ಕನ್ನಡ, ಇಂಗ್ಲಿಷ್, ಹಿಂದಿ, ಮರಾಠಿ ಭಾಷೆಗಳನ್ನು ಬಲ್ಲ ಶ್ರೀಯುತರು ನನಗೆ ತ.ರಾ.ಸು ಅವರ ಕಾದಂಬರಿಗಳಲ್ಲಿ ಸ್ತ್ರೀಸಂವೇದನೆ ಕುರಿತು ಸಂಶೋಧನೆ ಕೈಗೊಳ್ಳಲು ಸೂಚಿಸಿ ಮಾರ್ಗದರ್ಶನ ಮಾಡಲು ಒಪ್ಪಿದರು. ಅಲ್ಲದೆ ನನ್ನ ಸಂಶೋಧನಾ ಪ್ರಬಂಧ ರಚನೆಯಲ್ಲಿ ಸೂಕ್ತ ಮಾರ್ಗದರ್ಶನ ಮತ್ತು ಮೌಲಿಕವಾದ ಸಲಹೆಗಳನ್ನು ನೀಡಿ, ಮುಕ್ತವಾದ ಅವಕಾಶವನ್ನು ಕಲ್ಪಿಸಿಕೊಟ್ಟಿರುತ್ತಾರೆ. ಗುರುಗಳೂ, ಮಾರ್ಗದರ್ಶಕರೂ ಆದ ಡಾ.ವಿಠಲರಾವ್ ಟಿ. ಗಾಯಕ್ವಾಡ್ ಅವರಿಗೆ ನಾನು ಕೃತಜ್ಞನಾಗಿದ್ದೇನೆ.

ಪ್ರಸ್ತುತ ಸಂದರ್ಭದಲ್ಲಿ ಸಂಶೋಧನೆಯ ಗುಣಮಟ್ಟ ಮತ್ತು ಪಾವಿತ್ರ್ಯವನ್ನು ಕಾಪಾಡಿಕೊಂಡು ಬರುತ್ತಿರುವ ಕನ್ನಡ ವಿಶ್ವವಿದ್ಯಾಲಯದ ಕುಲಪತಿಯವರಿಗೆ, ಕುಲಸಚಿವರಿಗೆ, ಅಧ್ಯಯನಾಂಗದ ನಿರ್ದೇಶಕರಿಗೆ ಅಧ್ಯಯನದ ವರದಿ ಸಲ್ಲಿಸುವಾಗೆಲ್ಲ ಸಲಹೆಗಳನ್ನು ನೀಡುತ್ತಾ ಬಂದ ಭಾಷಾಂತರ ಅಧ್ಯಯನ ವಿಭಾಗದ ವಿದ್ವಾಂಸರಾದ ಡಾ.ಕರೀಗೌಡಬೀಚನಹಳ್ಳಿ, ಮುಖ್ಯಸ್ಥರಾದ ಡಾ.ವಿ.ಬಿ. ತಾರಕೇಶ್ವರ್, ಡಾ. ಎಂ.ಮೋಹನ್ ಕುಂಟಾರ್, ಡಾ.ಎಂ. ಉಷಾ ಅವರಿಗೆ ನನ್ನ ಕೃತಜ್ಞತೆಗಳು.

ಅವಿದ್ಯಾವಂತರಾದರೂ ಅಕ್ಷರವನ್ನು ಅಪಾರವಾಗಿ ಪ್ರೀತಿಸಿದ ನನ್ನ ತಂದೆಯವರಾದ ರಂಗಣ್ಣ ಮತ್ತು ತಾಯಿ ಚಿಕ್ಕಮ್ಮನವರು ನನ್ನ ಸಂಶೋಧನೆಯ ಬಗ್ಗೆ ಸಂತೋಷಪಟ್ಟು ಆಶೀರ್ವದಿಸಿರುತ್ತಾರೆ. ಆತ್ಮೀಯ ಸ್ನೇಹಿತರಾದ ಡಾ. ಎ.ರಘುರಾಂ ಅವರು ಸಂಶೋಧನೆಗೆ ತೊಡಗುವಂತೆ ಮಾಡಿ ಸಂಶೋಧನೆ ಮುಗಿಯುವವರೆಗೂ ಸಹಕರಿಸಿರುತ್ತಾರೆ, ಅವರಿಗೆ ನನ್ನ ಕೃತಜ್ಞತೆಗಳು.

ಈ ಸಂಶೋಧನೆಗೆ ಸಂಪೂರ್ಣ ಸಹಕಾರ ನೀಡಿದ ಕಾಲೇಜಿನ ಪ್ರಾಚಾರ್ಯರಾದ ಪ್ರೊ.ಟಿ.ವಿ.ಸುರೇಶ್‌ಗುಪ್ತ, ಕನ್ನಡ ವಿಭಾಗದ ಮುಖ್ಯಸ್ಥರಾದ ಪ್ರೊ. ಬಿ.ಪಿ.ವೀರೇಂದ್ರಕುಮಾರ್ ಡಾ.ಸಿ.ಶಿವಲಿಂಗಪ್ಪ, ಜಿ.ವೆಂಕಟೇಶ್, ಸಿ.ಜಗದೀಶ್, ಸಿ.ವೀರನಾಯಕ, ಎಚ್.ಅಜ್ಜಯ್ಯ, ಆರ್.ಕೆ.

ರಂಗಸ್ವಾಮಿ, ಡಿ.ದೇವರಪ್ಪ, ಎಂ.ಶಿವಲಿಂಗಪ್ಪ, ಉಪ್ಪಾರಾರಹಟ್ಟಿ ಚಿತ್ತಯ್ಯ, ಹಿರಿಯ ಗ್ರಂಥಪಾಲಕರಾದ ಗೋಪಾಲನಾಯ್ಕ, ವ್ಯವಸ್ಥಾಪಕರಾದ ಹನುಮಂತರಾಯಪ್ಪ ಹಾಗೂ ಕಾಲೇಜಿನ ಎಲ್ಲ ಬೋಧಕ ಮತ್ತು ಬೋಧಕೇತರ ವರ್ಗದವರನ್ನು ನೆನೆಯಲೇಬೇಕು.

ನನ್ನ ಸಂಶೋಧನಾ ಪ್ರಬಂಧದ ಸಂದರ್ಭದಲ್ಲಿ ಸಹಕರಿಸಿದ ಡಾ.ಲೋಕೇಶ ಅಗಸನಕಟ್ಟೆ ಯವರಿಗೆ, ಡಾ.ಮೀರಾಸಾಬಿಹಳ್ಳಿ ಶಿವಣ್ಣ ಮತ್ತು ಡಾ.ಮಲ್ಲಿಕಾರ್ಜುನ ಕಲಮರಹಳ್ಳಿ ಅವರಿಗೆ ನನ್ನ ಕೃತಜ್ಞತೆಗಳು.

ನನ್ನ ಸಂಶೋಧನಾ ಅಧ್ಯಯನದ ಸಂದರ್ಭದಲ್ಲಿ ಸಹಕರಿಸಿದ ಸೋದರ ಡಿ.ಆರ್. ತಿಪ್ಪೇಸ್ವಾಮಿ, ಸೋದರಿಯರಾದ ಆರ್. ರುದ್ರಮ್ಮ, ಆರ್.ಸುಜಾತ, ಆರ್.ಲಕ್ಷ್ಮಿ ಭಾವಮೈದುನರಾದ ಚಿಕ್ಕಣ್ಣ, ರುದ್ರಣ್ಣ ಎನ್ ಶಿಕ್ಷಕರು, ಎಸ್.ಜಗದೀಶ್, ಮಾವನವರಾದ ಮುದ್ದಣ್ಣ ಮತ್ತು ತಿಪ್ಪಯ್ಯ ಹಾಗೂ ಜಿ.ವಿ. ಸಿರಿಯಣ್ಣ ಅವರನ್ನು ನೆನೆಯಲೇಬೇಕು.

ನನ್ನ ಸಂಶೋಧನಾ ಅವಧಿಯುದ್ದಕ್ಕೂ ನಿಗದಿತ ಸಮಯದಲ್ಲಿ ಪ್ರಬಂಧ ಬರೆದು ಸಲ್ಲಿಸುವಂತೆ ಸದಾ ನನ್ನನ್ನು ಎಚ್ಚರಿಸುತ್ತಿದ್ದ ನನ್ನ ಧರ್ಮಪತ್ನಿ ಜಿ.ಎಂ.ಶಶಿಕಲಾ ಹಾಗೂ ಚಿರಂಜೀವಿಗಳಾದ ಮೈಥಿಲಿ ಮತ್ತು ಚಿರಂತ್‌ಯಾದವ್ ಅವರನ್ನು ನೆನೆಯದಿರಲಾರೆ.

ನನ್ನ ಸಂಶೋಧನೆ ಬಗ್ಗೆ ಸದಾ ಚರ್ಚಿಸಿ ಸಂತೋಷಪಡುತ್ತಿದ್ದ ಗೆಳೆಯ ಹೆಚ್.ತಿಪ್ಪೇಸ್ವಾಮಿ, ಪೂಜ್ಯರಾದ ಜಿ.ರಾಜಶೇಖರಯ್ಯ, ಜಿ.ರಂಗಸ್ವಾಮಿ, ಜಿ.ಪ್ರಕಾಶ, ಕೆ.ಎಂ.ಜಗನ್ನಾಥ, ಚಂದ್ರಯ್ಯ, ಜಿ.ಡಿ.ಚಿತ್ತಣ್ಣ, ಎಂ.ಸಣ್ಣನಾಗಪ್ಪ ಅವರಿಗೆ ನನ್ನ ಕೃತಜ್ಞತೆಗಳು. ಒಲವಿನಿಂದ ಡಿ.ಟಿ.ಪಿ ಮಾಡಿಕೊಟ್ಟ ಚಳ್ಳಕೆರೆಯ ಐ.ಐ.ಸಿ.ಟಿ ಕಂಪ್ಯೂಟರ್ ಮಾಲೀಕರಾದ ಷೇಕ್‌ಪೀರ್ ನಫೀಸ್ ಮತ್ತು ಮಮತಾ ಅವರನ್ನು ನೆನೆಯದಿರಲಾರೆ.

**ಆರ್. ಮಹೇಶ**

**ಸಂಶೋಧಕರು**

# ಅಧ್ಯಾಯ ೧.

## ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿ

### ೧.೧.ಕಾದಂಬರಿ :

ಹೊಸಗನ್ನಡ ಸಾಹಿತ್ಯ ಪ್ರಕಾರಗಳಲ್ಲಿ ಕಾದಂಬರಿ ಬಹಳ ಜನಪ್ರಿಯವಾದ ಪ್ರಕಾರ, ಸರ್ವರಿಗೂ ಪ್ರಿಯವಾದ ಒಂದು ಸಾಹಿತ್ಯ ಮಾಧ್ಯಮ. ಕನ್ನಡದಲ್ಲಿ ಕಾದಂಬರಿ ತೀರಾ ತಡವಾಗಿ ಬಂದರೂ ಬೇರೆ ಪ್ರಕಾರಗಳಿಗಿಂತ ಉನ್ನತಸ್ಥಾನ ಪಡೆದಿದೆ. "ಮಾನವನಲ್ಲಿ ಕತೆ ಹೇಳುವ ಮತ್ತು ಕೇಳುವ ಹವ್ಯಾಸ ಆದಿಕಾಲದಿಂದಲೂ ಜನಪ್ರಿಯವಾದ ಮನರಂಜನೆಯಾಗಿದೆ. ಇಂದಿಗೂ ಅದು ಅನುಚಾನವಾಗಿ ನಡೆದುಕೊಂಡು ಬಂದಿದೆ. ಆದರೆ ಸ್ವರೂಪ ಮಾತ್ರ ಬದಲಾಗುತ್ತಿದೆಯಷ್ಟೆ. ಕಾವ್ಯ ನಾಟಕಗಳಿಗಿಂತಲೂ ಇತ್ತೀಚಿನದಾದ ಕಾದಂಬರಿ ಅವುಗಳಿಗಿಂತಲೂ ಹೆಚ್ಚು ವಿಸ್ತಾರವೂ ಪರಿಪೂರ್ಣವೂ ಆಗಿದೆ. ನಾಟಕವು ಶುದ್ಧ ಸಾಹಿತ್ಯವಲ್ಲವೆಂದು ಹೇಳುತ್ತಾರೆ. ಅದೊಂದು ಸಂಯುಕ್ತಕಲೆ, ಅದು ಪಂಡಿತರ ಸ್ವತ್ತೆನಿಸಿದೆ. ಆದರೆ ಕಾದಂಬರಿ ಒಂದು ಸ್ವತಂತ್ರ ಕಲೆಯಾಗಿ ಎಲ್ಲರನ್ನು ಮಂತ್ರಮುಗ್ಧಗೊಳಿಸಿದೆ. ಮೇರಿಯನ್ ಕ್ರಾಫರ್ಡ್ ಕಾದಂಬರಿಯನ್ನು " ಕರತಲ ರಂಗಭೂಮಿ" ಯೆಂದು ಕರೆದಿದ್ದು ತುಂಬಾ ಔಚಿತ್ಯಪೂರ್ಣವಾಗಿದೆ. ನಾಟಕದ ಎಲ್ಲಾ ಪ್ರಕಾರಗಳನ್ನು ಕಾದಂಬರಿ ತನ್ನೊಳಗಿರಿಸಿಕೊಂಡಿದೆ"[1].

ತ.ರಾ.ಸು. ಅವರ ಸ್ಮರಣ ಸಂಪುಟ 'ಗಿರಿಮಲ್ಲಿಗೆ' ಯಲ್ಲಿ "ಕನ್ನಡ ಕಾದಂಬರಿ ಮತ್ತು ತ.ರಾಸು." ಎನ್ನುವ ಲೇಖನದಲ್ಲಿ ದು.ನಿಂ. ಬೆಳಗಲಿ ಹೇಳಿರುವ ಈ ಮಾತು ಕಾದಂಬರಿ ಪ್ರಾಚೀನತೆ ತಿಳಿಯಲು ಪೂರಕವಾದ ಹೇಳಿಕೆಯಾಗಿದೆ.

"ಲ್ಯಾಟಿನ್ ಭಾಷೆಯ "ನೋವಸ್" ಎಂಬ ಪದದಿಂದ ಇಂಗ್ಲಿಷ್‌ನಲ್ಲಿ "ನಾವೆಲ್" ಎಂದಾಗಿದೆ. 'ನೋವಸ್' ಎಂದರೆ ಹೊಸದು ಎಂದರ್ಥ. ಎಲ್ಲ ಸಾಹಿತ್ಯ ಪ್ರಕಾರಗಳಲ್ಲಿ ಇದು ಹೊಸದಾಗಿ ಹುಟ್ಟಿದ್ದರಿಂದ ಇಂಗ್ಲಿಷ್‌ನಲ್ಲಿ ಈ ರೀತಿಯ ಹೊಸ ಹೆಸರು ಪಡೆಯಿತು"[2].

ಕಾದಂಬರಿ ವಿಶ್ಲೇಷಣೆ ಕುರಿತಂತೆ ಡಾ.ಹರಿಕೃಷ್ಣ ಭರಣ್ಯ ಅವರು ತಮ್ಮ 'ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ' ಎಂಬ ಕೃತಿಯಲ್ಲಿ ಹೀಗೆ ಹೇಳುತ್ತಾರೆ. ಕಾದಂಬರಿ ಎಂಬ ಸಾಹಿತ್ಯ ಪ್ರಕಾರಕ್ಕೆ ಇಂಗ್ಲೀಷ್‌ನಲ್ಲಿ 'ನಾವೆಲ್' ಎಂದು ಹೆಸರು. 'ನಾವೆಲ್' ಎಂದರೆ:

A fictions prose narrative or tale of considerable length in which characters and actions representative of the real life of past are present times and are portrayed of more or less complexity.... (Oxford English Dictionary).

"ನಾವೆಲ್" ಎಂದರೆ ವಾಸ್ತವಿಕತೆಯಿಂದ ದೂರ ಇರಬಹುದಾದ ಗದ್ಯಬರವಣಿಗೆ ಅಥವಾ ಸಾಕಷ್ಟು ಉದ್ದದ ಕಥೆಯಾಗಿದ್ದು, ಅದರಲ್ಲಿ ಬರುವ ಪಾತ್ರಗಳು ಮತ್ತು ಸನ್ನಿವೇಶಗಳು, ಆಧುನಿಕ ಅಥವಾ ಪುರಾತನರ ನಿಜಜೀವನವನ್ನು ಪಡಿ ಅಚ್ಚಿನಂತೆ, ಅದರ ಸಂಕೀರ್ಣತೆಯೊಂದಿಗೆ ಪ್ರತಿಬಿಂಬಿಸುತ್ತದೆಯೆಂದು ಮೇಲಿನ ಹೇಳಿಕೆಯನ್ನು ಅರ್ಥೈಸಬಹುದಾಗಿದೆ.

ಇಂಗ್ಲಿಷ್‌ನ ಪ್ರಕಾರ ಸುಧೀರ್ಘವಾದ ಕತೆಯನ್ನು ಕಾದಂಬರಿಯೆಂದು ಸ್ಥೂಲವಾಗಿ ಹೇಳಲಾಗಿದೆ. ಹಾಗೆ ನೋಡುವುದಾದರೆ ಕತೆ ಹೇಳುವ ಮತ್ತು ಕೇಳುವ ಪ್ರವೃತ್ತಿ ಪ್ರಾಚೀನ ಕಾಲದಿಂದಲೂ ಮುಂದುವರೆದುಕೊಂಡು ಬಂದಿದೆ. ಕಥಾ ವಸ್ತುವನ್ನೊಳಗೊಂಡ ಅನೇಕ ಕಾವ್ಯಕೃತಿಗಳು ಕನ್ನಡದಲ್ಲಿ ಮೂಡಿಬಂದಿವೆ. ಉದಾ:ಗಾಗಿ ನಾಗವರ್ಮನ, 'ಕರ್ಣಾಟಕ ಕಾದಂಬರಿ', 'ದುರ್ಗಸಿಂಹನ ಪಂಚತಂತ್ರ', ನೇಮಿಚಂದ್ರನ 'ಲೀಲಾವತಿ ಪ್ರಬಂಧಂ', ಜನ್ನನ 'ಯಶೋಧರ ಚರಿತೆ', ಮುಂತಾದುವು. ಕಥೆಯನ್ನು ವಸ್ತುವಾಗುಳ್ಳ ಕೃತಿಗಳು. ಕನ್ನಡದಲ್ಲಿ ಮೊಟ್ಟಮೊದಲ ಗದ್ಯಕೃತಿ 'ವಡ್ಡಾರಾಧನೆ' ಕೂಡ ಹತ್ತೊಂಬತ್ತು ಜೈನ ತೀರ್ಥಂಕರರ ವೃತ್ತಾಂತವನ್ನೊಳಗೊಂಡ ಗದ್ಯಕೃತಿ. ಅಂದರೆ ಗದ್ಯರೂಪದಲ್ಲಿಯು ಕತೆ ಹೇಳುವ ಪದ್ಧತಿಯನ್ನು ಕನ್ನಡದಲ್ಲಿ ಒಂಬತ್ತನೇ ಶತಮಾನದಲ್ಲಿಯೇ ಕಾಣುತ್ತೇವೆ. ಇಪ್ಪತ್ತನೆ ಶತಮಾನದ ಆರಂಭದಲ್ಲಿಯೇ ಮುದ್ದಣ ರಚಿಸಿದ 'ರಾಮಾಶ್ವಮೇಧ' ಗದ್ಯಕತೆ. ಆದರೆ ಇಂದು ಆಧುನಿಕ ದಿನಗಳಲ್ಲಿ ಕಾದಂಬರಿಯೆಂದು ಕರೆಯುವ ಪ್ರಕಾರಕ್ಕೆ ಮೇಲೆ ಹೆಸರಿಸಿದ ಕೃತಿಗಳಾವು ಕೂಡ ಸೇರುವುದಿಲ್ಲ.

ಒಂದು ಸಾಹಿತ್ಯರೂಪದಲ್ಲಿ ಕಾಲಕ್ರಮಕ್ಕನುಗುಣವಾಗಿ ನಾನಾ ರೀತಿಯ ಪ್ರಯೋಗಗಳು ನಡೆಯುತ್ತಿರುತ್ತವೆ. ಈ ರೀತಿ ಹೊಸ ಹೊಸ ಪ್ರಯೋಗಗಳು ನಡೆಯುತ್ತಿರುವ ಸಂದರ್ಭದಲ್ಲಿಯೆ ಉಪ ಉತ್ಪತ್ತಿಯಾಗಿ ಒಮ್ಮೊಮ್ಮೆ ಹೊಸ ಹೊಸ ರೂಪಗಳು ಬಂದಿರುವುದು ಸಾಧ್ಯವೆಂದು ಪಿ.ವಿ. ಶಾಸ್ತ್ರಿಯವರ ಅಭಿಪ್ರಾಯವನ್ನು 'ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ' ಡಾ. ಹರಿಕೃಷ್ಣಭರಣ್ಯ ಎಂಬ ಕೃತಿಯಲ್ಲಿ ತಮ್ಮ ಅಭಿಪ್ರಾಯ ದಾಖಲಿಸಿದ್ದಾರೆ. ಮುಂದುವರೆದು ಕಾದಂಬರಿಯೆ ನೀಳ್ಗತೆಗಿಳಿದು ಅನಂತರ ಸಣ್ಣಕತೆಯಾಗಿರಬೇಕೆಂದು ಅಭಿಪ್ರಾಯಪಡುತ್ತಾರೆ.

ಈ ಎಲ್ಲಾ ಅಭಿಪ್ರಾಯಗಳನ್ನು ಅವಲೋಕನ ಮಾಡಿದ ಮೇಲೆ ಕನ್ನಡದಲ್ಲಿ ಸಣ್ಣಕತೆ ರೂಪವೇ ಮೊದಲಿಗೆ ಲಭ್ಯವಿದ್ದು ಅನಂತರ ಸಣ್ಣಕತೆಯೆ ವಿಸ್ತೃತವಾದ ರೂಪವನ್ನು ಪಡೆದು ಕಾದಂಬರಿ ಉಗಮಕ್ಕೆ ಕಾರಣವಾಗಿರಬೇಕು.

ಭಾರತೀಯ ಭಾಷೆಗಳಲ್ಲಿ ಕಾದಂಬರಿ ಸಾಹಿತ್ಯ ಪ್ರಕಾರದ ಸ್ವರೂಪ ಗಮನಿಸಿದಾಗ ಹತ್ತೊಂಬತ್ತನೆ ಶತಮಾನ ಭಾರತೀಯ ಸಾಹಿತ್ಯ ಕ್ಷೇತ್ರಕ್ಕೆ ಗಂಭೀರ ಪರಿವರ್ತನೆಯನ್ನು ನೀಡಿದೆ. ಸಾಹಿತ್ಯ ನಿಂತ ನೀರಲ್ಲ ಅದೊಂದು ಸೃಜನಶೀಲ ಕ್ರಿಯೆ. ಇಂತಹ ಸಾಹಿತ್ಯ ಸೃಷ್ಟಿಕ್ರಿಯೆಯಲ್ಲಿ, ಆಲೋಚನೆಯಲ್ಲಿ ಭಾಷಾಬಳಕೆಯಲ್ಲಿ ಹೊಸತನವನ್ನು ಹುರುಪನ್ನು ನೀಡಿದೆ. ಬ್ರಿಟಿಷರ ಆಡಳಿತಕ್ಕೊಳಪಟ್ಟ ಭಾರತದಲ್ಲಿ ಕ್ರೈಸ್ತ ಮಿಷನರಿಗಳು (ಧರ್ಮಕ್ಕೂ ಪ್ರಚಾರಕ್ಕಾಗಿ) ಕೈಗೊಂಡ

ಸಾಹಿತ್ಯಕಾರ್ಯ ಹಾಗೂ ಆಡಳಿತದ ಅನುಕೂಲಕ್ಕಾಗಿ ಬ್ರಿಟಿಷ್ ಅಧಿಕಾರಿಗಳು ಕೈಗೊಂಡ ಮಹತ್ತರ ಕಾರ್ಯಗಳು ಸಾಹಿತ್ಯದ ಅಭಿವೃದ್ಧಿಗೆ, ಹೊಸತನಕ್ಕೆ ನಾಂದಿ ಹಾಡಿವೆ. ಆದ್ದರಿಂದ ಭಾರತೀಯ ಭಾಷಾ ಸಾಹಿತ್ಯವೆಲ್ಲವೂ ಹೊಸತನವನ್ನು ಪಡೆದುಕೊಂಡಿತು. ಈ ರೀತಿಯ ಸಾಹಿತ್ಯದ ಪರಿವರ್ತನೆಗೆ ಆಂಗ್ಲ ಸಾಹಿತ್ಯ ಕಾರಣವೆಂದು ಹೇಳಬಹುದು.

'ಕನ್ನಡ ಕಾದಂಬರಿಯ ಉಗಮದ ಸಾಂಸ್ಕೃತಿಕ ಹಿನ್ನಲೆ' ಎಂಬ ಪ್ರಬಂಧದಲ್ಲಿ ದಾಮೋದರರಾವ್ ಅವರು ಕನ್ನಡ ಸಾಹಿತ್ಯದ ಮೇಲಾದ ಪಾಶ್ಚಾತ್ಯ ಪ್ರಭಾವವನ್ನು ಹಾಗೂ ಅದರ ಸಂಸ್ಕೃತಿಕ ಹಿನ್ನೆಲೆಯನ್ನು ಹೀಗೆ ಗುರುತಿಸಿದ್ದಾರೆ. "ಕನ್ನಡದಲ್ಲಿ ಕಾದಂಬರಿಯು ಹತ್ತೊಂಬತ್ತನೆಯ ಶತಮಾನದ ಕೊನೆಯ ದಶಕದಲ್ಲಿ ಮೂಡಿಬಂತು. ಎಂಬುದು ನಿಜವಾದರೆ ಅದು ಹುಟ್ಟಿದ ರೀತಿಯನ್ನು ನಮ್ಮ ಸಂಸ್ಕೃತಿಯು ಕಳೆದ ಶತಮಾನದ ದ್ವಿತೀಯಾರ್ಧದಲ್ಲಿ ಅವಸ್ಥಾಂತರಗೊಂಡಿರುವ ಪ್ರಕ್ರಿಯೆಯಲ್ಲಿ ಗುರುತಿಸಬೇಕಾಗುತ್ತದೆ. ಆ ಕಾಲಮಾನದಲ್ಲಿ ಕರ್ನಾಟಕದಲ್ಲಿ ಜನಜೀವನದ ರೂಪಾಂತರವೂ ಅಖಿಲ ಭಾರತದ ಧಾಟಿಯಲ್ಲಿಯೇ ಆಗಿರುವುದರಿಂದ ಈ ಪ್ರಶ್ನೆಯನ್ನು ಮೊದಲು ರಾಷ್ಟ್ರೀಯ ಶಾಸ್ತ್ರೀಯ ಹಿನ್ನೆಲೆಯಲ್ಲಿ ನೋಡುವುದು ಸೂಕ್ತ.[4]"

೧೮೫೭ರ ಸ್ವಾತಂತ್ರ್ಯ ಸಂಗ್ರಾಮ ವಿಫಲವಾದ ಆನಂತರ ಬ್ರಿಟಿಷರು ಭಾರತದ ಆಡಳಿತವನ್ನು ನೇರವಾಗಿ ಅಥವಾ ಪರೋಕ್ಷವಾಗಿ ವಹಿಸಿಕೊಂಡಮೇಲೆ ಇಂಗ್ಲಿಷ್‌ನ ಯಶಸ್ಸಿನ ಮಾದರಿ ಜನರ ಮುಂದೆ ಇತ್ತು. ಆಗಿನ ಬೆಳವಣಿಗೆಯನ್ನು ಗಮನಿಸುತ್ತಿದ್ದವರಲ್ಲಿ ಕಾರ್ಲ್‌ಮಾರ್ಕ್ಸ್ ಕೂಡ ಒಬ್ಬ. ಪೌರ್ವಾತ್ಯ ಸಮಾಜವನ್ನು ನಿರ್ನಾಮ ಮಾಡುವ ಮತ್ತು ಏಷಿಯಾದಲ್ಲಿ ಪಾಶ್ಚಾತ್ಯ ಸಮಾಜದ ನಿರ್ಮಾಣಕ್ಕೆ ಅಡಿಗಲ್ಲು ಹಾಕುವ ಮಹತ್ತರ ಕಾರ್ಯಗಳನ್ನು ಇಂಗ್ಲೆಂಡ್ ನೆರವೇರಿಸುತ್ತದೆಯೆಂದು ಅವನು ಸ್ಪಷ್ಟವಾಗಿ ಹೇಳಿದ. ಆದರೆ ಮಾರ್ಕ್ಸ್‌ನ ಹೇಳಿಕೆಯಂತೆ ಈವರೆಗೆ ಏಷಿಯಾಟಿಕ್ ಸೊಸೈಟಿ ನಿರ್ನಾಮವಾಗಿಲ್ಲ. ಆದರೆ ಹೊಸ ಶಿಕ್ಷಣ ಮತ್ತು ಔದ್ಯಮೀಕರಣದ ಮೂಲಕ ಭಾರತೀಯರ ಬದುಕು ತಿರುವು ಕಂಡಿರುವುದಂತೂ ಸತ್ಯ. ಇದಕ್ಕೆ ಕಾರಣ ಇಂಗ್ಲಿಷ್ ಶಿಕ್ಷಣ ಪದ್ಧತಿ, ಈ ದೃಷ್ಟಿಯಿಂದಲೂ ೧೮೫೭ ಮಹತ್ವದ ವರ್ಷ. ಕಾರಣ ಆ ವರ್ಷ ಕಲ್ಕತ್ತಾ, ಮುಂಬೈ, ಮದ್ರಾಸ್ ವಿಶ್ವವಿದ್ಯಾಲಯಗಳು ಅಸ್ತಿತ್ವಕ್ಕೆ ಬಂದು ದೇಶೀಯ ಶಿಕ್ಷಣ ಸೋಲನ್ನೊಪ್ಪಬೇಕಾಯಿತು. ಪಾಶ್ಚಾತ್ಯ ಶಿಕ್ಷಣದ ಫಲವಾಗಿ ಐತಿಹಾಸಿಕ ಮತ್ತು ವೈಯಕ್ತಿಕ ವಿಚಾರ ಸರಣಿ ಶಿಕ್ಷಿತ ಮಧ್ಯಮವರ್ಗ ಇವು ಪಾಶ್ಚಾತ್ಯ ಶಿಕ್ಷಣದ ಫಲವಾಗಿ ಬಂದವು. ಒಂದೆಡೆ ಮಿಷನರಿಗಳ ಮತಾಂತರ ಮತ್ತೊಂದೆಡೆ ಅವು ಮಾಡಿದ ಹಿಂದೂ ಧರ್ಮದ ಟೀಕೆ ಭಾರತೀಯರಲ್ಲಿ ಸ್ವ ವಿಮರ್ಶಾಭಾವವನ್ನು ಬೆಳೆಸಿದವು. ಹಿಂದೂ ಸಂಸ್ಕೃತಿಯ ಪುನರ್ ವಿಮರ್ಶೆಯ ಅಗತ್ಯವನ್ನು ಬ್ರಹ್ಮಸಮಾಜ ಮತ್ತು ಆರ್ಯಸಮಾಜಗಳು ಒಪ್ಪಿಕೊಂಡವು. ಇವುಗಳೊಂದಿಗೆ ಶ್ರೇಷ್ಠ ಕಾದಂಬರಿಯ ಸೃಷ್ಟಿಗೆ ಅಗತ್ಯವಾದ ಮಾನವತಾ ದೃಷ್ಟಿಕೋನ, ವಿಮರ್ಶೆಗೆ ತನ್ನನ್ನು ತೆರೆದುಕೊಳ್ಳುವ ಮುಕ್ತಧೋರಣೆ ಇಂತಹ ಮನಃಸ್ಥಿತಿ ಹೀಗೆ ಕಳೆದ

ಶತಮಾನದ ಉತ್ತರಾರ್ಧದಲ್ಲಿ ಬ್ರಿಟಿಷರ ಯಶಸ್ಸಿನ ಕತೆಗೆ ಭಾರತೀಯರು ಪ್ರತಿಸ್ಪಂದಿಸಿದ ಕ್ರಿಯೆಯ ಗತಿವಿನ್ಯಾಸದಲ್ಲಿ ಪ್ರಥಮವಾಗಿ ಬಂಗಾಳದಲ್ಲಿ ಮೂಡಿಬಂತು.

ಬ್ರಿಟಿಷರ ಆಡಳಿತದ ವೈಖರಿ ಅವರ ಧೋರಣೆ ಭಾರತೀಯರಲ್ಲಿ ಹಾಗೆಯೇ ಕನ್ನಡಿಗರಲ್ಲಿಯೂ ಜಾಗೃತಿಯನ್ನು ಮೂಡಿಸಿತು.

ಬ್ರಿಟಿಷರು ಕೈಗೊಂಡ ಕಾರ್ಯಗಳು ಪರೋಕ್ಷವಾಗಿ ಜನಜೀವನದ ಮೇಲೆ ಪ್ರಭಾವ ಬೀರಿದವು ಹಾಗೇ ಜನತೆ ಪಾಶ್ಚಾತ್ಯ ಮಾದರಿಯನ್ನು ಅನುಸರಿಸದೆ ಸ್ವತಂತ್ರವಾಗಿ ಆಲೋಚನೆ ಮಾಡುವ ದೃಷ್ಟಿಕೋನವನ್ನು ಬೆಳಸಿಕೊಂಡರು. ಇಂಗ್ಲಿಷ್ ಶಿಕ್ಷಣದಿಂದಾಗಿ ವಿದ್ಯಾವಂತ ಹಾಗೂ ಬುದ್ಧಿವಂತ ವರ್ಗದ ಆಲೋಚನೆಗಳು ಬದಲಾದವು. ಅಂತಹ ರಚನಾತ್ಮಕ ಬೆಳವಣಿಗೆಯ ಪ್ರತಿಸ್ಪಂದನಕ್ಕೆ ಆ ಸಂದರ್ಭದಲ್ಲಿದ್ದ ಸಾಂಸ್ಕೃತಿಕ ಹಿನ್ನೆಲೆಯೂ ಪ್ರಮುಖವಾದ ಕಾರಣವೆಂದು ಹೇಳಬಹುದು.

ಹದಿನೆಂಟನೆ ಶತಮಾನದ ವೇಳೆಗಾಗಲೇ ಪಾಶ್ಚಾತ್ಯ ಸಾಹಿತ್ಯದ ಪ್ರಭಾವ ಹಾಗೂ ಕೈಗಾರಿಕಾಕ್ರಾಂತಿಯ ಪರಿಣಾಮದಿಂದಾಗಿ ಗದ್ಯಪ್ರಕಾರ ಬೆಳೆಯ ತೊಡಗಿತ್ತು. ಪಾಶ್ಚಾತ್ಯ ಕಾದಂಬರಿಗಳು ಪ್ರಭಾವ ಬೀರುವುದಕ್ಕಿಂತಲೂ ಮುಂಚೆಯೇ ಕಾದಂಬರಿಯೆಂದು ಹೇಳಬಹುದಾದ ಸ್ವತಂತ್ರ ಕೃತಿಗಳು ಕನ್ನಡದಲ್ಲಿ ರಚಿತವಾಗಿದ್ದವು. ಯಾದವನ 'ಕಲಾವತಿ ಪರಿಣಯ' (೧೮೧೫) ಮುಮ್ಮಡಿ ಕೃಷ್ಣರಾಜ ಒಡೆಯರ 'ಸೌಗಂಧಿಕಾ ಪರಿಣಯ' (೧೮೨೧) ಮತ್ತು ಕೆಂಪುನಾರಾಯಣನ 'ಮುದ್ರಾಮಂಜೂಷ' (೧೮೨೩)– ಆರಂಭದಲ್ಲಿ ಮೂಡಿಬಂದ ಈ ರಮ್ಯ ಕಥಾನಕಗಳು ಕಾದಂಬರಿಯ ಮೊದಲ ಹೆಜ್ಜೆಗಳೆಂದೇ ಹೇಳಬಹುದಾಗಿದೆ. ಆರಂಭದ ಈ ಗದ್ಯಕೃತಿಗಳಲ್ಲಿ ಕವಿಸಮಯ, ವೀರ, ಶೃಂಗಾರಾದಿ ರಸಗಳು, ದೇವದಾನವರನ್ನು ಒಳಗೊಂಡ ಅಲೌಕಿಕ ಪಾತ್ರಗಳು, ಅಲಂಕಾರಯುಕ್ತವಾದ ವರ್ಣನೆಗಳು ಧಾಳಾಗಿ ಕಂಡುಬರುತ್ತವೆ. ಪದ್ಯವನ್ನು ಬಿಟ್ಟು ಹಳಗನ್ನಡ ಗದ್ಯದತ್ತ ಒಲಿದ ಈ ಲೇಖಕರ ಶೈಲಿಯು ಅವರ ಅಭಿವ್ಯಕ್ತಿ ಸ್ವೋಪಜ್ಞತೆಗೆ ಸಾಕ್ಷಿ. ಇವುಗಳನ್ನು ಕಾದಂಬರಿಯೆಂದು ಕರೆಯುವಲ್ಲಿ ಭಿನ್ನವಾದ ಅಭಿಪ್ರಾಯಗಳಿರಬಹುದಾದರೂ ಆರಂಭದಲ್ಲಿ ಮೂಡಿಬಂದ ಸಾಂಪ್ರದಾಯಿಕ ಶೈಲಿಯ ಗದ್ಯ ಕಥಾನಕಗಳೆಂದು ಕರೆಯಬಹುದಾಗಿದೆ. ಏನೇ ಇರಲಿ ಕನ್ನಡದಲ್ಲಿ ಕಾದಂಬರಿ ತನ್ನ ಹೆಜ್ಜೆಯನ್ನಿಡುವ ಮುನ್ನವೇ ಗದ್ಯದ ಬರವಣಿಗೆಯನ್ನು ಹದಗೊಳಿಸಿದ ಶ್ರೇಯಸ್ಸು ಮೇಲಿನ ಮೂರು ಕೃತಿಗಳಿಗೆ ಸಲ್ಲುತ್ತದೆ.

"ಇಂಗ್ಲಿಷ್ ಭಾಷೆಯ ಸಂಪರ್ಕದ ಗಂಧವೂ ಇಲ್ಲದಿದ್ದ ಕಾಲದಲ್ಲಿ ಸ್ವತಂತ್ರವಾಗಿ ರಚಿತವಾದ ಸತ್ವಪೂರ್ಣ ಕಥಾನಕಗಳಿವು"[5]. ಎನ್ನುವ ಡಿ.ಆರ್.ನಾಗರಾಜ್ ಅವರ ಹೇಳಿಕೆ ಯುಕ್ತವಾದ ವಿಶ್ಲೇಷಣೆಯೇ ಆಗಿದೆ.

ಹೊಸಗನ್ನಡದ ಮುಂಗೋಳಿ ಎಂಬ ಬಿರುದಿಗೆ ಪಾತ್ರನಾದ ಮುದ್ದಣ (ಕ್ರಿ.ಶ: ೧೮೭೯–೧೯೦೮) ಹಳೆಯ ಮತ್ತು ಹೊಸ ಸಂಧಿಸಮಯಗಳ ಸಂಕೇತ. ಈತ "ಪದ್ಯಂ ವಧ್ಯಂ ಗದ್ಯಂ ಹೃದ್ಯ" ಎಂದು ಸಾರಿ ಗದ್ಯದಲ್ಲಿಯೇ ಕೃತಿ ರಚಿಸತೊಡಗಿದನು. ಮುದ್ದಣನಿಗೆ ಸದ್ಯದ ಸಾಹಿತ್ಯವು ಕ್ರಮಿಸಬೇಕಾದ ಮಾರ್ಗದ ಬಗ್ಗೆ ಸ್ಪಷ್ಟವಾದ ಕಲ್ಪನೆಯಿದ್ದುದು ಸ್ಪಷ್ಟವಾಗಿ ಕಂಡುಬರುತ್ತದೆ. ಈತನ ತಿಳಿಯಾದ ಹಳಗನ್ನಡ ಹಾಗೂ ಹೊಸಗನ್ನಡ ಪ್ರಯೋಗಗಳಲ್ಲಿ ಪ್ರಸನ್ನವಾದ ಗದ್ಯದ ಹೊಳಹುಗಳನ್ನು ಗುರುತಿಸಬಹುದು. 'ಗೋದಾವರಿ' ಎಂಬ ಕಾದಂಬರಿಯ ಪರಿಚ್ಛೇದ ದೊರಕಿದ್ದು,ಅದರಲ್ಲಿ ಗದ್ಯವನ್ನು ಹದಗೊಳಿಸುವ ಆಂತರಿಕ ಅಭೀಪ್ಸೆಗೆ ಮಾರ್ಗವೊಂದು ತೆರೆದಂತೆ ಕಾಣುತ್ತದೆ. ಅದನ್ನು ಮುಗಿಸುವಷ್ಟು ಆಯಸ್ಸು ಆತನಿಗಿರಲಿಲ್ಲ. ಆದರೂ ಅವನ ಪ್ರಯತ್ನ ಮುಂದಿನ ಬರಹಗಳಿಗೆ ಮಾರ್ಗಸೂಚಿಯಾಯಿತು ಎಂದು ಹೇಳಿದರೆ ತಪ್ಪಾಗುವುದಿಲ್ಲ.

**೧.೨. ಕಾದಂಬರಿಗಳ ಅನುವಾದ :**

ಹೀಗೆ ಬ್ರಿಟಿಷ್ ಆಡಳಿತದಿಂದ ಬಂದ ಹೊಸ ಶಿಕ್ಷಣ ಕ್ರಮದಿಂದ ಪ್ರಭಾವಿತಗೊಂಡ ಒಂದು ವರ್ಗ ಇಂಗ್ಲಿಷ್‌ನಿಂದ ಕನ್ನಡಕ್ಕೆ ಕಾದಂಬರಿಗಳನ್ನು ಅನುವಾದಿಸತೊಡಗಿದರು. ಅಂದರೆ ಕನ್ನಡದಲ್ಲಿ ಸ್ವತಂತ್ರ ಕಾದಂಬರಿಗಳು ಮೂಡಿಬರುವುದಕ್ಕಿಂತ ಮುಂಚೆ ಅನುವಾದ (ರೂಪಾಂತರ) ಮಾದರಿ ಸಿದ್ದವಾಗಿತ್ತು. ಇಂಗ್ಲಿಷ್‌ನಿಂದ ಮೊಟ್ಟಮೊದಲ ಬಾರಿಗೆ ಕನ್ನಡಕ್ಕೆ ಅನುವಾದಿತವಾದ ಗ್ರಂಥವೆಂದರೆ ಜಾನ್ ಬನ್ಯನ್‌ನ 'ದಿ ಪಿಲಿಗ್ರಿಮ್ಸ್ ಪ್ರೊಗ್ರೆಸ್' ಇದನ್ನು ಹರ್ಮನ್ ಮೊಗ್ಲಿಂಗ್ ೧೮೪೭ರಲ್ಲಿ 'ಯಾತ್ರಿಕನ ಸಂಚಾರ'ವೆಂಬುದಾಗಿ ಅನುವಾದಿಸಿದನು. ಈ ಕಾದಂಬರಿ ಎರಡು ಭಾಗಗಳನ್ನು ಹೊಂದಿದ್ದು,ಇದರಲ್ಲಿ ೨೦ ಅಧ್ಯಾಯಗಳಿವೆ. ಈ ಕೃತಿಯಲ್ಲಿ ಬರುವ ಪಾತ್ರಗಳೆಲ್ಲ ಭಾರತದ ವಿವಿಧ ಪಂಗಡಗಳ ಜನರಿಂದ ಪ್ರಾತಿನಿಧ್ಯವನ್ನು ಪಡೆದಂಥವುಗಳಾಗಿವೆ. ಆ ಎಲ್ಲ ಪಾತ್ರಗಳ ಮೇಲೂ ಕ್ರೈಸ್ತಯ್ಯನೆಂಬ ಪಾತ್ರವು ತನ್ನ ಪ್ರಭಾವವನ್ನು ಬೀರುತ್ತದೆ. ಭಾರತದ ಯಾವುದೇ ಪಂಗಡದಲ್ಲಿ ಆಚರಣೆಯಲ್ಲಿರಬಹುದಾದ ನಂಬಿಕೆ ಸಂಪ್ರದಾಯಗಳನ್ನು ಇಲ್ಲಿ ಟೀಕಿಸಿ, ಕ್ರೈಸ್ತಧರ್ಮ ಹಾಗೂ ಶಿಲುಬೆ ಮೊದಲಾದವುಗಳೇ ಉತ್ತಮವಾದವುಗಳೆಂದು ಪ್ರತಿಪಾದಿಸಲಾಗಿದೆ. ಇದರಲ್ಲಿ ಕುರಾನ್ ಗ್ರಂಥವನ್ನು ಟೀಕಿಸಲಾಗಿದೆ. ಧರ್ಮಬೋಧೆಯನ್ನು ಪ್ರತ್ಯಕ್ಷವಾಗಿ ಮಾಡಿಲ್ಲ. ಅಲ್ಲಲ್ಲಿ ಚೌಪದಿಗಳನ್ನು, ಷಟ್ಪದಿಗಳನ್ನೂ ಬಳಸಲಾಗಿದೆ. ಇಂಗ್ಲಿಷ್‌ನಿಂದ ಅನುವಾದಗೊಂಡ ಮೊದಲ ಗ್ರಂಥವೆಂಬುದೊಂದೇ ಇದರ ವೈಶಿಷ್ಟ್ಯ. ಅನಂತರ ಇಂಗ್ಲಿಷ್ ಭಾಷೆಯಲ್ಲಿ ಕಾದಂಬರಿಯೆಂದು ಗುರುತಿಸಬಹುದಾದ ಸಂಪೂರ್ಣವಾಗಿ ಲೌಕಿಕ ದೃಷ್ಟಿಯಿಂದ ಪ್ರೇರಿತವಾದ ಮೊದಲ ಕೃತಿಯೆಂದರೆ ಡೇನಿಯಲ್ ಡೆಫೋನ 'ರಾಬಿನ್‌ಸನ್ ಕ್ರೂಸೊ' (೧೭೧೯), ಇದನ್ನುಎಸ್.ಬಿ.ಕೃಷ್ಣಸ್ವಾಮಿ ಐಯ್ಯಂಗಾರ್ ಕನ್ನಡಕ್ಕೆ ಅನುವಾದಿಸಿದ್ದಾರೆ. ಈ ಕೃತಿ ೧೮೫೭ರ ವೇಳೆಗೆ ಅನುವಾದಗೊಂಡಿತು. ಎಚ್. ಟೆಲರನ 'ಎ ಸಿಸಿಲಿಯನ್ ಸಮ್ಮರ್' ಎಂಬ ಕೃತಿಯನ್ನು ಶ್ರೀಕಂಠೇಶಗೌಡ ಅವರು 'ಕನ್ಯಾವಿತಂತು' ಎಂಬುದಾಗಿ ಅನುವಾದಿಸಿದ್ದಾರೆ. ಥಾಮಸ್ ಡೇ ಅವರ

'ದಿ ಹಿಸ್ಟರಿ ಆಫ್ ಸ್ಯಾಂಡ್ ಪರ್ಡ್ ಅಂಡ್ ಮಾರ್ಟಿನ್' ಎಂಬ ಕೃತಿಯನ್ನು ೧೮೯೭ರಲ್ಲಿ 'ಸುಮತಿ ಮದನಕುಮಾರ ಚರಿತೆ' ಎಂಬುದಾಗಿ ಎಂ.ಎಸ್. ಪುಟ್ಟಣ್ಣ ಅನುವಾದಿಸಿದ್ದಾರೆ. ಪ್ರಸಿದ್ಧ ಫ್ರೆಂಚ್ ಕಾದಂಬರಿಕಾರ ಅಲೆಕ್ಸಾಂಡರ್ ಡ್ಯೂಮ್‌ನ 'ದಿ ಕೌಂಟ ಆಫ್ ಮಾಂಟೆಕ್ರಿಸ್ಟೋ' ಎಂಬ ಕೃತಿ ರಾಜಾ ಮಲಯಸಿಂಹ ಎಂಬುದಾಗಿ ಎ.ಎ.ಶ್ರೀನಿವಾಸಾಚಾರ್ಯರು ಅನುವಾದಿಸಿದ್ದಾರೆ. ಹೀಗೆ ಇನ್ನೂ ಅನೇಕ ಪಾಶ್ಚಾತ್ಯ ಕಾದಂಬರಿಗಳು ಕನ್ನಡಕ್ಕೆ ಅನುವಾದಗೊಂಡಿವೆ.

**ಮರಾಠಿಯಿಂದ ಅನುವಾದಗೊಂಡ ಕಾದಂಬರಿಗಳು :** ೧೮೫೭ರ ವೇಳೆಗೆ ಮರಾಠಿಯಲ್ಲಿ ಕಾದಂಬರಿ ಸಾಹಿತ್ಯ ರೂಪುಗೊಂಡಿತು. ಬಾಬಾ ಪದಮಂಜಿಯವರು ರಚಿಸಿದ 'ಯಮುನಾಪರ್ಯಟನ'ವೇ ಮೊದಲ ಕೃತಿ ಇದನ್ನು ೧೮೯೯ ರಲ್ಲಿ ಭಾಸ್ಕರ ಸುಲೋಮನ್ ಅವರು 'ಯಮುನಾಬಾಯಿಯ ಸಂಚಾರ' ಎಂಬುದಾಗಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಮರಾಠಿಯಿಂದ ಕನ್ನಡಕ್ಕೆ ಅನುವಾದಗೊಂಡ ಮೊಟ್ಟಮೊದಲ ಕಾದಂಬರಿಯಿದು. ಈ ಕಾದಂಬರಿಯಲ್ಲಿ ವಿಧವೆಯರ ಅವಸ್ಥೆ ಅವರ ಸುಧಾರಣೆ, ಕೊನೆಯಲ್ಲಿ ಕ್ರೈಸ್ತಧರ್ಮಕ್ಕೆ ಮತಾಂತರ ಹೊಂದುವುದು ಮುಂತಾದ ವಿವರಗಳು ಬರುತ್ತವೆ. ಮರಾಠಿಯಿಂದ ಕನ್ನಡಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಕಾದಂಬರಿಗಳನ್ನು ಅನುವಾದ ಮಾಡಿದವರೆಂದರೆ ಗಳಗನಾಥರು. ಅವರು ಅನುವಾದಿಸಿದ ಕೃತಿಯೆಂದರೆ ಹರಿನಾರಾಯಣಅಪಟೆಯವರ 'ಗಢ್‌ಆಲಾಪಣ್‌ಸಿಂಹಗೇಲಾ' ಇದನ್ನು 'ಕಮಲಕುಮಾರಿ' ಎಂಬುದಾಗಿ ಅನುವಾದಿಸಿದ್ದಾರೆ. ಜನತೆಯಲ್ಲಿ ದೇಶಾಭಿಮಾನವನ್ನು ಉಕ್ಕಿಸಬೇಕಾದರೆ ಚಾರಿತ್ರಿಕ ಮಹಾಪುರುಷರ ರೋಚಕ ಸಾಹಸಗಳನ್ನು ಮನಮುಟ್ಟುವಂತೆ ಹೇಳಬೇಕು ಎಂಬ ತತ್ವವನ್ನು ಗಳಗನಾಥರು ಅಂದಿಗೇ ಮನಗಂಡಿದ್ದರು. ಗಳಗನಾಥರು ಮರಾಠಿಯಿಂದ ಪ್ರೇರಿತರಾಗಿ ಅನೇಕ ಕೃತಿಗಳನ್ನು ರಚಿಸಿದ್ದಾರೆ ಹಾಗೂ ರೂಪಾಂತರ ಮಾಡಿದ್ದಾರೆ. ಅಲ್ಲದೆ ಕುರುಕ್ಷೇತ್ರ, ಈಶ್ವರೀಸೂತ್ರ, ಛತ್ರಪತಿ, ಮರಾಠರಅಭ್ಯುದಯ, ರಾಣರಾಜಸಿಂಹ, ಧಾರ್ಮಿಕ ತೇಜ ಮೊದಲಾದ ಐತಿಹಾಸಿಕ ಕಾದಂಬರಿಗಳನ್ನು ಅನುವಾದಿಸಿದ್ದಾರೆ. ಆದರೆ ಸಾಮಾಜಿಕ ಕಾದಂಬರಿಗಳನ್ನು ಅನುವಾದ ಮಾಡಲಿಲ್ಲ. ಇದಕ್ಕೆ ಐತಿಹಾಸಿಕ ಸಂದರ್ಭವೂ ಕಾರಣವಾಗಿರಬಹುದು.

ಭಾರತೀಯ ಸಾಹಿತ್ಯದಲ್ಲಿ ಮೊತ್ತಮೊದಲಿಗೆ ಆಧುನಿಕತೆ ಪ್ರವೇಶಿಸಿದ್ದು ಬಂಗಾಳಿ ಸಾಹಿತ್ಯದಲ್ಲಿ ಹದಿನೆಂಟನೆ ಶತಮಾನದ ಉತ್ತರಾರ್ಧದಲ್ಲಿ ಬಂಗಾಳಿಯಲ್ಲಿ ಆಧುನಿಕ ಗದ್ಯದ ಮೂಲವನ್ನು ಕಾಣಬಹುದು. ಬಂಗಾಳಿಯಲ್ಲಿ ಬಂದ ಮೊತ್ತಮೊದಲ ಕಾದಂಬರಿ ಬಂಕಿಮಚಂದ್ರರ 'ದುರ್ಗೇಶನಂದಿನಿ'ಯನ್ನು ಬಿ.ವೆಂಕಟಾಚಾರ್ಯರು ೧೮೮೫ರಲ್ಲಿ ಕನ್ನಡಕ್ಕೆ ಅನುವಾದಿಸಿದ್ದಾರೆ, ಬಂಗಾಳಿಯಿಂದ ಕನ್ನಡಕ್ಕೆ ಅನುವಾದಗೊಂಡ ಮೊದಲ ಕಾದಂಬರಿಯಿದು. ಬಿ.ವೆಂಕಟಾಚಾರ್ಯರು ೧೯೦೦ರ ವೇಳೆಗೆ 'ಆನಂದಮಠ', 'ದೇವಿಚೌಧುರಾಣಿ' 'ರಜನಿ', 'ವಿಷವೃಕ್ಷ', ಮೊದಲಾದ ಕಾದಂಬರಿಗಳನ್ನು ಅನುವಾದಿಸಿದರು. ಬಂಕಿಮರ 'ಕಪಾಲ ಕುಂಡಲಾ',

'ಮೃಣಾಲಿನಿ', 'ಚಂದ್ರಶೇಖರ' ಕೃತಿಗಳಲ್ಲಿ ಚಾರಿತ್ರಿಕವಾದ ಅಂಶಗಳಿಗೆ ಒತ್ತು ಕೊಡದೆ ಸ್ತ್ರೀಸಂವೇದನೆಗೆ ಹೆಚ್ಚಿನ ಒತ್ತು ಕೊಟ್ಟಿದ್ದಾರೆ. ಕಪಾಲ ಕುಂಡಲಾದಲ್ಲಿ ಸ್ತ್ರೀಯರಿಗೆ ಪಾತಿವ್ರತ್ಯವು ಎಷ್ಟು ಮಹತ್ವವಾದುದು ಎನ್ನುವ ವಿಚಾರವನ್ನು ಮೃಣಾಲಿನಿಯಲ್ಲಿ ಪ್ರೇಮ ಪ್ರಣಯಗಳು ಜೀವನದಲ್ಲಿ ವಹಿಸುವ ಪಾತ್ರ, 'ಕಪಾಲ ಕುಂಡಲಾ'ದಲ್ಲಿ ಸ್ತ್ರೀ ವಿದ್ಯಾಭ್ಯಾಸವನ್ನು ವಿರೋಧಿಸುವುದೂ ಕಂಡುಬರುತ್ತದೆ.

ತೆಲುಗಿನಲ್ಲಿ ೧೮೮೦ ರ ಸುಮಾರಿನಲ್ಲಿ ಕಾದಂಬರಿಗಳ ರಚನೆ ಆರಂಭವಾಗಿತ್ತು. ತೆಲುಗಿನಲ್ಲಿ ಮೊದಲ ಕಾದಂಬರಿಕಾರರೆಂದರೆ ವೀರೇಶಲಿಂಗಂ ಪಂತುಲು. ಇವರನ್ನು ಆಧುನಿಕ ತೆಲುಗು ಸಾಹಿತ್ಯದ ಪಿತಾಮಹಾನೆಂದು ಕರೆಯುತ್ತಾರೆ. ಇವರ ಅನೇಕ ಕೃತಿಗಳನ್ನು ಬೆನಗಲ್ ರಾಮರಾಯರು ಕನ್ನಡಕ್ಕೆ ಅನುವಾದಿಸಿದ್ದಾರೆ. ಮುಖ್ಯವಾದುವುಗಳೆಂದರೆ 'ಸತ್ಯರಾಜ', ಎಲ್ಲಾಕೃತಿಗಳಿಗೂ ಪೂರ್ವದೇಶಯಾತ್ರೆಗಳು' 'ರಾಜಶೇಖರ ಚರಿತ್ರೆ' 'ಸತ್ಯವತೀ ಚರಿತ್ರೆ' ಮುಂತಾದುವು. 'ಸತ್ಯರಾಜಾ 'ಪೂರ್ವದೇಶ' ಕೃತಿಯಲ್ಲಿ ವೀರೇಶಲಿಂಗಂ ಅವರ ಜೀವನ ಚರಿತ್ರೆಯನ್ನು ಸಂಕ್ಷೇಪವಾಗಿ ಕೊಡಲಾಗಿದೆ. ಕತೆಯನ್ನು ಉತ್ತಮ ಪುರುಷದಲ್ಲಿ ಹೇಳಲಾಗಿದೆ. ಅಲ್ಲಲ್ಲಿ ತಮಿಳು, ಹಿಂದುಸ್ಥಾನಿ ಭಾಷೆಗಳ ಬಳಕೆಯಾಗಿದೆ. ಕೆಲ ಮಡಿವಂತಿಕೆಗಳ ಪ್ರಸ್ತಾಪವಿದೆ. ರೆಂಚಾಲ ಸುಬ್ಬರಾಯರ 'ಆನಂದ ದೀಪಿಕ' 'ಹಾಗೂ 'ಕೇಸರಿ ವಿಲಾಸ'ಗಳು ಕನ್ನಡಕ್ಕೆ ಅನುವಾದ ಗೊಂಡಿವೆ. ೧೮೯೫ರಲ್ಲಿ ಅನುವಾದಗೊಂಡ 'ಕೇಸರಿ ವಿಲಾಸ'ವನ್ನು ವೆಂಕಟಶಾಸ್ತ್ರಿಗಳು, ರಾಯ್ಚೂರು ವಿಜಯ ಐತಿಹಾಸಿಕ ಕಾದಂಬರಿಯನ್ನು ಬಿ.ಕೃಷ್ಣಪ್ಪನವರು ಕನ್ನಡಕ್ಕೆ ಅನುವಾದಿಸಿದ್ದಾರೆ.

ಈ ರೀತಿ ಅನುವಾದದ ಜೊತೆಗೇನೆ ಸೃಜನಶೀಲ ಪ್ರವೃತ್ತಿಯನ್ನು ಮತ್ತು ವಾಚನಾಭಿರುಚಿಯನ್ನು ಜನತೆಯಲ್ಲಿ ಮೂಡಿಸಿದ ಕೀರ್ತಿ ಗಳಗನಾಥರು ಮತ್ತು ಬಿ.ವೆಂಕಟಾಚಾರ್ಯರಿಗೆ ಸಲ್ಲುತ್ತದೆ. ಇವರಿಬ್ಬರೂ ಮುಖ್ಯವಾಗಿ ಅನುವಾದಕರಾಗಿಯೇ ಕಾದಂಬರಿ ಕ್ಷೇತ್ರಕ್ಕೆ ತಮ್ಮ ಜೀವನವನ್ನು ಮುಡುಪಾಗಿಟ್ಟರು. ಅವರ ಅಂದಿನ ನಿಸ್ವಾರ್ಥ ಶ್ರಮದ ಫಲವಾಗಿ ಇಂದು ವೈವಿಧ್ಯಮಯ ಬೆಳವಣಿಗೆ. "ಚಿರಸ್ಮರಣೀಯರಾದ ಬಿ.ವೆಂಕಟಚಾರ್ಯರು, ಗಳಗನಾಥರು ಬಂಗಾಳಿ, ಮರಾಠಿ ಸಾಹಿತ್ಯ ಭಂಡಾರದಿಂದ ಬೆಲೆಯುಳ್ಳ ಕೃತಿಗಳನ್ನು ತಂದು ತೆರವಾಗಿದ್ದ ಕನ್ನಡ ಕಣಜವನ್ನು ರಾಸಿಯಾಗಿ ತುಂಬಿದರು. ಭಾಷಾಂತರಿತ ಕಾದಂಬರಿಗಳೇ ಹೊಸಗನ್ನಡದ ಮೊದಲಗಿತ್ತಿಯರಂತೆ ಮೆರೆದವು. ಹೊಸ ಅಭಿರುಚಿಗೆ ಅವೇ ಕಾರಣವಾದವು"[6]. ಎಂದು ರಂ.ಶ್ರೀ ಮುಗಳಿಯವರು ಹೇಳುವ ಮಾತು ಮರಾಠಿಯಿಂದ ಕನ್ನಡಕ್ಕೆ ಅನುವಾದಗೊಂಡ ಕಾದಂಬರಿಗಳಿಂದ ಕನ್ನಡ ಕಾದಂಬರಿ ಕ್ಷೇತ್ರ ವಿಸ್ತರಿಸಿದ್ದನ್ನು ತಿಳಿಸುತ್ತದೆ.

"ಈ ಅನುವಾದ ಕಾದಂಬರಿಗಳಲ್ಲಿ ಕೂಡ ಸಾಂಪ್ರದಾಯಕ ಚೌಕಟ್ಟಿಗೆ ಆತುಕೊಂಡ ಮನೋರಂಜನೆ, ನೀತಿ ಬೋಧನೆಯೇ ಕೃತಿಯ ಮುಖ್ಯ ಆಶಯವಾಗಿದೆ. ಈ ಧೋರಣೆ

ಮುಂದೆ ಬಂದ ಸ್ವತಂತ್ರ ಕೃತಿಗಳ ಮೇಲೂ ಪ್ರಭಾವ ಬೀರಿದೆ. ಆದರೆ ಹೊಸ ಯುಗಕ್ಕೆ ಕಾಲಿಟ್ಟಂತೆ, ಪಾಶ್ಚಾತ್ಯ ಸಾಹಿತ್ಯದ ಅಧ್ಯಯನ ಹೆಚ್ಚಾದಂತೆ ಕೃತಿಯ ಕಥಾಹಂದರಕ್ಕೆ ಒತ್ತುಕೊಡುವ ಪ್ರಯತ್ನಗಳು ನಡೆಯ ತೊಡಗಿದವು. ಅದರಿಂದ ಸಮಕಾಲೀನ ಜೀವನ ಕ್ರಮಗಳು ವ್ಯಕ್ತಿಗತವಾದ ಸುಖದುಃಖಗಳು, ಮಾನಸಿಕ ಹರ್ಷೋನ್ಮಾದಗಳು ಕಾದಂಬರಿಯನ್ನು ಪ್ರವೇಶಿಸಿದವು. ಇದರಿಂದ ಕಾದಂಬರಿಯ ದಿಕ್ಕೆ ಬದಲಾಯಿತು. ವಸ್ತು, ಶೈಲಿ, ಭಾಷೆ ದೃಷ್ಟಿಕೋನಗಳ ನಾವಿನ್ಯತೆಯಲ್ಲಿ ಕಾದಂಬರಿ ವೈವಿಧ್ಯಮಯವಾಗಿ ಬೆಳೆಯತೊಡಗಿತು"[7]. ಹೀಗೆ ಕನ್ನಡದಲ್ಲಿ ಸ್ವತಂತ್ರ ಕಾದಂಬರಿಗಳು ಆರಂಭವಾಗುವುದಕ್ಕಿಂತ ಮುಂಚೆ ಅನುವಾದ ಕಾದಂಬರಿಗಳು ಮೊಳಗಿ ಕನ್ನಡದಲ್ಲಿ ಸ್ವತಂತ್ರ ಕಾದಂಬರಿಗಳ ಉಗಮಕ್ಕೆ ಪ್ರೇರಕವಾಗಿವೆ.

**೧.೩.ಕಾದಂಬರಿ ಸಾಹಿತ್ಯದ ಸ್ವರೂಪ :**

'ಒಂದು ದೃಷ್ಟಿಯಿಂದ ಕಾದಂಬರಿ ಸಾಹಿತ್ಯರೂಪದ ಚರಿತ್ರೆ ದೀರ್ಘವಾದುದೇ. "ಕನ್ನಡದಲ್ಲಿ ಕಾದಂಬರಿ ಎಂಬ ಹೆಸರು ಪ್ರಚುರವಾದುದು ಬಹುಶಃ ಬಾಣನ ಕಾದಂಬರಿಯಿಂದ. ಬಾಣನ ಕಾದಂಬರಿ ಗದ್ಯದಲ್ಲಿ ರೂಪುಗೊಂಡಿರುವ ಸಂಕೀರ್ಣ ಕಥೆ. ಅದರಲ್ಲಿ ಕಾದಂಬರಿ, ಮಹಾಶ್ವೇತೆ,ಚಂದ್ರಾಪೀಡ, ಪುಂಡರೀಕ, ಕಪಿಂಜಲ, ಶೂದ್ರಕ ಮೊದಲಾದ ವ್ಯಕ್ತಿಗಳ ಜೀವನ ವೃತ್ತಾಂತ ನಿರೂಪಿತವಾಗಿದೆ. ಕೆಲವೇಳೆ ಕತೆ ಭೂಲೋಕದಿಂದ ಗಂಧರ್ವಲೋಕಕ್ಕೂ, ಇಂದಿನ ಜೀವನದಿಂದ ಮುಂದೆ ಮೂರು ಜನ್ಮಗಳಿಗೂ ಹರಿದಾಡುತ್ತದೆ. ಇಂಥದೇ ಕತೆಗಳನ್ನು ಕಾದಂಬರಿ ಎಂಬ ಸಾಮಾನ್ಯ ನಾಮದಿಂದ ಕರೆದಿರುವುದು ಉಚಿತವಾಗಿಯೇ ಇದೆ. ತೆಲುಗು ಮೊದಲಾದ ಭಾಷೆಗಳಲ್ಲಿ 'ನಾವೆಲ್', ನಾವೆಲು ಎಂಬ ಪದಗಳು ಬಳಕೆಯಲ್ಲಿವೆ. ಬಂಗಾಳಿ ಭಾಷೆಯಲ್ಲಿ ಕಾದಂಬರಿಯನ್ನು ಉಪನ್ಯಾಸವೆಂದು ಕರೆಯಲಾಗುತ್ತದೆ"[8] ಕಾದಂಬರಿಯೆಂಬ ಪದಕ್ಕೆ ಬಳಕೆಯಾಗುತ್ತಿದ್ದ ಪರ್ಯಾಯ ಪದಗಳೆಂದರೆ ಕನ್ನಡದಲ್ಲಿ "ವಚನಪ್ರಬಂಧ"ವೆಂದೂ, ತೆಲುಗಿನಲ್ಲಿ "ವಿಚಿತ್ರನೂತನ ಪ್ರಬಂಧ"ವೆಂದೂ ಅನಂತರ "ನವಲಾ"ವೆಂದು ಕರೆಯಲ್ಪಡುತ್ತಿದೆ. ಅನಂತರ "ನಲ್ಗತೆ," "ನೀಳ್ಗತೆ," ಎಂಬ ಪದಗಳೂ ಬಳಕೆಯಲ್ಲಿದ್ದವು. ಕೇರೂರು ವಾಸುದೇವಾಚಾರ್ಯರು "ನಲ್ಗತೆ' ಎಂಬ ಪದವನ್ನು 'ಇಂದಿರೆ'ಯಲ್ಲಿ ಬಳಸಿದ್ದಾರೆ. ಈ ಕೃತಿಯ ಹಿನ್ನುಡಿಯಲ್ಲಿ ರಂಗನಾಥ ಅವರು "ನವಕತೆ" ಎಂದು ಬಳಸಿದ್ದಾರೆ. "ನವನ್ಯಾಸ" ಎಂಬ ಮತ್ತೊಂದು ಪದವೂ ಬಳಕೆಯಾಗಿದೆ.

ಕನ್ನಡದ ಮೊದಲ ಕಾದಂಬರಿಯೆಂದರೆ ಬಾಣನ ಕಾದಂಬರಿಯ ರೂಪಾಂತರವೇ. ಸ್ವತಂತ್ರ ಕಾದಂಬರಿಗಳು ಹತ್ತೊಂಬತ್ತನೆ ಶತಮಾನದ ಈಚೆಗೆ ಬೇರೆ ಬೇರೆ ಭಾಷೆಗಳಿಂದ ಅನುವಾದಗೊಂಡ ಕಾದಂಬರಿಗಳೇ ಪ್ರೇರಣೆಯಾಗಿ ನಿಲ್ಲುತ್ತವೆ. ಆರಂಭದಲ್ಲಿ ರಚನೆಗೊಂಡ ಸ್ವತಂತ್ರ ಕಾದಂಬರಿಗಳೆಲ್ಲವೂ ಸ್ತ್ರೀಸಂವೇದನಾ ಪ್ರಧಾನವಾದ ಕಾದಂಬರಿಗಳೇ. ಸಮಾಜದ ಅಭಿವೃದ್ಧಿ ಹಿನ್ನೆಲೆಯಲ್ಲಿ ಸ್ತ್ರೀಯರ ಏಳ್ಗೆಯ ಧೋರಣೆ ಕಂಡುಬರುತ್ತದೆ. ಅಂದಿನ ಸಾಮಾಜಿಕ

ಸಮಸ್ಯೆಗಳನ್ನು ಚಿತ್ರಿಸುವಲ್ಲಿ ದಿಟ್ಟತನವಿದೆ. ಆರಂಭದಲ್ಲಿ ಮೂಡಿಬಂದ "ಕನ್ನಡ ಕಾದಂಬರಿಗಳಲ್ಲಿ ಎದ್ದು ಕಾಣುವ ಅಂಶಗಳೆಂದರೆ ಸಮಕಾಲೀನಪ್ರಜ್ಞೆ ಮತ್ತು ಸಾಮಾಜಿಕ ಕಳಕಳಿ. ಈ ಶತಮಾನದ ಆರಂಭದಲ್ಲಿ ನಮ್ಮ ಸಮಾಜದ ಜ್ವಲಂತ ಸಮಸ್ಯೆಗಳಾದ ಬಾಲ್ಯವಿವಾಹ, ವಿಧವಾವಿವಾಹ, ಮಠಾಧಿಪತಿಗಳ ಅನೈತಿಕತೆ ಮತ್ತು ನಿರಂಕುಶತೆ, ಅಧಿಕಾರಿ ವರ್ಗದ ದರ್ಪ ಹಾಗೂ ಸ್ವಾರ್ಥ–ಮುಂತಾದ ಸಮಸ್ಯೆಗಳಿಗೆ ಆರಂಭದ ಕಾದಂಬರಿಗಳು ಸ್ಪಂದಿಸುತ್ತವೆ. ಈ ಸ್ಪಂದನದ ಹಿಂದೆ ಪತಿತ ಸಮಾಜವನ್ನು ಎತ್ತುವ, ಚೊಕ್ಕಗೊಳಿಸುವ ಕಾಳಜಿಯಿದೆ"[9] ಎನ್ನುವ ಮಾತು ಆ ಸಂದರ್ಭದ ಕಾದಂಬರಿಗಳ ಸ್ಪಷ್ಟ ಹಾಗೂ ಖಚಿತವಾದ ವಿಶ್ಲೇಷಣೆಯಾಗಿದೆ. ಹೀಗೆ ಆರಂಭದಲ್ಲಿ ಮೂಡಿಬಂದ ಕಾದಂಬರಿಗಳೆಲ್ಲಾ ಸ್ತ್ರೀಸಂವೇದನೆಯನ್ನೊಳಗೊಂಡ ಕಾದಂಬರಿಗಳೆಂಬುದರಲ್ಲಿ ಅತಿಶಯೋಕ್ತಿಯಿಲ್ಲ.

ಅಧ್ಯಯನದ ಅನುಕೂಲಕ್ಕಾಗಿ ಆರಂಭದಲ್ಲಿ ಮೂಡಿ ಬಂದ ಕೆಲವು ಸ್ತ್ರೀಸಂವೇದನಾ ಕಾದಂಬರಿಗಳನ್ನಷ್ಟೇ ಚರ್ಚೆಗೆ ಎತ್ತಿಕೊಳ್ಳಲಾಗಿದೆ. ಈ ಕಾದಂಬರಿಗಳ ಕುರಿತಂತೆ ದೀರ್ಘವಾದ ವಿಶ್ಲೇಷಣೆಯನ್ನು ಪ್ರಬಂಧದ ಮೂರನೆ ಅಧ್ಯಾಯದಲ್ಲಿ "ಅದುವರೆಗಿನ ಸ್ತ್ರೀಪ್ರಧಾನ ಕನ್ನಡ ಕಾದಂಬರಿಗಳು" ಎಂಬುದರಲ್ಲಿ ಚರ್ಚೆ ಮಾಡಲಾಗುತ್ತದೆ. ಇಲ್ಲಿ ಆ ಕಾದಂಬರಿಗಳ ಬಗ್ಗೆ ಪರಿಚಯಾತ್ಮಕವಾದ ಕೆಲವು ಅಂಶಗಳನ್ನಷ್ಟೇ ಇಲ್ಲಿ ಉಲ್ಲೇಖಿಸುತ್ತೇನೆ. ಆರಂಭದಲ್ಲಿ ಸ್ವತಂತ್ರ ಕಾದಂಬರಿಗಳನ್ನು ರಚಿಸಿದವರೆಲ್ಲರೂ ಇಂಗ್ಲಿಷ್ ವಿದ್ಯೆ ಪಡೆದಂತಹವರೆ. ಇಂಗ್ಲಿಷ್ ಭಾಷೆಯಲ್ಲಿನ ಕಾದಂಬರಿಗಳಂತೆಯೇ ಕನ್ನಡದಲ್ಲೂ ರಚನೆ ಮಾಡಿದರು.

ಕನ್ನಡದಲ್ಲಿ ಮೊಟ್ಟಮೊದಲ ಸಾಮಾಜಿಕ ಸ್ವತಂತ್ರ ಕಾದಂಬರಿ ರಚಿಸಿದವರೆಂದರೆ ಗುಲ್ವಾಡಿ ವೆಂಕಟರಾಯರು 'ಇಂದಿರಾಬಾಯಿ'(೧೮೯೯) ಅಥವಾ 'ಸದ್ಧರ್ಮ ವಿಜಯ'. "ಆದರೆ ಇದಕ್ಕೂ ಮೊದಲು ೧೮೯೫ ರಲ್ಲಿ ಮದರಾಸ್ ಹೈಕೋರ್ಟಿನ ವಕೀಲರಾದ ಆಂಧ್ರಬ್ರಾಹ್ಮಣ ರೆಂಚಾಲ್ ವೆಂಕಟಸುಬ್ಬರಾವ್ ಬರೆದ 'ಕೇಸರಿವಿಲಾಸ' ಕನ್ನಡದ ಪ್ರಥಮ ಮೌಲಿಕ ಕಾದಂಬರಿ"[೧೦] ಯೆನ್ನುವ ಗೋವಿಂದಪೈ ಅವರ ಮಾತು ತ.ರಾಸು. ಅವರ ಸಂಸ್ಮರಣ ಸಂಪುಟವಾದ 'ಗಿರಿಮಲ್ಲಿಗೆ' ಕೃತಿಯಲ್ಲಿ ದು.ನಿಂ.ಬೆಳಗಲಿಯವರ ಲೇಖನವಾದ "ಕನ್ನಡ ಕಾದಂಬರಿ ಪ್ರಕಾರ ಮತ್ತು ತ.ರಾ.ಸು"ವಿನಲ್ಲಿ ಉಲ್ಲೇಖವಾಗಿದೆ. ತೆಲುಗಿನಿಂದ ಅನುವಾದಗೊಂಡ ಈ ಕೃತಿಯ ವಿಚಿತ್ರವೆಂದರೆ ವಿಚಿತ್ರನೂತನ ಪ್ರಬಂಧವೆಂದು ಕರೆಸಿಕೊಂಡ ಈ ಕೃತಿ ಅರ್ಧ ಸಾಮಾಜಿಕ ಅರ್ಧ ಐತಿಹಾಸಿಕವಾಗಿದೆ. ಹಾಗೆಯೇ ಮುಂದುವರೆದು ಬೆಳಗಲಿಯವರು ಇದೇ ಲೇಖನದಲ್ಲಿ ೧೮೯೨ರಲ್ಲಿ ಪ್ರಕಟಗೊಂಡ ಲಕ್ಷ್ಮಣ ಭೀಮರಾವ್ ಗದಗಕರ ಅವರ ಕಾದಂಬರಿ 'ಸೂರ್ಯಕಾಂತ'ವೇಪ್ರಥಮ ಸ್ವತಂತ್ರ ಕಾದಂಬರಿಯಾಗಿ ನಿಲ್ಲುತ್ತದೆಂದಿದ್ದಾರೆ. ಈ ಕಾದಂಬರಿ ಕೂಡ ಅರ್ಧ ಐತಿಹಾಸಿಕ ಅರ್ಧ ಸಾಮಾಜಿಕವಾಗಿದ್ದು ಕನ್ನಡದಲ್ಲಿ ಮೊದಲ ಕಾದಂಬರಿಯೆಂಬ ಪ್ರಯೋಗಕ್ಕೆ ನಿದರ್ಶನವೆನ್ನುತ್ತಾರೆ.

'ಇಂದಿರಾಬಾಯಿ' ಅಂದಿನ ಜೀವನದ ಲೋಪದೋಷಗಳನ್ನು ನಿರ್ಭೀತವಾಗಿ ಚಿತ್ರಿಸಿದ ಕೃತಿ. ಪರಂಪರಾನುಗತವಾಗಿ ನಡೆದುಕೊಂಡು ಬಂದ ಧಾರ್ಮಿಕ ವಿಧಿ ವಿಧಾನಗಳನ್ನು ಕಟ್ಟು ಕಟ್ಟಳೆಗಳನ್ನು ಅನುಸರಿಸುವ ಹಿರಿಯರ ಢಾಂಬಿಕತನ ಸಂಪ್ರದಾಯ ಧಿಕ್ಕರಿಸುವ ಯುವಕ, ಯುವತಿಯರು, ಸನಾತನ ಧರ್ಮಾಚರಣೆಯ ಮಠದ ವ್ಯವಸ್ಥೆ, ವಿಧವಾವಿವಾಹದಂತಹ ಕ್ರಾಂತಿಕಾರಕ ಬದಲಾವಣೆ ಸ್ವಾಮಿಗಳ ಕಪಟತನ, ಸಮಾಜದ ದುಷ್ಟಪದ್ಧತಿ ಹೋಗಲಾಡಿಸುವುದೇ ಕಾದಂಬರಿಕಾರರ ಉದ್ದೇಶ. ಒಟ್ಟಾರೆ ಸಮಾಜ ಸುಧಾರಣೆ ಮಾಡುವುದು. ಕಾದಂಬರಿಯಲ್ಲಿ ಬರುವ ಇಂದಿರಾಬಾಯಿಯ ಪಾತ್ರ ಸಂಪೂರ್ಣವಾಗಿ ಸಮಾಜದ ಕಟ್ಟುಪಾಡುಗಳಿಂದ ಬಿಡಿಸಿಕೊಂಡು ಆಧುನಿಕ ವಿದ್ಯೆ ಕಲಿತು ವಿಧವೆಯಾಗಿದ್ದರೂ ಕೂಡ ಹಿರಿಯರು ಮರುಮದುವೆಗೆ ಇಷ್ಟವಿದೆಯೇ ಎಂದು ಕೇಳಿದಾಗ ಮರು ಮಾತಾಡದೆ ಒಪ್ಪುತ್ತಾಳೆ. ಇಲ್ಲಿ ಮನರಂಜನೆಗಿಂತ ಮನಃ ಪರಿವರ್ತನೆ ಮುಖ್ಯವಾಗುತ್ತದೆ.

'ಇಂದಿರಾ ಬಾಯಿಯ' ನಂತರ ಬಂದ ಮತ್ತೊಂದು ಮಹತ್ವದ ಕೃತಿಯೆಂದರೆ ಬೋಳಾರ ಬಾಬುರಾಯರ 'ವಾಗ್ದೇವಿ' ೧೯೧೦ರಲ್ಲಿ ರಚನೆಗೊಂಡಿತು. ಗುಲ್ವಾಡಿಯವರ ಕಾದಂಬರಿಯಂತೆ ಇದೂ ಸಹ ಅಂದಿನ ಮಠಾದಿಪತಿಯೊಬ್ಬರ ಅನಾಚಾರವನ್ನು ಬಯಲುಗೊಳಿಸುವುದಾಗಿದೆ. ವಿಧವಾವಿವಾಹದಂತಹ ಕ್ರಾಂತಿಕಾರಕ ಘಟನೆಯನ್ನು ನಿರೂಪಿಸುವುದರೊಂದಿಗೆ ಸಮಾಜದ ಬದಲಾವಣೆಗೆ ಗುಲ್ವಾಡಿ ಪ್ರಯತ್ನಿಸಿದರೆ ಬಾಬುರಾಯರು ಅಂದಿನ ಸಮಾಜದ ಸ್ಥಿತಿಗತಿಯನ್ನು ಚಿತ್ರಿಸುವಲ್ಲಿ ನಿರ್ಲಿಪ್ತರಾಗುತ್ತಾರೆ. 'ಇಂದಿರಾಬಾಯಿ'ಯಲ್ಲಿ ಸಾರಸ್ವತ ಸಮಾಜದ ಚಿತ್ರಣವಿದ್ದರೆ 'ವಾಗ್ದೇವಿ'ಯಲ್ಲಿ ಮಾಧ್ವಸಮಾಜದ ಮಾಧ್ವ ಮಠದ ಚಿತ್ರಣವಿದೆ. ಆಸೆ ಬುರುಕರಾದ ತಂದೆ ತಾಯಿಗಳ ಸ್ವಾರ್ಥ ಹಾಗೂ ವಾಗ್ದೇವಿಯ ಸ್ವಾರ್ಥ, ದುರಾಸೆ, ಕಪಟತನ, ಕುತಂತ್ರ, ಕೊಲೆ, ಅಧಿಕಾರಕ್ಕಾಗಿ ಕಿತ್ತಾಟ, ಗೊಂದಲಗಳು ನಡೆಯುವದನ್ನು 'ವಾಗ್ದೇವಿ' ಕಾದಂಬರಿ ಚಿತ್ರಸುತ್ತದೆ. 'ವಾಗ್ದೇವಿ' ಸ್ವಹಿತ ಸಾಧಕಿಯಾಗಿ, ಅವಳ ಅನುಪಸ್ಥಿತಿಯಲ್ಲಿ ಕುಮುದಾಪುರ ವಾಸ್ತವಸ್ಥಿತಿಗೆ ಮರಳುವುದು ಇದು ವಾಗ್ದೇವಿಯ .ಪ್ರಾಬಲ್ಯವನ್ನು ತಿಳಿಸುತ್ತದೆ. "ಈ ಎಲ್ಲಾ ಕ್ರಿಯೆಗಳ ಹಿಂದೆ ಹೆಣ್ಣು ಮುಖ್ಯವೆಂಬುದನ್ನು ಲೇಖಕರು ಚಿತ್ರಿಸುತ್ತಾರೆ. ಸಮಕಾಲೀನ ಸಮಾಜದ ಚಿತ್ರಣವನ್ನು ಚಿತ್ರಿಸಿದ್ದಾರೆ. "ಈ ಕಾದಂಬರಿಯಲ್ಲಿ ಅಸಹಜವಾದದ್ದೆಂದರೆ ವಾಗ್ದೇವಿಯ ನಡವಳಿಕೆ, ಅವಳ ಪಾತ್ರಕಲ್ಪನೆಯಲ್ಲಿ ತುಂಬಿದ ನೂರೆಂಟು ಆಭಾಸಗಳು ಕತೆಯ ಉದ್ದೇಶವನ್ನು ಯಾವಾಗಲೂ ವಿಫಲವಾಗಿಸುತ್ತದೆ. ಪಾತ್ರ ರಚನೆಯಲ್ಲಿ ಸ್ಥಿರತೆ ಎನ್ನುವುದು ಇಲ್ಲದ್ದರಿಂದ ಕಥೆ ಮನವರಿಕೆಯಾಗುವುದಿಲ್ಲ."[11] ಎನ್ನುವ ಇನಾಂದಾರ ಅವರ ಮಾತನ್ನು ಒಪ್ಪಿಕೊಂಡರೂ ಆರಂಭದ ಸಾಮಾಜಿಕ (ಸ್ತ್ರೀ ಪ್ರಧಾನ) ಕಾದಂಬರಿಯ ಬೆಳವಣಿಗೆಯಲ್ಲಿ ಇದೊಂದು ಗಮನಾರ್ಹವಾದ ಕೃತಿಯಾಗಿದೆ.

೧೯೧೬ರಲ್ಲಿ ಅಣ್ಣಾಜಿರಾವ್ ಗಳವಾಡಿ ರಚಿಸಿದ 'ರೋಹಿಣಿ' ಇಲ್ಲವೆ 'ಸಾರಸ್ವತ ಮಂಡಳಿ' ಕೃತಿಯು ಮೇಲಿನ ಎರಡೂ ಕಾದಂಬರಿಗಳಲ್ಲಿನ ಸಮಸ್ಯೆಯನ್ನೇ ಎತ್ತಿಕೊಂಡು ಚಿತ್ರಿಸಲಾಗಿದೆ.

೧೯೦೮ರಲ್ಲಿ ರಚಿತವಾದ ಕೆರೂರು ವಾಸುದೇವಾಚಾರ್ಯರ 'ಇಂದಿರಾ' ಇದು ಕೂಡ ಸ್ತ್ರೀ ಸಂವೇದನೆಯನ್ನೊಳಗೊಂಡ ಕಾದಂಬರಿ. ಸಮಾಜದ ಅಭಿವೃದ್ಧಿಗಾಗಿ ಈ ಕೃತಿ ರಚಿಸಿದ್ದಾಗಿ ಲೇಖಕರೇ ತಿಳಿಸಿದ್ದಾರೆ. ಇಂದಿರಾ ಕೃತಿಯ ಪ್ರಾಥಮಿಕ ನಿರೂಪಣೆಯಲ್ಲಿ "ಬಾಲ್ಯದಲ್ಲಿಯೇ ಕನ್ನಿಕೆಯರ ವಿವಾಹ ಉಚಿತವಾದದ್ದಲ್ಲ ಹದಿನಾರು, ಹದಿನೆಂಟು ವರ್ಷ ಪ್ರಾಯ ಬಂದ ಬಳಿಕ ವಧುಗಳ ವಿವಾಹ ಮಾಡತಕ್ಕದ್ದು ಯುಕ್ತವೆಂದು ವಿದ್ಯಾಮಂಡಿತವಾದ ಪ್ರಾಂತಗಳಲ್ಲಿ ಪಂಡಿತರಾದ ಸ್ತ್ರೀ ಪುರುಷರ ಅಭಿಪ್ರಾಯವಿರುವುದು"[12.] ಎಂದು ಹೇಳುವುದರ ಮೂಲಕ ಕಾದಂಬರಿಕಾರರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಬಾಲ್ಯ ವಿಧವಾ ವಿವಾಹವನ್ನು ಶಾಸ್ತ್ರಗೊಳು ಒಪ್ಪುತ್ತವೆಂದು ಕಾದಂಬರಿಕಾರರು ಕೃತಿಯ ಪ್ರಾಥಮಿಕ ನಿರೂಪಣೆಯಲ್ಲಿ ಹೇಳಿದ್ದಾರೆ. ಸ್ತ್ರೀಸ್ವಾತಂತ್ರ್ಯ ಧೋರಣೆ ಜೊತೆಗೆ ಸಮಾಜ ಸುಧಾರಣೆಯು ಕೃತಿಯ ಆಶಯವೆಂದು ಹೇಳಬಹುದಾಗಿದೆ. ಸಮಕಾಲೀನ ಸಮಾಜದ ಚಿತ್ರಣದ ಜೊತೆಯಲ್ಲೇ ವಾಸ್ತವತೆಯನ್ನು ಬಿಂಬಿಸುತ್ತಾರೆ.

ಆರಂಭದಲ್ಲಿ ಮೂಡಿಬಂದ ಕಾದಂಬರಿಗಳೆಲ್ಲಾ ಸಮಾಜದ ಬಗ್ಗೆ ಕಾಳಜಿ ಹೊಂದಿದ್ದರೂ ವಾಸ್ತವ ಬದುಕಿನ ಚಿತ್ರಣ ಕಡಿಮೆಯೆಂದೇ ಹೇಳಬಹುದು. ವಾಸ್ತವ ಬದುಕನ್ನು ಚಿತ್ರಿಸುವ ಕಾದಂಬರಿ ರಚಿಸಿದವರಲ್ಲಿ ಮೊದಲಿಗರೆಂದರೆ ಎಂ.ಎಸ್.ಪುಟ್ಟಣ್ಣ ೧೯೧೫ರಲ್ಲಿ 'ಮಾಡಿದ್ದುಣ್ಣೋ ಮಹಾರಾಯ' ಕಾದಂಬರಿ ರಚಿಸಿದರು ಇದರ ಶಿರೋನಾಮೆಯೇ ಗಾಢಮಾತಿನಿಂದ ಕೂಡಿದ ನೀತಿಪ್ರದವಾಗಿದೆ. ಧರ್ಮಕ್ಕೆ ಸತ್ಯಕ್ಕೆ ಅಂತಿಮ ಜಯವೆಂಬುದೆ ಕೃತಿಯ ಆಶಯ. ಅಂದಿನ ವಿದ್ಯಾಭ್ಯಾಸದ ಕ್ರೂರಪದ್ದತಿ, ಮಾಟ ಮಂತ್ರವನ್ನು ಮಾಡುವ ಮಂತ್ರವಾದಿ, ಸೊಸೆಯನ್ನು ಹಿಂಸಿಸುವ ಅತ್ತೆ, ವಿದ್ಯಾರ್ಥಿಗಳಿಗೆ ಶಿಕ್ಷೆ ಕೊಡುವ ಉಪಾಧ್ಯಾಯರ ಚಿತ್ರಣ ಬರುತ್ತದೆ. ವಾಸ್ತವಿಕತೆಯನ್ನು ಪ್ರಯೋಗಿಸಿದ್ದಾರೆ. ಪುರಾಣ ಪ್ರಸಿದ್ಧರಾದ ವ್ಯಕ್ತಿಗಳಲ್ಲಿ ಕಾಣುವ ಧಿರೋದಾತ್ತ ವ್ಯಕ್ತಿತ್ವವನ್ನು ಪುಟ್ಟಣ್ಣನವರು ಸಾಮಾನ್ಯ ಮನುಷ್ಯರಲ್ಲಿಯೇ ಕಂಡರಿಸಿದ್ದಾರೆ. ಆಡು (ನುಡಿನ) ಭಾಷೆಯ ಗಾದೆ ಮಾತಿನ ಬಳಕೆ ಅಂದಿನ ಸಮಾಜದ ರೀತಿಯನ್ನು ಬಿಂಬಿಸುತ್ತದೆ. "ಆದರ್ಶ ಮತ್ತು ವಾಸ್ತವಗಳ ನಡುವೆ ಅರ್ಥಪೂರ್ಣವಾದ ಸಂವಾದವನ್ನು ಸಾಧಿಸುವುದರ ಮೂಲಕ ಎಂ.ಎಸ್. ಪುಟ್ಟಣ್ಣನವರ 'ಮಾಡಿದ್ದುಣ್ಣೋ ಮಹಾರಾಯ' ಕನ್ನಡದ ಮೊಟ್ಟಮೊದಲಿನ ಕಾದಂಬರಿಗಳ್ಲಲಿ ಅದ್ವಿತೀಯಸ್ಥಾನವನ್ನುಗಳಿಸಿಕೊಳ್ಳುತ್ತದೆ".[13] ಎನ್ನುವ ಕೆರೂರು ವಸು ದೇವಾಚಾರ್ಯರ ಮಾತನ್ನು ನಿರ್ವಿವಾದವಾಗಿ ಒಪ್ಪಿ ಕೊಳ್ಳಬಹುದಾಗಿದೆ.

ಮೇಲಿನ ಕಾದಂಬರಿಗಳು ಆ ಹೊತ್ತಿನ ಸಮಾಜದ ಸಮಸ್ಯೆಗಳಿಗೆ ಕನ್ನಡಿ ಹಿಡಿದಿವೆ ನಿಜ, ಆದರೆ ಇಂತಹ ಸಮಸ್ಯೆಗಳಿಗೆ ಸಮಾಜದ ಪ್ರತಿಕ್ರಿಯೆ ಏನೆಂಬುದನ್ನು ಚಿತ್ರಿಸುವಲ್ಲಿ ಹಿಂದೆ

ಬೀಳುತ್ತವೆ. ವಿಧವಾವಿವಾಹ ಇಂತಹ ಕ್ರಾಂತಿಕಾರರ ವಿಚಾರವನ್ನು ಸಮಾಜ ಹೇಗೆ ಸ್ವೀಕರಿಸುತ್ತದೆಯೆಂದು ಹೇಳಿಲ್ಲಾ ಎಂ.ಎಸ್. ಪುಟ್ಟಣ್ಣನವರ ಕಾದಂಬರಿ ಒಂದು ಕೌಟುಂಬಿಕ ಚಿತ್ರಣವನ್ನಷ್ಟೇ ನೀಡುತ್ತದೆ. ೧೯೨೮ರಲ್ಲಿ ಎಂ.ಎಸ್. ಪುಟ್ಟಣ್ಣನವರು ಮತ್ತೊಂದು ಕಾದಂಬರಿ ರಚಿಸಿದರು ಅದೇ 'ಮುಸುಕು ತೆಗೆಯೇಮಾಯಾಂಗನೆ' ಮೇಲಿನ ಈ ಎಲ್ಲ ಕಾದಂಬರಿಗಳು ಕನ್ನಡ ಕಾದಂಬರಿ ಬೆಳವಣಿಗೆಗೆ ಒಂದು ಖಚಿತ ರೂಪವನ್ನು ಮಾರ್ಗವನ್ನು ಸೃಷ್ಟಿಸಿದವು. ಈ ಆರಂಭದ ಲೇಖಕರು ತಮ್ಮ ಕೃತಿಗಳಲ್ಲಿ ಜೀವನವನ್ನು ಪ್ರತಿಬಿಂಬಿಸಲು ಧೀರ ಪ್ರಯತ್ನಗಳನ್ನು ನಡೆಸಿದರು. ಆದರೆ ಅವರ ಕೃತಿಗಳು

ಅದರ ವ್ಯಾಪ್ತಿಯನ್ನು ಮಿತಿಗೊಳಿಸುವಂತಹ ವಿಶಿಷ್ಟ ಸಮಾಜಕ್ಕೆ ಸೇರಿದವಗಿದ್ದವು. ಜೀವನದ ಸ್ವತಂತ್ರ ಹಾಗೂ ಪೂರ್ಣ ಅಭಿವೃದ್ಧಿಗೆ ಅವರು ಸಾಂಪ್ರದಯದ ರೀತಿಯಲ್ಲಿ ಬೆಳೆದುದೂ ಸಹ ಅಡ್ಡಿಯನ್ನುಂಟುಮಾಡಿತ್ತು ಎಂಬ ಅ.ನ.ಕೃ ಅವರ ಹೇಳಿಕೆ ಕಾದಂಬರಿ ಬೆಳವಣಿಗೆಯ ಮೇಲೆ ಬೆಳಕು ಚೆಲ್ಲುತ್ತದೆ.

ಹತ್ತೊಂಬತ್ತನೆ ಶತಮಾನದ ಆರಂಭದಲ್ಲಿ ಸ್ವತಂತ್ರ ಕಾದಂಬರಿಗಳು ಕನ್ನಡದಲ್ಲಿ ಮೂಡಿಬಂದರೂ ವಿಪುಲವಾಗಿ ಬೆಳೆಯಲಿಲ್ಲ. ೧೯೧೫ರಿಂದ ೧೯೩೫ರವರೆಗೆ ಕಾದಂಬರಿ ದೃಷ್ಟಿಯಿಂದ ಬರಡಾದ ಕಾಲವದು. ಇಂಗ್ಲಿಷ್ ಕಾವ್ಯದ ದಟ್ಟವಾದ ಪ್ರಭಾವದಿಂದಾಗಿ ಭಾವಗೀತಾ ಪ್ರಕಾರ ಬೆಳೆದು ಬಂದಿತು. ನವೋದಯ ಸಾಹಿತ್ಯದಲ್ಲಿ ಕಾದಂಬರಿಗಳು ಹೆಚ್ಚಿನ ಸಂಖ್ಯೆಯಲ್ಲಿ ಬೆಳೆದು ಬಂದವು. ಶಿವರಾಮಕಾರಂತ, ಕುವೆಂಪು, ಗೋಕಾಕ್ ಕಾದಂಬರಿಗಳನ್ನು ರಚಿಸಿದರು. ಈ ಸಂದರ್ಭದಲ್ಲಿ ಬಂದಂತಹ ಬಹುತೇಕ ಕಾದಂಬರಿಗಳು ಸಾರ್ವಕಾಲಿಕ ಮೌಲ್ಯಗಳನ್ನು ಎತ್ತಿಹಿಡಿದಿವೆ. ಉದಾ: ಕಾರಂತರ 'ಚೋಮನದುಡಿ', ಕುವೆಂಪು ಅವರ 'ಕಾನೂರು ಹೆಗ್ಗಡಿತಿ', ಗೋಕಾಕರ 'ಇಜ್ಜೋಡು' ಮುಂತಾದವು. ಅಲ್ಲದೆ ಬೆಟಗೇರಿ ಕೃಷ್ಣಶರ್ಮರ 'ಸುದರ್ಶನ', ಅ.ನ.ಕೃ ಅವರ 'ಜೀವನಯಾತ್ರೆ', 'ಸಂಧ್ಯಾರಾಗ', ದೇವುಡು ಅವರ 'ಮಹಾಬ್ರಾಹ್ಮಣ' ಕಾರಂತರ 'ಮರಳಿಮಣ್ಣಿಗೆ' ಮುಂತಾದವುಗಳು.

ಕುವೆಂಪು ಅವರ 'ಕಾನೂರುಹೆಗ್ಗಡಿತಿ' ಹಳೆಯ ಮೌಲ್ಯಗಳನ್ನು ನಂಬಿ ಬದುಕುವ ಗ್ರಾಮೀಣ ಸಮಾಜಕ್ಕೆ ಹೊಸ ನಾಗರಿಕತೆ ಮತ್ತು ಹೊಸ ಆಲೋಚನೆಗಳಿಂದ ಉಂಟಾಗುವ ಸಂಘರ್ಷ, ಅದಕ್ಕೆ ಜನರ ಪ್ರತಿಕ್ರಿಯೆ ಯಾವ ರೀತಿಯಲ್ಲಿರುತ್ತದೆಂಬುದನ್ನು ಚಿತ್ರಸುತ್ತದೆ. ವಿದ್ಯಾಭ್ಯಾಸ ಮುಗಿಸಿ ಬರುವ ಹೂವಯ್ಯನಿಂದ ಕಾನೂರಿನಲ್ಲಿ ನವನಾಗರೀಕತೆ ಹಾಗೂ ವೈಚಾರಿಕ ಪ್ರಜ್ಞೆಯ ಆಗಮನದ ಸೂಚನೆ ಕಂಡುಬರುತ್ತದೆ. ಸಮಾಜದ ಮೂಢ ಆಚರಣೆಗಳು, ಮೇಲು ಕೀಳು, ಭಾವನೆಗಳು, ಹೂವಯ್ಯ ಗಾಂಧಿವಾದಕ್ಕೆ ಮಾರುಹೋಗುವುದು, ಮದ್ಯಪಾನ ಮಾಡುವುದಿಲ್ಲವೆಂದು ಪ್ರಮಾಣ ಮಾಡುವುದು ಇಲ್ಲೆಲ್ಲಾ ಗಾಂಧಿವಾದದ ಪ್ರಭಾವವನ್ನು

ಕಾಣುತ್ತೇವೆ. ಸಮಾಜದ ಎಲ್ಲಾ ವರ್ಗದ ಪಾತ್ರಗಳ ಪ್ರಯೋಗ ಬೇಟೆಯ ಪ್ರಸಂಗ ಮುಂತಾದ ವಿಚಾರಗಳನ್ನು ಚಿತ್ರಿಸಲಾಗಿದೆ. ಇಲ್ಲಿ ಸಮಾಜದ ವಸ್ತೃತ ಜೀವನದ ಪರಿಚಯವಾಗುತ್ತದೆ.

ಈ ರೀತಿಯಾಗಿ ಕಾದಂಬರಿ ಕ್ಷೇತ್ರ ಹುಲುಸಾಗಿ ಬೆಳೆಯುತ್ತಿದ್ದ ಸಂದರ್ಭದಲ್ಲಿಯೇ ಮತ್ತೊಂದು ಹೊಸ ಸಾಹಿತ್ಯ ಪಂಥ ಅಂಕುರಿಸಿತು ಅದೇ ಪ್ರಗತಿಶೀಲ ಸಾಹಿತ್ಯ ಪಂಥ ನವೋದಯ ಪಂಥದಲ್ಲಿ ಹೊಸಗನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳು ಬೆಳೆದು ಬಂದರೆ ಪ್ರಗತಿಶೀಲ ಪಂಥದಲ್ಲಿ ಕತೆ ಮತ್ತು ಕಾದಂಬರಿ ಪ್ರಕಾರಗಳು ಪ್ರಧಾನವಾಗಿ ಬೆಳೆದು ಬಂದವು. ಪ್ರಗತಿಶೀಲ ಪಂಥದಲ್ಲಿ ಕಾದಂಬರಿ ರಚಿಸಿದವರೆಂದರೆ ಅ.ನ.ಕೃ, ನಿರಂಜನ, ಬಸವರಾಜ ಕಟ್ಟೀಮನಿ, ತ.ರಾ.ಸು, ಅನುಪಮ ನಿರಂಜನ ಮುಂತಾದವರು.

**೧.೪.ಅಧ್ಯಯನದ ಸ್ವರೂಪವ್ಯಾಪ್ತಿ; ಮತ್ತು ಉದ್ದೇಶ :**

ಪ್ರಸ್ತುತ ಪ್ರಬಂಧದಲ್ಲಿ ಪ್ರಗತಿಶೀಲ ಸಾಹಿತ್ಯ ಪಂಥದಲ್ಲಿ ತ.ರಾಸು. ಅವರ ಕಾದಂಬರಿಗಳಲ್ಲಿ "ಸ್ತ್ರೀಸಂವೇದನೆ" ಕುರಿತು ಅಧ್ಯಯನ ಮಾಡುವುದು ನನ್ನ ಉದ್ದೇಶವಾಗಿದೆ. ತ.ರಾ.ಸು ಅವರು ಅರವತ್ತೊಂಬತ್ತು ಕಾದಂಬರಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಹದಿನಾಲ್ಕು ಐತಿಹಾಸಿಕ ಕಾದಂಬರಿಗಳು, ೫೩ ಸಾಮಾಜಿಕ ಕಾದಂಬರಿಗಳು, ಹಾಗೂ ೨ ಪೌರಾಣಿಕ ಕಾದಂಬರಿಗಳು. ಇವಿಷ್ಟೇ ಅಲ್ಲದೆ ಕತೆಗಳು, ನಾಟಕ, ಜೀವನಚರಿತ್ರೆ ಹಾಗೂ ಅನುವಾದಗಳನ್ನೂ ಕೂಡ ಮಾಡಿದ್ದಾರೆ.

ಅಧ್ಯಯನದ ಅನುಕೂಲಕ್ಕಾಗಿ ತ.ರಾ.ಸು ಅವರ ಕಾದಂಬರಿಗಳನ್ನು ಮೂರುಭಾಗಗಳಾಗಿ ವಿಂಗಡಿಸಬಹುದು. ಐತಿಹಾಸಿಕ ಕಾದಂಬರಿಗಳು, ಸಾಮಾಜಿಕ ಕಾದಂಬರಿಗಳು ಹಾಗೂ ಪೌರಾಣಿಕ ಕಾದಂಬರಿಗಳು. ತ.ರಾ.ಸು ಅವರ ಕಾದಂಬರಿಗಳಲ್ಲಿ ಆರಂಭದಲ್ಲಿ ಕಂಡುಬಂದಂತಹ ಕಾದಂಬರಿಗಳನ್ನು ಪ್ರಗತಿಶೀಲ ಉತ್ಸಾಹಿ ಕಾದಂಬರಿಗಳೆಂದು ಗುರುತಿಸಬಹುದಾಗಿದೆ. ಅವುಗಳೆಂದರೆ 'ಕೇದಿಗೆವನ', 'ಜೀತದ ಜೀವ', 'ಪುರುಷಾವತಾರ', 'ಬೆಂಕಿಯ ಬಲೆ', 'ಬಿಡುಗಡೆಯಬೇಡಿ', 'ಮುಂಜಾವಿನಿಂದ ಮುಂಜಾವು', 'ರಕ್ತತರ್ಪಣ'. ಎರಡನೆಯದಾಗಿ ಐತಿಹಾಸಿಕ ಕಾದಂಬರಿಗಳು 'ಕಂಬನಿಯಕುಯಿಲು', 'ರಕ್ಷರಾತ್ರಿ', 'ತಿರುಗುಬಾಣ', 'ಮೃತ್ಯುಸಿಂಹಾಸನ', ದುರ್ಗಾಸ್ತಮಾನ, ಇವೆಲ್ಲ ಚಿತ್ರದುರ್ಗದ ಉಜ್ವಲ ಚರಿತ್ರೆಯನ್ನು ಒಳಗೊಂಡಂತಹ ಕಾದಂಬರಿಗಳು. ಇವಲ್ಲದೆ 'ನೃಪತುಂಗ' 'ವಿಜಯೋತ್ಸವ', 'ಶಿಲ್ಪಶ್ರೀ', 'ಸಿಡಿಲಮೊಗ್ಗು', 'ಕೀರ್ತಿನಾರಾಯಣ', ಮುಂತಾದವು ಸಹ ಚಾರಿತ್ರಿಕ ಕಾದಂಬರಿಗಳು. ಮೂರನೆಯದು ಇವನ್ನೆಲ್ಲ ಸಾಮಾಜಿಕ ಕಾದಂಬರಿಗಳೆಂದು ಕರೆಯುವುದು ಅಷ್ಟು ಸಮಂಜಸವಲ್ಲ. "ಐತಿಹಾಸಿಕ ಮತ್ತು ಪೌರಾಣಿಕವಲ್ಲದವುಗಳೆಲ್ಲಾ ಸಾಮಾಜಿಕ ಕಾದಂಬರಿಗಳಾಗುವುದಿಲ್ಲ. ಸಮಾಜದ ಆವರಣ ಮೂರ್ತವಾಗಿರಬೇಕು"[14], ಮನುಷ್ಯರ ಜೀವನದ ಗತಿಯ ಮೇಲೆ ಪ್ರಭಾವ ಬೀರುವಂತಿರಬೇಕು. ವಿರೋಧವನ್ನು ಹುಟ್ಟಿಸಬೇಕು. ವ್ಯಕ್ತಿ ಸಮಾಜ

ಸಂಬಂಧಗಳು ಮುಖ್ಯ ವಸ್ತುವಾಗಬೇಕು. ಇವಿಲ್ಲದ ಕಾದಂಬರಿಗಳು ಸಾಮಾಜಿಕ ಕಾದಂಬರಿಗಳಗಲಾರವು. "ಈ ಸ್ವರೂಪದ ತ.ರಾ.ಸು ಅವರ ಕಾದಂಬರಿಗಳು ಬಹುಮಟ್ಟಿಗೆ ಪ್ರಗತಿಶೀಲ ಕಕ್ಷೆಯಲ್ಲಿ ಬರುತ್ತವೆ. ಅಂತಹ ಜನಪ್ರಿಯ ಕಾದಂಬರಿಗಳಲ್ಲಿ 'ನಾಗರಹಾವು', 'ಚಂದನದಗೊಂಬೆ', 'ಚಂದ್ರವಳ್ಳಿಯ ತೋಟ', 'ಚಕ್ರತೀರ್ಥ', ಈ ತರಹದ ಕಾದಂಬರಿಗಳು ಸಾಮಾಜಿಕ ಕಾದಂಬರಿಗಳು"[15]. ತ.ರಾ.ಸು ಅವರ ಒಟ್ಟು ಕಾದಂಬರಿಗಳನ್ನು ಅಧ್ಯಯನದ ಅನುಕೂಲಕ್ಕಾಗಿ ವಿಭಾಗಮಾಡುವುದಕ್ಕೆ ಎಲ್.ಎಸ್.ಶೇಷಗಿರಿರಾಯರ ಮೇಲಿನ ಹೇಳಿಕೆ ಸಮರ್ಥವಾದುದೆಂದೇ ಹೇಳಬಹುದಾಗಿದೆ.

ತ.ರಾ.ಸು ಅವರನ್ನು ಕುರಿತಂತೆ ಅಧ್ಯಯನಗಳನ್ನು ಹಲವು ನೆಲೆಗಳಲ್ಲಿ ಕೈಗೊಳ್ಳುವ ಸಾಧ್ಯತೆಗಳಿವೆ. ತ.ರಾ.ಸು ಅವರ ಐತಿಹಾಸಿಕ ಕಾದಂಬರಿಗಳನ್ನು ಕುರಿತಂತೆ, ಅದರಲ್ಲೂ ಚಿತ್ರದುರ್ಗದ ಇತಿಹಾಸಕ್ಕೆ ಸಂಬಂಧಿಸಿದಂತೆ ವಸ್ತುವನ್ನೊಳಗೊಂಡ ಕಾದಂಬರಿಗಳ ಅಧ್ಯಯನ, ಸಾಮಾಜಿಕ ಕಾದಂಬರಿಗಳ ಅಧ್ಯಯನ, ಪೌರಾಣಿಕ ಹಾಗೂ ಇತರೆ ಕಾದಂಬರಿಗಳನ್ನು ಕುರಿತಂತೆ ಅಧ್ಯಯನ. ಅನಂತರ ಕಾದಂಬರಿಗಳನ್ನು ಹೊರತುಪಡಿಸಿ ಇತರೆ ಪ್ರಕಾರಗಳನ್ನು ಕುರಿತಾದ ಅಧ್ಯಯನದ ಸಾಧ್ಯತೆ.

ತ.ರಾ.ಸು ಅವರನ್ನು ಕುರಿತಂತೆ ಇದುವರೆಗೂ ನಡೆದಿರುವ ಅಧ್ಯಯನಗಳೆಂದರೆ ಎರಡು ಮಾತ್ರ ಅವೆಂದರೆ. 'ತ.ರಾಸು. ಅವರ ಕಾದಂಬರಿಗಳು: ಒಂದು ಅಧ್ಯಯನ ಡಾ.ಎಂ.ಎಸ್. ಪಾಟೀಲ ಮತ್ತು ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳು ಒಂದು ಅಧ್ಯಯನ ಡಾ.ಎಸ್. ಆರ್. ಕೋಮಲವಲ್ಲಿ 'ತ.ರಾ.ಸು ಅವರ ಕಾದಂಬರಿಗಳಲ್ಲಿ 'ಸ್ತ್ರೀಸಂವೇದನೆ' ಕುರಿತಂತೆ ಸಂಶೋಧನೆ ಇದುವರೆಗೂ ನಡೆದಿಲ್ಲವೆಂದೇ ಹೇಳಬಹುದು. ಹಾಗಾಗಿ ತ.ರಾ.ಸು ಅವರ ಕಾದಂಬರಿಗಳಲ್ಲಿ ಸ್ತ್ರೀಸಂವೇದನೆ ಕುರಿತಂತೆ ಅಧ್ಯಯನ ಮಾಡುವುದು ನನ್ನ ಉದ್ದೇಶ. ಅಂದರೆ ಈಗಾಗಲೇ ಸಂಶೋಧನೆ ನಡೆಸಿರುವ ಡಾ.ಎಂ.ಎಸ್. ಪಾಟೀಲ ಮತ್ತು ಡಾ.ಎಚ್.ಆರ್ ಕೋಮಲವಲ್ಲಿಯವರ ಸಂಶೋಧನೆಯಲ್ಲಿ ಸ್ತ್ರೀಸಂವೇದನೆ ಬಗ್ಗೆ ಪ್ರಧಾನವಾಗಿ ಚಿಂತನೆ ನಡೆದಿಲ್ಲದಿರುವುದರಿಂದ ಅದನ್ನು ಮುಖ್ಯ ಉದ್ದೇಶವಾಗಿಟ್ಟುಕೊಂಡು ಸಂಶೋಧನೆ ನಡೆಸಲು ಉದ್ದೇಶಿಸಲಾಗಿದೆ. ಹಾಗೆ ನೋಡಿದರೆ ತ.ರಾ.ಸು ಅವರನ್ನು ಕುರಿತಂತೆ ಇದುವರೆಗೂ ನಡೆದಿರುವ ಸಂಶೋಧನೆಗಳು ತೀರಾ ವಿರಳವೆಂದೇ ಭಾವಿಸಬಹುದು. ಆದರೆ ತ.ರಾ.ಸು ಅವರನ್ನು ಕುರಿತಂತೆ ಅಲ್ಲಲ್ಲಿ ಹಲವಾರು ಬಿಡಿಬಿಡಿಯಾದ ಲೇಖನಗಳು ಮತ್ತು ಕೆಲವು ಸಂಸ್ಮರಣ ಕೃತಿಗಳು ತ.ರಾ.ಸು ಅವರ ಬದುಕು ಹಾಗೂ ಅವರ ಒಟ್ಟು ಸಾಹಿತ್ಯ ಕುರಿತಂತೆ ಕೆಲವು ಪ್ರಕಟಣೆಗಳು ಕಂಡುಬರುತ್ತವೆ.

ತ.ರಾ.ಸು ಅವರ ಸಾಹಿತ್ಯ ಮತ್ತು ಕಾದಂಬರಿಗಳನ್ನು ಕುರಿತಂತೆ ಪ್ರಕಟವಾಗಿರುವ ಸ್ತ್ರೀಸಂವೇದನೆಯನ್ನೇ ಪ್ರಧಾನವಾಗಿ ಹೊಂದಿರುವ ಲೇಖನಗಳಲ್ಲಿ ಪ್ರಮುಖವಾದವುಗಳೆಂದರೆ ತ.ರಾ.ಸು ಅವರ ಬದುಕುಬರಹ ಸಂಪಾದಕ ಶಾ.ಮಂ.ಕೃಷ್ಣರಾಯ ಕೃತಿಯಲ್ಲಿ ಪ್ರಕಟವಾಗಿರುವ

ಮೂರು ಲೇಖನಗಳು. ಅವೆಂದರೆ "ಚಿತ್ರದುರ್ಗದ ಚಾರಿತ್ರಿಕ ಕಾದಂಬರಿಗಳ ಶೈಲಿ" ಗುಂಡ್ಮಿ ಚಂದ್ರಶೇಖರ ಐತಾಳ, "ಐತಿಹಾಸಿಕ ಕಾದಂಬರಿತ್ರಯಗಳಲ್ಲಿ ಸ್ತ್ರೀ ಪಾತ್ರ ವಿಶಾಲಾಕ್ಷಿ ದಕ್ಷಿಣಮೂರ್ತಿ. ಹಾಗೆಯೇ 'ಗಿರಿಮಲ್ಲಿಗೆ' ಸಂಪಾದಕ ಎಚ್. ಶ್ರೀಶೈಲ ಆರಾಧ್ಯ, ಕೃತಿಯಲ್ಲಿ ಪ್ರಕಟವಾಗಿರುವ ಲೇಖನಗಳಲ್ಲಿ ಸ್ತ್ರೀ ಐತಿಹಾಸಿಕ ಕಾದಂಬರಿ ಡಾ.ಎಂ.ರಾಮಕೃಷ್ಣ ಹೆಣ್ಣು ಸಾಮಾಜಿಕ ಕಾದಂಬರಿ ಟಿ.ಗಿರಿಜ, ಸೃಷ್ಟಿಶೀಲ ಬರಹಗಾರ, ಎಲ್.ಎಸ್. ಶೇಷಗಿರಿರಾವ್.

ತ.ರಾ.ಸು ಅವರನ್ನು ಕುರಿತಂತೆ ಪ್ರಕಟವಾಗಿರುವ ಕೃತಿಗಳೆಂದರೆ ಅವರನ್ನು ತುಂಬಾ ಹತ್ತಿರದಿಂದ ತಿಳಿದಿದ್ದ ಆಪ್ತ ಶಿಷ್ಯನಂತಿದ್ದ ನಾ. ಪ್ರಭಾಕರ್ ಅವರ 'ತ.ರಾಸು. ಕುರಿತು' –ಈ ಕೃತಿಯು ತ.ರಾಸು ಅವರ ಒಟ್ಟು ಸಾಹಿತ್ಯ ಹಾಗೂ ಅವರ ಬದುಕು ಮತ್ತು ವ್ಯಕ್ತಿತ್ವದ ಸಮಗ್ರ ವಿವರಗಳನ್ನೊಳಗೊಂಡಿದೆ. ಹಾಗೆಯೇ ಇವರ ಮತ್ತೊಂದು ಕೃತಿಯಾದ 'ತ.ರಾ.ಸು. ಕುರಿತು' ಮಕ್ಕಳ ಪುಸ್ತಕ. ನಂತರ ತ.ರಾಸು. ಅವರನ್ನು ಕುರಿತಂತೆ ಲೇಖನಗಳನ್ನೊಳಗೊಂಡಿರುವ ಕೃತಿಗಳೆಂದರೆ 'ಸಾಲುದೀಪಗಳು' ಕನ್ನಡ ಸಾಹಿತ್ಯ ಪರಿಷತ್ ಪ್ರಕಟಣೆ, ಸಂಪಾದಕರು ಜಿ.ಎಸ್. ಶಿವರುದ್ರಪ್ಪ ಮತ್ತು ಎಂ.ಎಚ್.ಕೃಷ್ಣಯ್ಯ. ಬೆಂಗಳೂರು ವಿ.ವಿ.ಪ್ರಕಟಿಸಿರುವ ಸಾಹಿತ್ಯ ವಾರ್ಷಿಕ ೧೯೭೨. ಸಂಪಾದಕ ಜಿ.ಎಸ್. ಶಿವರುದ್ರಪ್ಪ, ಈ ಕೃತಿಯಲ್ಲಿ ಹಂಪನಾಗರಾಜಯ್ಯನವರು ಬರೆದಿರುವ ಆ ವರ್ಷ ಪ್ರಕಟವಾಗಿರುವ ೧೨೮ ಕಾದಂಬರಿಗಳ ವಿಮರ್ಶೆ, ತ.ರಾಸು. ಅವರನ್ನು ಕುರಿತಂತೆ ಪ್ರಕಟಗೊಂಡಿರುವ ಅಭಿನಂದನಾ ಗ್ರಂಥಗಳೆಂದರೆ 'ತ.ರಾ.ಸು. ಬದುಕು ಬರಹ' ಸಂಪಾದಕರು ಶಾ.ಮಂ. ಕೃಷ್ಣರಾಯ, ಪ್ರಕಟಣೆ ೧೯೮೨ ಈ ಕೃತಿಯಲ್ಲಿ ತ.ರಾ.ಸು. ಅವರ ಬದುಕಿನ ವೈಯಕ್ತಿಕ ವಿವರಗಳು ಹಾಗೂ ಅವರ ಕೆಲವು ಕೃತಿಗಳ ಮೇಲೆ ಬೆಳಕನ್ನು ಚೆಲ್ಲುವ ನಾಡಿನ ವಿವಿಧ ಲೇಖಕರ ಲೇಖನಗಳು ಕಂಡುಬರುತ್ತವೆ. ಮತ್ತೊಂದು ಸಂಸ್ಮರಣ ಕೃತಿ 'ಗಿರಿಮಲ್ಲಿಗೆ'. ಸಂಪಾದಕರು ಎಚ್. ಶ್ರೀಶೈಲಆರಾಧ್ಯ. ಅಲ್ಲದೆ 'ಸ್ನೇಹ ಸಮನ್ವಯ' ಕೃತಿ. ಇದರಲ್ಲಿ ತ.ರಾ.ಸು ನಾಡಿನ ಹೆಸರಾಂತ ಲೇಖಕರ ಬಗ್ಗೆ ಹಿರಿಯರಾಜಕಾರಣಿಗಳ ಬಗ್ಗೆ, ಕಲಾವಿದರ ಬಗ್ಗೆ ಪತ್ರಿಕೆಗಳಿಗೆ, ಅಭಿನಂದನಾ ಗ್ರಂಥಗಳಿಗೆ ನಿಯತಕಾಲಿಕಗಳ ಬಗ್ಗೆ ಬರೆದ ಲೇಖನಗಳನ್ನು ನಾ.ಪ್ರಭಾಕರ್ ಅವರು ಸಂಗ್ರಹಿಸಿದ್ದಾರೆ. ತ.ರಾ.ಸು ಪ್ರತಿಷ್ಠಾನ ಗಿರಿಕನ್ಯಾಕಾ ಯಾದವಗಿರಿ ಮೈಸೂರು ಇವರು ಪ್ರಕಟಿಸಿದ್ದಾರೆ.

'ಗಿರಿಮಲ್ಲಿಗೆ' ಕೃತಿಯಲ್ಲಿ ಮೂರು ವಿಭಾಗಗಳಿವೆ. ಮೊದಲನೆಯ ಭಾಗ "ಸ್ನೇಹ" –ಇದು ತ.ರಾಸು. ಅವರ ಸ್ನೇಹ ಸಂಬಂಧಗಳ ವಿಶಾಲತೆ ವಿವಿಧತೆಯನ್ನು ತೋರಿಸುವದರ ಜೊತೆಗೆ ಅವರ ಆತ್ಮೀಯರು ತ.ರಾಸು. ಅವರಲ್ಲಿ ಕಂಡ ವಿಶಿಷ್ಟತೆಯ ದಾಖಲೆ, ಅವರ ಬದುಕು, ಸಾಹಿತ್ಯದ ಅವಿನಾಭವ ಸಂಬಂಧ ಕುರಿತಾದ ಒಟ್ಟು ಇಪ್ಪತ್ತೆರಡು ಲೇಖನಗಳು ಈ ಭಾಗದಲ್ಲಿವೆ. ಎರಡನೆಯ ಭಾಗ "ಸಾಹಿತ್ಯ"– ಈ ಭಾಗದಲ್ಲಿ ತ.ರಾ.ಸು. ಅವರ ಕೆಲವು ಪ್ರಮುಖ ಕೃತಿಗಳ ಬಗ್ಗೆ, ವಸ್ತುನಿಷ್ಠವಾಗಿ ಬರೆದ ಹಲವು ಲೇಖಕರ ಲೇಖನಗಳು (ಒಟ್ಟು ೧೯ ಲೇಖನಗಳು). ಭಾಗ ಮೂರು "ಸಂಕೀರ್ಣ"– ಈ ಭಾಗದಲ್ಲಿ ತ.ರಾ.ಸು. ಅವರ ಅಭಿರುಚಿ ಸಾಹಿತ್ಯಕ್ಕಷ್ಟೆ ಸೀಮಿತವಲ್ಲ.

ಅವರ ಅನುಭವ ವಿಶಾಲವಾದುದು. ಪತ್ರಿಕೋದ್ಯಮಿಯಾಗಿ ಕನ್ನಡ ಚಳವಳಿಕಾರರಾಗಿ, ನೃತ್ಯಾಸಕ್ತರಾಗಿ ಹೀಗೆ ಅವರ ವಿವಿಧ ದೃಷ್ಟಿಕೋನಗಳನ್ನು ಒಟ್ಟು ೧೪ ಲೇಖನಗಳಲ್ಲಿ ಪರಿಚಯಿಸಲಾಗಿದೆ. ಅನಂತರ ತ.ರಾ.ಸು. ಅವರ ಸ್ಮರಣ ಸಂಚಿಕೆಗಳಾದ 'ಸಮನ್ವಯ' ಮತ್ತು 'ಜ್ಞಾನಸುಧಾ' ಇವೆಲ್ಲಾ ಕೃತಿಗಳು ನೇರವಾಗಿ ತ.ರಾ.ಸು. ಅವರನ್ನು ಹಾಗೂ ಅವರ ಕೃತಿಗಳಲ್ಲಿನ ವಿವರಗಳ ಬಗ್ಗೆ ಬೆಳಕನ್ನು ಚೆಲ್ಲುತ್ತವೆ. ನನ್ನ ಸಂಶೋಧನೆಯ ಉದ್ದೇಶ ತ.ರಾ.ಸು ಅವರ ಕಾದಂಬರಿಗಳಲ್ಲಿನ ಸ್ತ್ರೀಸಂವೇದನೆ ಕುರಿತಾದದ್ದು.

ತ.ರಾ.ಸು. ಅವರ ಕಾದಂಬರಿಗಳಲ್ಲಿ ಸ್ತ್ರೀಸಂವೇದನೆಯನ್ನೇ ಕೇಂದ್ರವಾಗಿರಿಸಿಕೊಂಡ ಸಮಗ್ರವಾದ ಅಧ್ಯಯನದ ದೃಷ್ಟಿಯಿಂದ ಇದು ಮೊದಲನೆಯ ಪ್ರಯತ್ನವೆಂದು ಹೇಳಬಹುದಾಗಿದೆ. ಇವರ ಕಾದಂಬರಿಗಳಲ್ಲಿ ಸ್ತ್ರೀಸಂವೇದನೆಯನ್ನೇ ಪ್ರಧಾನವಾಗಿ ಗುರುತಿಸುವ ಮುನ್ನ ತ.ರಾ.ಸು. ಅವರ ಕಾದಂಬರಿಗಳನ್ನು ಕುರಿತಂತೆ ಬೇರೆ ಬೇರೆ ಅಧ್ಯಯನದ ನೆಲೆಗಳನ್ನು ಗುರುತಿಸುವುದು. ಸ್ತ್ರೀಸಂವೇದನೆಯನ್ನು ಕುರಿತಂತೆ ಕೆಲವು ಪ್ರಾಚೀನ ಕೃತಿಗಳಲ್ಲಿನ ಉಲ್ಲೇಖಗಳನ್ನು ಹೆಸರಿಸುವುದು, ಬೇರೆ ಬೇರೆ ಸಾಹಿತ್ಯ ಪ್ರಕಾರಗಳನ್ನು ಮತ್ತು ಸಾಹಿತ್ಯ ಪಂಥಗಳನ್ನು ಅಧ್ಯಯನ ಮಾಡುವುದು.

ತ.ರಾ.ಸು. ಅವರ ಐತಿಹಾಸಿಕ ಕಾದಂಬರಿಗಳು ಒಟ್ಟು ೧೪. ಸಂಸ್ಕೃತದಲ್ಲಿ ನಾಟಕಚಕ್ರ ಬಂದಂತೆ ತ.ರಾ.ಸು. ಅವರು ಕಾದಂಬರಿ ಮಾಲೆಯನ್ನು ರಚಿಸಿದ್ದಾರೆ. ಅಂದರೆ "ಒಂದೇ ವಸ್ತುವನ್ನೊಳಗೊಂಡ ಅನೇಕ ಕಾದಂಬರಿಗಳು, ಉದಾ: 'ಕಂಬನಿ ಕುಯಿಲು', 'ರಕ್ತರಾತ್ರಿ', 'ತಿರುಗು ಬಾಣ', 'ರಾಜ್ಯದಾಹ', ಮುಂತಾದವು. ಇವರ ಐತಿಹಾಸಿಕ ಕಾದಂಬರಿಗಳು ಬಹುಭಾಗ ಚಿತ್ರದುರ್ಗವನ್ನಾಳಿದ ಮದಕರಿನಾಯಕನ ಹಾಗೂ ದಳವಾಯಿಗಳ ಆಡಳಿತವನ್ನು ವಸ್ತುವನ್ನಾಗಿ ಒಳಗೊಂಡಿವೆ. 'ಕಂಬನಿಯ ಕುಯಿಲು' ಕಾದಂಬರಿಯಲ್ಲಿ ಗಂಡು ಸಂತಾನವಿಲ್ಲದೆ ಮಡಿದ ಮದಕರಿನಾಯಕನ ಅನಂತರ ಉತ್ತಧಿಕಾರಾಯಾರಾಗಬೇಕೆಂಬ ಪ್ರಶ್ನೆ, ಇಂತಹ ಸಂಧಿಗ್ದ ಸಮಯದಲ್ಲಿ ಓಬವ್ವನಾಗತಿ ತಳೆಯುವ ನಿಲುವು ಹಾಗೂ ದತ್ತು ಸ್ವೀಕಾರದ ಪ್ರಶ್ನೆ ಸಹಗಮನದ ವಿಚಾರ, ಹೆಣ್ಣಿನ ಧೈರ್ಯ, ಅವಳಾಡುವ ನಿಷ್ಠುರ ಮಾತುಗಳು, ರಾಜಕೀಯ ಅಭಿರುಚಿ, ಸಮಸ್ಯೆಗೆ ಅವಳು ಹುಡುಕುವ ಪರಿಹಾರ ಇವೆಲ್ಲ ಹೆಣ್ಣಿನ ಚಾಣಾಕ್ಷತೆಯನ್ನು ತಿಳಿಸುತ್ತವೆ"[೧೬]. ನಾಗತಿಯ ಸಹಗಮನ ಓದುಗರನ್ನು ದುಃಖಕ್ಕೀಡು ಮಾಡುತ್ತದೆ.

ಚಿತ್ರದುರ್ಗದ ಸುತ್ತಮುತ್ತಲ ಜನತೆಯ ಬದುಕನ್ನು, ಪ್ರಾದೇಶಿಕತೆಯನ್ನು ಮತ್ತು ಆ ಕಾಲದ ಮೌಲ್ಯಗಳು ತ.ರಾ.ಸು ಅವರ ಕಾದಂಬರಿಗಳಲ್ಲಿ ಹೇಗೆ ಚಿತ್ರಿಸಲ್ಪಟ್ಟಿವೆಯೆಂಬುದನ್ನು ಚಿತ್ರಿಸುವುದು. ~~ಹಾಗೆಯೇ~~ ಸ್ತ್ರೀಸಂವೇದನೆ ಗುರುತಿಸುವ ಸಂದರ್ಭದಲ್ಲಿಯೇ ಅದುವರೆಗೂ ಬಂದಿರುವ(ಹೊಸಗನ್ನಡ ಸಾಹಿತ್ಯದ ಆರಂಭದಲ್ಲಿ) ಕೆಲವು ಸ್ತ್ರೀಸಂವೇದನಾ ಪ್ರಧಾನವಾದ ಕಾದಂಬರಿಗಳು ತ.ರಾ.ಸು ಅವರ ಮೇಲೆ ಬೀರಿರುವ ಪ್ರಭಾವ ಕುರಿತು ಅಧ್ಯಯನ ~~ಮಾಡುವುದು~~

ನನ್ನ ಉದ್ದೇಶವಾಗಿದೆ. ಆರಂಭದ ಸ್ತ್ರೀಪ್ರಧಾನ ಕಾದಂಬರಿಗಳ ಬಗ್ಗೆ ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗುವುದು. ಅಲ್ಲದೆ ತ.ರಾ.ಸು ಅವರ ಸಮಕಾಲೀನ ಕಾದಂಬರಿಕಾರರಾದ ಬಸವರಾಜ ಕಟ್ಟೀಮನಿ, ನಿರಂಜನ, ಅ.ನ.ಕೃ ಮೊದಲಾದವರ ಬರಹದಲ್ಲಿನ ಅಂಶಗಳು ತ.ರಾ.ಸು ಅವರ ಕಾದಂಬರಿಗಳಲ್ಲೂ ಕಂಡುಬರುವುದನ್ನು ಗುರುತಿಸುವುದು.

ಪ್ರಗತಿಶೀಲ ಪಂಥದಲ್ಲಿ ತ.ರಾ.ಸು ಅವರ ಮೇಲೆ ದಟ್ಟವಾಗಿ ಪರಿಣಾಮ ಬೀರಿದ ಅಂಶಗಳು, ಪ್ರಗತಿಶೀಲಪಂಥದ ಉಗಮ, ಜೀವನ ಮೌಲ್ಯದಲ್ಲಾದ ಬದಲಾವಣೆಗಳು ಹಾಗೂ ವಾಸ್ತವವಾದ, ಪ್ರಗತಿಶೀಲ ಪಂಥಕ್ಕಿಂತಲೂ ಹಿಂದಿನ ಸಾಹಿತ್ಯ ಪಂಥಗಳ ಪ್ರಭಾವ ತ.ರಾ.ಸು ಅವರ ಮೇಲಾಗಿರುವುದನ್ನು ಗುರುತಿಸುವುದು. ಹೊಸಗನ್ನಡ ಸಾಹಿತ್ಯದಲ್ಲಿ ಒಂದು ದಶಕದ ಕಾಲ ಒಂದು ಚಳವಳಿ ರೂಪದಲ್ಲಿ ಬೆಳೆದುಬಂದ ಸಾಹಿತ್ಯ ಪಂಥವೆಂದರೆ ಪ್ರಗತಿಶೀಲ ಪಂಥ. ಪ್ರಗತಿಶೀಲ ಸಾಹಿತ್ಯ ಕನ್ನಡದಲ್ಲಿ ಹುಟ್ಟುವುದಕ್ಕೆ ಮುಂಚೆ ಯೂರೋಪಿನ ಸಾಹಿತ್ಯದಲ್ಲಾದ ಬದಲಾವಣೆ, ಅಖಿಲ ಭಾರತಮಟ್ಟದ ಚಳವಳಿ, ಅನಂತರ ಅ.ನ.ಕೃ ನೇತೃತ್ವದಲ್ಲಿ ಕರ್ನಾಟಕದಲ್ಲಿ ಪ್ರಗತಿಶೀಲ ಚಳವಳಿ ಆರಂಬವಾದದ್ದು.

ಈ ಮೇಲಿನ ಎಲ್ಲಾ ಅಂಶಗಳು ತ.ರಾ.ಸು ಅವರ ಮೇಲೆ ಬೀರಿರುವ ಪರಿಣಾಮವನ್ನು ಗುರುತಿಸುವುದು. ಪ್ರಗತಿಶೀಲ ಪಂಥದಲ್ಲಿ ಅ.ನ.ಕೃ ಅನಂತರ ಹೆಚ್ಚಿನ ಸಂಖ್ಯೆಯಲ್ಲಿ ಕಾದಂಬರಿಗಳನ್ನು ಬರೆದವರೆಂದರೆ ತ.ರಾ.ಸು ಅವರೇ. ಇವೆಲ್ಲಕ್ಕಿಂತ ಮುಖ್ಯವಾಗಿ ತ.ರಾ.ಸು ಅವರ ದೇಶಪರ್ಯಟನೆ, ಬದುಕಿನ ಅನುಭವ ಮತ್ತು ಆಳವಾದ ಅಧ್ಯಯನ ಇವರನ್ನು ಕಾದಂಬರಿಕಾರರನ್ನಾಗಿ ರೂಪಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಪ್ರಗತಿಶೀಲ ಚಳವಳಿ ಸಂದರ್ಭದಲ್ಲಿ ತ.ರಾ.ಸು ಅವರ ಸಮಕಾಲೀನ ಕಾದಂಬರಿಕಾರರನ್ನೂ ಒಳಗೊಂಡಂತೆ ಸುಮಾರು ಹತ್ತರಿಂದ ಹದಿನೈದು ವರ್ಷಗಳ ಅಂತರವನ್ನು ನನ್ನ ಅಧ್ಯಯನದ ವ್ಯಾಪ್ತಿ ಒಳಗೊಂಡಿರುತ್ತದೆ. ತ.ರಾ.ಸು ಅವರು ರಚಿಸಿರುವ ಅರವತ್ತೆಂಟು ಕಾದಂಬರಿಗಳಲ್ಲಿ ಸ್ತ್ರೀಸಂವೇದನೆಯನ್ನೆ ಪ್ರಧಾನವಾಗಿ ಒಳಗೊಂಡಿರುವ ಪ್ರಾತಿನಿಧಿಕವಾದ ಕೆಲವು ಮುಖ್ಯವಾದ ಕಾದಂಬರಿಗಳನ್ನು ಮಾತ್ರ ಚರ್ಚೆಗೆತ್ತಿಕೊಳ್ಳಲಾಗುತ್ತದೆ.

ಅನಂತರ ತ.ರಾ.ಸು ಅವರ ಕಾದಂಬರಿಗಳ ಮೇಲೆ ಬೆಳಕನ್ನು ಚೆಲ್ಲುವುದಕ್ಕೆ ಸಹಕಾರಿಯಾಗುವ, ಸಾಧನೆಗಳೆಂದರೆ ತ.ರಾ.ಸು ಅವರನ್ನು ಕುರಿತಂತೆ ವಿವಿಧ ಕೃತಿಗಳಲ್ಲಿ ಪ್ರಕಟವಾಗಿರುವ ನಾಡಿನ ಹೆಸರಾಂತ ಲೇಖಕರ ಸ್ತ್ರೀಸಂವೇದನಾ ಪರವಾದ ಲೇಖನಗಳು ತ.ರಾ.ಸು ಅವರ ಅಭಿನಂದನಾ ಗ್ರಂಥಗಳಾದ 'ತ.ರಾ.ಸು ಬದುಕು ಬರೆಹ' ಮತ್ತು 'ಗಿರಿಮಲ್ಲಿಗೆ' ಕೃತಿಯಲ್ಲಿನ ಕೆಲವು ಮುಖ್ಯವಾದ ಲೇಖನಗಳು.

ಚಿತ್ರದುರ್ಗದ ಪಾಳೇಗಾರ ಮದಕರಿನಾಯಕನ ಮತ್ತು ದಳವಾಯಿಗಳ ಆಳ್ವಿಕೆ ಸಂದರ್ಭದಲ್ಲಿ ಹೆಣ್ಣಾದವಳು ನಿರ್ವಹಿಸುವ ಪಾತ್ರ, ಅವಳ ಸಾಮಾಜಿಕ ಸಮಸ್ಯೆಗಳು, ಸಮಸ್ಯೆಗಳ

ಪರಿಹಾರಕ್ಕಾಗಿ ಆಕೆಯ ಹುಡುಕಾಟ, ಹಾಗೂ ವಿವಿಧ ಕ್ಷೇತ್ರಗಳಲ್ಲಿ ಆಕೆ ನಡೆದುಕೊಳ್ಳುವ ರೀತಿ ಪ್ರೇಮ ಮತ್ತು ಕಲೆ ಇವಿಷ್ಟೇ ಅಲ್ಲದೆ ಇನ್ನೂ ಕೆಲವು ಮುಖ್ಯವಾದ ಅಂಶಗಳನ್ನು ತ.ರಾ.ಸು ಅವರ ಅಭಿನಂದನಾ ಗ್ರಂಥಗಳಲ್ಲಿನ ಲೇಖನಗಳಿಂದ ಗುರುತಿಸಬಹುದಾಗಿದೆ. ಈ ರೀತಿಯಾಗಿ ತ.ರಾ.ಸು ಅವರ ಸಾಹಿತ್ಯ ಕುರಿತಂತೆ ಬಂದಿರುವ ಲೇಖನಗಳಲ್ಲಿನ ಎಲ್ಲ ಅಂಶಗಳು ತ.ರಾ.ಸು ಅವರ ಕಾದಂಬರಿಗಳಲ್ಲಿ ಸ್ತ್ರೀಸಂವೇದನೆ ಕುರಿತಾದ ಅಧ್ಯಯನಕ್ಕೆ ಮುಖ್ಯವಾದ ಸಾಮಗ್ರಿಗಳಾಗುತ್ತವೆ.

ಈ ರೀತಿ ತ.ರಾ.ಸು ಅವರ ಕಾದಂಬರಿಗಳಲ್ಲಿ ಸ್ತ್ರೀಸಂವೇದನೆ ಕುರಿತಂತೆ ಆಧ್ಯಯನ ಕೈಗೊಳ್ಳುವುದಕ್ಕೆ ಮುನ್ನ ಇದುವರೆಗೂ ನನ್ನ ಪ್ರಬಂಧದಲ್ಲಿ ಹೆಸರಿಸಿರುವ ಪ್ರಕಟಣೆಗಳು ಮತ್ತು ಲೇಖನಗಳನ್ನು ಗಮನಿಸುತ್ತಾ ಮೌಲಿಕವಾಗಿ ಚರ್ಚಿಸುವ ಉದ್ದೇಶ ಹೊಂದಲಾಗಿದೆ. ಸುಮಾರು ಏಳು ಅಧ್ಯಾಯಗಳನ್ನು ನನ್ನ ಸಂಶೋಧನಾ ವ್ಯಾಪ್ತಿ ಒಳಗೊಂಡಿರುತ್ತದೆ. ತ.ರಾ.ಸು ಅವರ ಕಾದಂಬರಿಗಳಲ್ಲಿ ಸ್ತ್ರೀಸಂವೇದನೆ ಕುರಿತು ಚರ್ಚಿಸುವುದು, ಸಾಮಾಜಿಕ, ಸಾಂಸ್ಕೃತಿಕ ನೆಲೆಗಳಲ್ಲಿ ಚರ್ಚೆ ಮಾಡುವುದು, ಜೊತೆಗೆ ಪ್ರಾದೇಶಿಕತೆಯನ್ನು ಗಮನದಲ್ಲಿರಿಸಿಕೊಂಡು ಗಂಭೀರವಾದ ಚರ್ಚೆಗೆ ಗುರಿಪಡಿಸುವುದು ನನ್ನ ಸಂಶೋಧನೆಯ ಉದ್ದೇಶವಾಗಿರುತ್ತದೆ.

**ಅಡಿಟಿಪ್ಪಣಿಗಳು:**

೧. ಶ್ರೀಶೈಲ ಆರಾಧ್ಯ ಎಚ್. (ಸಂ) :ಗಿರಿಮಲ್ಲಿಗೆ(ತ.ರಾಸು ಅವರ ಸಂಸ್ಮರಣಸಂಪುಟ) ಪುಟ ೧೧೫.

೨. ಅದೇ : ಪುಟ ೧೧೬.

೩. ಹರಿಕೃಷ್ಣಭರಣ್ಯ : ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ. ಪುಟ ೫.

೪. ಕೋಮಲವಲ್ಲಿ ಎಚ್. ಆರ್. : ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳು ಒಂದು ಅಧ್ಯಯನ, ಪುಟ.೧೩

೫. ಶಿವರುದ್ರಪ್ಪ ಜಿ.ಎಸ್. (ಸಂ) : ಕಾದಂಬರಿಕಾರರಾಗಿ ಕಾರಂತ, ಪುಟ. ೧೩

೬. ಮುಗಳಿ ರಂ.ಶ್ರೀ : ಸಾಹಿತ್ಯೋಪಾಸನೆ : ಪುಟ.೪೦

೭. ಕೋಮಲವಲ್ಲಿ ಎಚ್.ಆರ್. : ತ.ರಾಸು. ಅವರ ಸಾಮಾಜಿಕ ಕಾದಂಬರಿಗಳು ಒಂದು ಅಧ್ಯಯನ, ಪುಟ.೧೭

೮. ಕನ್ನಡ ವಿಶ್ವಕೋಶ ಸಂಪುಟ–೪ :ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಅಧ್ಯಯನ ಸಂಸ್ಥೆ ೧೯೭೨ ಪು. ೪೬೪

೯. ವಿವೇಕರೈ ಬಿ.ಎ. (ಸಂ) :ಕನ್ನಡ ಕಾದಂಬರಿಯ ಮೊದಲ ಹೆಜ್ಜೆಗಳು ಮಂಗಳೂರು: ಪುಟ ೧೨೫

೧೦. ಶ್ರೀಶೈಲ ಆರಾಧ್ಯ ಎಚ್. (ಸಂ) :ಗಿರಿಮಲ್ಲಿಗೆ (ತ.ರಾಸು ಅವರ ಸಂಸ್ಮರಣಸಂಪುಟ) ಪುಟ.೧೧೭

೧೧. ವಾಸುದೇವಾಚಾರ್ಯ ಕೆರೂರು: : ಇಂದಿರಾ ಮುನ್ನುಡಿ, ಪುಟ ೧೫.

೧೨ ಅದೇ : ಇಂದಿರಾ ಮುನ್ನುಡಿ, ಪುಟ ೧೫

೧೩. ಅದೇ : ಇಂದಿರಾ ಮುನ್ನುಡಿ, ಪುಟ ೧೬

೧೪. ಕುರ್ತುಕೋಟಿ ಕೆ.ಡಿ. : ಯುಗಧರ್ಮ ಹಾಗೂ ಸಾಹಿತ್ಯದರ್ಶನ ಪುಟ ೨೫೩.

೧೫.. ಸಿದ್ದಲಿಂಗಯ್ಯ ಜಿ.ಎಸ್ (ಸಂ) ಕೃಷ್ಣಯ್ಯ ಎಂ.ಎಚ್. : ಸಾಲುದೀಪಗಳು, : ಪುಟ ೨೮೭

೧೬. ಶ್ರೀಶೈಲ ಆರಾಧ್ಯ ಎಚ್. (ಸಂ) (ತ.ರಾ.ಸು. ಸ್ಮರಣಸಂಪುಟ) : ಗಿರಿಮಲ್ಲಿಗೆ : ಪುಟ ೧೧೭

## ಅಧ್ಯಾಯ.೨

## ಪ್ರಗತಿಶೀಲ ಪಂಥ ಮತ್ತು ತ.ರಾ.ಸು. ಅವರ ಕಾದಂಬರಿಗಳು

"ಪ್ರಗತಿ" ಎಂಬ ಶಬ್ದವೇ ಹೊಸ ಆವಿಷ್ಕಾರದ ಸಂಕೇತ. ಅಂದರೆ ಅರ್ಥ ವೈಶಾಲ್ಯತೆ, ಸಾಗುವ ದಾರಿ, ತಲುಪುವ ಗುರಿ ಚಳವಳಿಗೆ ದಾರಿ ಮಾಡಿ ಕೊಡುತ್ತದೆ. ಅಂದರೆ, ಸಮಾಜದಲ್ಲಿ ಸಂಭವಿಸುವ ಹೊಸತನ ಸಾಹಿತ್ಯವಾಗಿ ರೂಪಗೊಳ್ಳುತ್ತದೆ. ಇಂತಹ ಚಳವಳಿಯ ಆಗುಹೋಗುಗಳನ್ನು ಅರ್ಥಮಾಡಿಕೊಳ್ಳಲು ಮೊದಲು ಅದರ ಮೂಲನೆಲೆಯನ್ನು ಅರಿಯಬೇಕು. ಈ ಅಧ್ಯಾಯದಲ್ಲಿ ಪ್ರಗತಿ ಹಾಗೂ ಪ್ರಗತಿಶೀಲ ಪಂಥದ ತಾತ್ತ್ವಿಕ ವಿವರಗಳು, ಹಾಗೂ ಜೀವನ ದೃಷ್ಟಿ ಮತ್ತು ಕೆಲ ಪ್ರಗತಿಶೀಲ ಬರಹಗಾರರ ವೈಶಿಷ್ಟ್ಯಗಳನ್ನು ವಿಶ್ಲೇಶಿಸಲಾಗಿದೆ. ಜೊತೆಗೆ ಈ ಚಳವಳಿಯ ಸಾಧನೆ ಮತ್ತು ವೈಫಲ್ಯಗಳನ್ನು ಸೂಕ್ಷ್ಮವಾಗಿ ಗಮನಿಸಲಾಗಿದೆ. ಸೈದ್ಧಾಂತಿಕ ನಿಲುವುಗಳನ್ನು ಹೊಂದಿದ್ದರು ಕೂಡ ಜೀವನವನ್ನು ಸರಳವಾಗಿ ಗ್ರಹಿಸಿದ್ದರಿಂದ ಸಾಹಿತ್ಯ ಸೃಷ್ಟಿಯಲ್ಲಿ ಉಂಟಾದ ಸೋಲಿನ ಬಗೆಗೆ ವಿಶ್ಲೇಶಿಸಲಾಗಿದೆ.

ಬದಲಾವಣೆ ಬದುಕಿನ ಅವಿಭಾಜ್ಯ ಅಂಗ ಹಾಗೆಯೇ ಕಾಲದಿಂದ ಕಾಲಕ್ಕೆ ಸಾಹಿತ್ಯ ಕ್ಷೇತ್ರದಲ್ಲಿ ಬರವಣಿಗೆ ಪ್ರಕ್ರಿಯೆಲ್ಲಿಯೂ ಬದಲಾವಣೆಯನ್ನು ಸ್ಪಷ್ಟವಾಗಿ ಗುರುತಿಸಬುದಾಗಿದೆ. ಸಂಪ್ರದಾಯ, ಪರಂಪರಗೆ ಬೇಸತ್ತು ರೀತಿ ನೀತಿಗೆ ಎಕತಾನತೆಗೆ ಬೇಸತ್ತು ಅದರ ನಿಲುವುಗಳ ಬಗೆಗೆ ಭಿನ್ನಾಭಿಪ್ರಾಯ ಉಂಟಾಗಿ ಜಡ್ಡುಗಟ್ಟಿದ ಮಾರ್ಗ ಬಿಟ್ಟು ಹೊಸ ಮಾರ್ಗವನ್ನು ಸೃಷ್ಟಿಸಬೇಕೆನ್ನುವ ಆವೇಶದಲ್ಲಿ ಪ್ರತಿಭಟನೆ ರೂಪದಲ್ಲಿ ಹೊಸದೊಂದು ಸಂಪ್ರದಾಯ ಆರಂಭಗೊಳ್ಳುತ್ತದೆ. ಇದು ಸಾಹಿತ್ಯ ಕ್ಷೇತ್ರದಲ್ಲಿ ತನ್ನ ಪ್ರಭಾವವನ್ನು ಬೀರಿ ಓದುಗರಿಗೆ ಬೇಡವೆನಿಸಿದಾಗ ಭಿನ್ನವಾಗಿ ಮತ್ತೊಂದು ಸಾಹಿತ್ಯ ಘಟ್ಟ ಬೆಳಕಿಗೆ ಬರುತ್ತದೆ.

ಸಾಹಿತ್ಯ ಕ್ಷೇತ್ರದಲ್ಲಿ ಉಂಟಾಗುವ ಈ ರೀತಿಯ ಬದಲಾವಣೆ ಮತ್ತು ಬೆಳವಣಿಗೆ ಯಾವುದೋ ಒಂದು ವರ್ಗವನ್ನು ·ತೃಪ್ತಿಪಡಿಸಲಿಕ್ಕಾಗಲಿ, ಹೊಸತನವನ್ನು ಸೃಷ್ಟಿಸಬೇಕೆನ್ನುವ ಕಾರಣದಿಂದಾಗಲಿ ಹೊಸಪ್ರಯೋಗ ಅಭೀಪ್ಸೆಯ ಫಲವಾಗಿ ಅಲ್ಲ, ಅದೊಂದು "ಸೃಜನಶೀಲತೆಯ ಸ್ವಾಭಾವಿಕ ಆವಶ್ಯಕತೆಯಾಗಿದೆ"[1]. ಹಾಗಾಯೇ ಒಂದು ಸಾಹಿತ್ಯ ಚಳವಳಿ ಅಥವಾ ಸಂಪ್ರದಾಯಕ್ಕೆ ಆಯಾ ಸಮಾಜದ ಜೀವನ ಮೌಲ್ಯವು ಕಾರಣವಾಗುತ್ತದೆ. ಹೀಗೆ ಕಾಲಕಾಲಕ್ಕೆ ಬದಲಾಗುವ ಜೀವನಕ್ರಮಗಳು ಸಾಹಿತ್ಯದ ಮೇಲೆ ಪ್ರಭಾವ ಬೀರುವುದರಿಂದ ಬದಲಾವಣೆ ಅನಿರ್ವಾಯವಾಗುತ್ತದೆ. ಈ ಅನಿರ್ವಾಯದ ಫಲವೇ ಪ್ರಗತಿಶೀಲ ಸಾಹಿತ್ಯದ ಉಗಮಕ್ಕೆ ಕಾರಣವಾಯಿತೆಂದು ಹೇಳಬಹುದಾಗಿದೆ.

ಪ್ರಗತಿ ಎಂದರೆ "ಮುಂದೆ" ಹೋಗುವುದು "ಮುನ್ನಡೆ" ಎಂಬುದು ನಿಘಂಟುವಿನ ಅರ್ಥ. ಅಂದರೆ ಇರುವ ಸ್ಥಿತಿಯಿಂದ ಮತ್ತೊಂದು ಸ್ಥಿತಿಯನ್ನು ಪಡೆಯುವುದಾಗಿದೆ. ಈ ರೀತಿ

ಸಾಮಾಜಿಕವಾಗಿ ಆಗುವ ಅಭಿವೃದ್ಧಿ ಪ್ರಗತಿಯ ಅರ್ಥವ್ಯಾಪ್ತಿಗೆ ಬರುತ್ತದೆ. ಇಂತಹ ಪ್ರಗತಿಯ ಕಲ್ಪನೆ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತದೆ. ಸಾಮಾಜಿಕವಾಗಿ ಅಗುವ ಬದಲಾವಣೆ ವಿಭಿನ್ನ ವ್ಯಕ್ತಿ ಮತ್ತು ವರ್ಗಗಳ ದೃಷ್ಟಿಯಲ್ಲಿ ಪ್ರಗತಿಪರವೂ ಪ್ರಗತಿವಿರೋಧವೂ ಆಗುವ ಸಾಧ್ಯತೆಗಳಿರುತ್ತವೆ. ಆದ ಪ್ರಗತಿಯನ್ನು ವ್ಯಕ್ತಿ ನೆಲೆಗಟ್ಟಿನಲ್ಲಿ ಅರ್ಥೈಸಲು ಸಾಧ್ಯವಿಲ್ಲ. ಪ್ರಗತಿಯನ್ನು ಗೆರೆಹಾಕಿ ಖಚಿತವಾಗಿ ಹೇಳಲು ಕಷ್ಟವಾಗುತ್ತದೆ. ಸಮಾಜವಾದಿ ದೃಷ್ಟಿಯಲ್ಲಿ ಕ್ರಾಂತಿಯೇ ಪ್ರಗತಿಯಾದರೆ ಮತ್ತೆ ಕೆಲವರಿಗೆ ಪ್ರಗತಿಗಾಮಿಯಾಗಿ ತೋರುತ್ತದೆ. ಪ್ರಗತಿ ಎನ್ನುವ ಪದ ಸಾಪೇಕ್ಷವಾದುದ್ದು. ಪ್ರಗತಿಪರ ನಿಲುವು ಮತ್ತು ಆಲೋಚನೆಗಳನ್ನು ಸಮಾಜವನ್ನು ಒಳಗೊಂಡಂತೆ ಅದರ ಕ್ಷೇತ್ರಗಳಲ್ಲೂ ಗುರುತಿಸಬಹುದಾಗಿದೆ. ಅಂದರೆ ರಾಜಕೀಯ ಧಾರ್ಮಿಕ ಸಾಮಾಜಿಕ ಇತ್ಯಾದಿ.

ಚರಿತ್ರೆಯನ್ನು ಅವಲೋಕಿಸಿದಾಗ ಯಾವುದು ಪ್ರಗತಿಪರ ಮತ್ತು ಪ್ರಗತಿವಿರೋಧಿ ಎಂದು ನಿರ್ಧಾರ ಮಾಡುವುದು ಕಷ್ಟ. ಒಂದು ಕಾಲಕ್ಕೆ ಪ್ರಗತಿಪರ ಎನಿಸಿದ ಧೋರಣೆಗಳು ಮತ್ತೊಂದು ಕಾಲಕ್ಕೆ ಪ್ರಗತಿವಿರೋಧಿ ಎನಿಸಬಹುದು. ಆ ಕಾರಣದಿಂದಲೇ ಪ್ರಗತಿ ಕುರಿತಾದ, ಚರ್ಚೆ ಸಂಕೀರ್ಣವಾಗಿ ಬಿಡುತ್ತದೆ. ಸಾಮೂಹಿಕವಾಗಿ ಶೋಷಣಾ ಪದ್ಧತಿಯನ್ನು ನಿರ್ಮೂಲನೆ ಮಾಡುವುದು ಕಾರ್ಮಿಕ ವರ್ಗಕ್ಕೆ ಪ್ರಗತಿ ಎನಿಸಿದರೆ ಬಂಡವಾಳಶಾಹಿಗಳಿಗೆ ಅದೇ ಪ್ರಗತಿವಿರೋಧಿಯಾಗುತ್ತದೆ. ಸಾಮಾಜಿಕ ಕಟ್ಟುಪಾಡುಗಳು, ವಿಧಿ ವಿಧಾನಗಳನ್ನು ರೂಢಿಗೊಳಿಸಲು ಪ್ರಯತ್ನಿಸಿದ ಒಂದು ವರ್ಗಕ್ಕೆ ಅದೇ ಪ್ರಗತಿಯಾಗಿ ಕಂಡು ಅವರ ಸಾಧನೆಯಾಗುತ್ತದೆ. ಅಂತಹ ನಿಯಮ ಬದ್ಧರಾಗದವರಿಗೆ ಅದರ ವಿರುದ್ಧ ಪ್ರತಿಭಟನೆ ಮಾಡುವ ಆಕಾಂಕ್ಷೆ ಹುಟ್ಟುತ್ತದೆ. ಅಂದರೆ ಇಲ್ಲಿ ಸ್ಪಷ್ಟವಾಗಿ "ಹೇರುವವರ್ಗ" ಮತ್ತು 'ಪ್ರತಿಭಟಿಸುವ ವರ್ಗ"ವೆಂದು ಗುರುತಿಸಬಹುದಾಗಿದೆ. ಸಾಂಪ್ರದಾಯಕ ಆಚರಣೆಗೆ ಒಳಗಾದ ಧರ್ಮ ಯಥಾಸ್ಥಿತಿಯ ಮುಂದುವರಿಕೆಯನ್ನು ಬಯಸುವುದರಿಂದ ಒಂದರ್ಥದಲ್ಲಿ ಪ್ರಗತಿವಿರೋಧಿಯಾದುದು. ಸಮಾಜದ ಒಳಿತಿಗಾಗಿ ನೈತಿಕತೆಯನ್ನು ಎತ್ತಿಹಿಡಿಯುವ ಧರ್ಮವು ಆಚರಣೆಯ ಸಂದರ್ಭದಲ್ಲಿ ಅದರ ಸ್ವರೂಪವೇ ಬದಲಾಗುತ್ತದೆ. ಬಹಿರ್ಮುಖದಲ್ಲಿ ತಳೆಯುವ ಧೋರಣೆಯು ಅಂತರ್ಮುಖದಲ್ಲಿ ಭಿನ್ನವಾಗುತ್ತದೆ.

ಯಾವುದೋ ಒಂದು ನಿಲುವಿನಲ್ಲಿ ನಿಂತು ಹೋಗಿ ಮುಂದಕ್ಕೆ ನಡೆಯುವುದೇ ಪ್ರಗತಿಯೆನಿಸುತ್ತದೆ. ಇತಿಹಾಸವನ್ನು ಅವಲೋಕಿಸಿದಾಗ ಈ ಕ್ರಿಯೆ ನಿರಂತರವಾಗಿ ನಡೆದುಬಂದಿರುವುದು ಕಂಡುಬರುತ್ತದೆ. ರಾಜಾಶ್ರಯ ಪಡೆದ ಕವಿಗಳು ಕೃತಿಯನ್ನು ರಾಜನ ಗುಣಗಾನಕ್ಕಾಗಿಯೇ ರಚಿಸಿದ್ದನ್ನು ಪ್ರತಿಭಟಿಸುವ ಸಾಹಸವೇ ಪ್ರಗತಿಯ ಲಕ್ಷಣವಾಗುತ್ತದೆ. ಸಾಹಿತ್ಯ "ಮಾರ್ಗ" ದಿಂದ "ದೇಸಿ" ಗೆ ತಿರುಗಿದ್ದು , ಪ್ರಾಸವನ್ನು ತ್ಯಜಿಸಿ ನವ್ಯವನ್ನು ಪ್ರಯೋಗಮಾಡಿದ್ದು ಇವೆಲ್ಲ ಪ್ರಗತಿಯ ಸಂಕೇತವೇ ಆಗುತ್ತವೆ. ರೂಢಿಗೊಂಡ ಸಾಹಿತ್ಯಮಾರ್ಗಕ್ಕೆ ಬದಲಾಗಿ ಹೊಸಶೈಲಿ, ದಾಟಿ, ಭಾಷೆಗಳ ಮೂಲಕ ಬದಲಾವಣೆಯನ್ನು ತರುವ ಪ್ರಯತ್ನ

ಮಾಡುವುದೇ ಪ್ರಗತಿಯಾಗುತ್ತದೆ. ಈ ತರಹದ ಪ್ರಯೋಗ ಜೀವಂತ ಭಾಷೆಯ ಲಕ್ಷಣ ಕೂಡ.

ಒಟ್ಟಾರೆ ಪ್ರಗತಿ ಎಂದರೆ ಆಚರಣೆಯಲ್ಲಿರುವುದನ್ನೆಲ್ಲ ಗೊಡ್ಡು ಸಂಪ್ರದಾಯವೆಂದಾಗಲಿ ಪ್ರತಿಗಾಮಿ ಧೋರಣೆಯೆಂದಾಗಲಿ ಅಲ್ಲಗಳೆಯುವಂತಹುದಲ್ಲ. ಇರುವುದನ್ನು ವೈಜ್ಞಾನಿಕ ದೃಷ್ಟಿಯಿಂದ ಪರಾಮರ್ಶಿಸಿ ಹೊಸತನಕ್ಕೆ ಕಾಲಿಡುವುದು ಪ್ರಗತಿಯೆನಿಸಿಕೊಳ್ಳುತ್ತದೆ. "ಬಹುಜನ ಪರವಾದ ಸಾಮಾಜಿಕ ಬದಲಾವಣೆಯನ್ನು ಬಯಸುವ ವೈಚಾರಿಕ ಧೋರಣೆ ಎಂಬುದಾಗಿ ಪ್ರಗತಿಯನ್ನು ಕುರಿತು ಚರ್ಚಿಸಲಾಗಿದೆ. ವ್ಯಕ್ತಿಯಿಂದ ವ್ಯಕ್ತಿಗೆ ಪ್ರಗತಿ ಪರಿಕಲ್ಪನೆ ಭಿನ್ನವಾಗಿದ್ದರೂ ಸಾಮೂಹಿಕ ನಡೆಯಲ್ಲಿ ಸಾರ್ಥಕತೆಯನ್ನು ಕಂಡುಕೊಳ್ಳುತ್ತದೆ"[2]. ಇಲ್ಲಿ ವೈಚಾರಿಕತೆ ತುಂಬಾ ಮುಖ್ಯವಾದುದು. ವೈಚಾರಿಕತೆಯಿಂದ ಹೊಸತಾದ ಪ್ರಗತಿ ಬರೀ ಹೇಳಿಕೆಯಾಗಿ ಉಳಿದು ತನ್ನ ವ್ಯಾಪಕತೆಯನ್ನು ಅರ್ಥವೈಶಾಲ್ಯತೆಯನ್ನು ಕಳೆದುಕೊಳ್ಳುತ್ತದೆ.

## ೨.೧. ಪ್ರಗತಿಶೀಲ ಪಂಥದಲ್ಲಿ ಸಾಹಿತ್ಯ ನೆಲೆಗಳು :

ಪ್ರಗತಿಶೀಲ ಪಂಥವನ್ನು ಹೀಗೆ ಸಾಮಾಜಿಕ ನೆಲೆಯಲ್ಲಿ ಅರ್ಥೈಸಬಹುದಾಗಿದೆ. ಯಾವೊಬ್ಬ ಲೇಖಕನೂ ಸಮಾಜದಿಂದ ಹೊರತಾದ ಕೃತಿ ರಚಿಸಲಾರ. ಸಾಮಾಜಿಕ ಬದುಕಿನ ಹಲವು ಸ್ತರಗಳನ್ನು ಗುರುತಿಸುವ ಪ್ರಯತ್ನ ಪ್ರಗತಿಶೀಲದ್ದಾಗಿರುತ್ತದೆ. ಒಂದು ಸಾಹಿತ್ಯದ ವಿಶ್ಲೇಷಣೆ ಒಂದರ್ಥದಲ್ಲಿ ಸಮಾಜದ ವಿಶ್ಲೇಷಣೆಯೇ ಆಗುತ್ತದೆ. "ಸಾಹಿತ್ಯವು ಒಂದು ಕಾಲದ ಸಾಮಾಜಿಕ ಸಂದರ್ಭದಲ್ಲಿ ಸಂಭವಿಸುತ್ತದೆ. ಸಾಹಿತಿಯು ಆ ಸಮಾಜದ ಒಂದು ಅನಿವಾರ್ಯವಾದ ಅಂಗವಾಗಿರುವುದರಿಂದ ಮತ್ತು ಸಮಾಜದೊಂದಿಗೆ ಕೃತಿಮುಖೇನ ವ್ಯವಹರಿಸುವುದರಿಂದ ಭಾಷೆಯ ಮೂಲಕವೇ ತನ್ನ ಸಮಕಾಲೀನ ಸಮಾಜದ ಬಗ್ಗೆ ವಿಶೇಷ ರೀತಿಯ ಎಚ್ಚರವನ್ನು ತಾಳಿರುತ್ತಾನೆ"[3]. ಹೀಗೆ ಸಾಹಿತ್ಯ ಸಾಮಾಜಿಕ ಆಯಾಮದಲ್ಲೆ ಸೃಷ್ಟಿಗೊಂಡ ಒಂದು ಸಂವಹನ ರೂಪವಾಗುತ್ತದೆ. ಸಮಾಜವನ್ನು ಬಿಟ್ಟು ಸಾಹಿತಿಯಾಗಲಿ ಸಾಹಿತಿಯನ್ನು ಬಿಟ್ಟು ಸಮಾಜವಾಗಲಿ ಇರಲು ಸಾಧ್ಯವಿಲ್ಲ. ಉದ್ದೇಶಿತವಾಗಿಯೋ ಅನುದ್ದೇಶಿತವಾಗಿಯೋ ಆಯಾ ಪರಿಸರದ ಚಿತ್ರಣ ಕೃತಿಯಲ್ಲಿ ಒಡಮೂಡುತ್ತದೆ. ಸಾಮಾಜಿಕ ಸಮಸ್ಯೆಗಳಿಗೆ ಸಾಹಿತ್ಯ ಗಮನಕೊಡಬೇಕು . ಇದಕ್ಕೆ ಪೂರಕವಾಗಿ ಎಸ್. ಅನಂತನಾರಾಯಣ ಅವರು ಗಾಂಧೀಜಿಯವರ ಮಾತುಗಳನ್ನು ಹೀಗೆ ಉಲ್ಲೇಖಿಸುತ್ತಾರೆ. "ಎಲ್ಲಾ ರೀತಿ ದುಡಿಯುವವರೂ ಒಂದೇ ಮನುಷ್ಯ ಜಾತಿಗೆ ಸೇರಿದವರೆಂದು ಅಂತೂ ಅವರ ಬದುಕನ್ನು ಒಳಹೊಕ್ಕು ಚಿತ್ರಿಸುವುದು ನಿಜವಾದ ಸಾಹಿತ್ಯದ ಕರ್ತವ್ಯ"[೪].

ಈ ಹೇಳಿಕೆ ಸಾಹಿತಿ ಸಾಮಾಜಿಕ ಪರಿಸರದಿಂದ ಹೊರತಾಗಿ ಕೃತಿ ರಚಿಸಬಾರದೆಂಬುದನ್ನು, ಸಮಾನತೆಯನ್ನು ಕಾಯ್ದುಕೊಳ್ಳಬೇಕೆಂಬ ಎಚ್ಚರಿಕೆಯನ್ನು ತಿಳಿಸುತ್ತದೆ. ಟಾಲ್‌ಸ್ಟಾಯ್ ಅವರು "ಸಾಹಿತ್ಯ ವಾಸ್ತವತೆ ಮತ್ತು ನೈಜ ವಿಚಾರಗಳ ಕಲೆ , ವಾಸ್ತವತೆ

ಮಣ್ಣಿನಿಂದ ಚಿಮ್ಮುತ್ತದೆ ಮತ್ತು ಎಲ್ಲ ವಾಸ್ತವತೆಯ ನೆಲವೆ ಸಮಾಜ"[೫]. ಎಂದು ಹೇಳುವುದರ ಮೂಲಕ ಸಾಹಿತ್ಯದ ಸಾಮಾಜಿಕ ಜವಾಬ್ದಾರಿಯನ್ನು ಗುರುತಿಸುತ್ತಾರೆ.

ಸ್ವಸಂತೋಷಕ್ಕೆ ಆತ್ಮತೃಪ್ತಿಗೆ ಕೃತಿ ರಚಿಸಿದರೂ ಆತ ತನ್ನ ಸುತ್ತಲಿನ ಸಾಮಾಜಿಕ ಪರಿಸವನ್ನು ಮೀರಿ ನಿಲ್ಲಲಾರ . ಸಾಹಿತಿ ಆಯಾಕಾಲದ ಸಾಮಾಜಿಕ ಸಮಸ್ಯೆಯಿಂದ ಮುಕ್ತನಾಗಲು ಸಾಧ್ಯವಿಲ್ಲ . "ಸಾಹಿತಿ ಜೀವನದ ಕನ್ನಡಿ ಮಾತ್ರವಲ್ಲ ಅದರ ಮಹಾಶಿಲ್ಪಿಯಾಗಿದ್ದಾನೆ"[೬]. ಎನ್ನುವ ಅ.ನ.ಕೃ. ಅವರ ಧೋರಣೆಯೂ ಸಾಮಾಜಿಕ ಆಯಾಮದಿಂದಲೇ ಹೊರಹೊಮ್ಮಿದುದಾಗಿದೆ . ಸಾಹಿತಿ ಸೃಷ್ಟಿಸುವ ಜಗತ್ತು ಬೇರೆಯದೇ ಆದರೂ ಆಯಾ ಸಮಾಜದಲ್ಲಿ ಕಂಡುಕೊಂಡ ಸ್ಥಿತಿಯೇ ಆಗಿದೆ.

### ೨.೨. ಪ್ರಗತಿಶೀಲ ಪಂಥ ಮತ್ತು ವಾಸ್ತವತಾವಾದ :

ಪ್ರಗತಿಶೀಲ ಪಂಥವನ್ನು ವಿಶ್ಲೇಷಿಸುವುದಕ್ಕೆ ವಾಸ್ತವತಾವಾದದ ಪರಿಚಯ ಅಗತ್ಯವಾದುದು. ಇಂಗ್ಲಿಷ್‌ನ 'ರಿಯಲಿಸಂ' ಎಂಬ ಪರಿಕಲ್ಪನೆಗೆ ಸಂವಾದಿಯಾಗಿ ಕನ್ನಡದಲ್ಲಿ ವಾಸ್ತವವಾದಿ ಅಥವಾ ವಾಸ್ತವವಾದ ಎಂಬ ಪದವನ್ನು ಬಳಸಲಾಗುತಿತ್ತು. ರಮ್ಯವಾದ ಮತ್ತು ವಾಸ್ತವವಾದಗಳ ಸಾಮ್ಯ ಮತ್ತು ವ್ಯತ್ಯಾಸಗಳನ್ನು ಕುರಿತಂತೆ ಎ.ಎನ್. ಮೂರ್ತಿರಾಯರು ತಮ್ಮ ಅಭಿಪ್ರಾಯವನ್ನು ಹೀಗೆ ಸಂಗ್ರಹಿಸುತ್ತಾರೆ. "ರೊಮ್ಯಾಂಟಿಕ್ ಕವಿಗಳೇನೊ ಸ್ವಲ್ಪ ಮಟ್ಟಿಗೆ ಸ್ವಾತಂತ್ರ್ಯವನ್ನು ಸಾಧಿಸಿದವರು ಆದರೆ ನಿಜವಾಗಿ ನೋಡಿದರೆ ಅವರು ವಾಸ್ತವ ಪ್ರಪಂಚದ ಗೊಡವೆಯನ್ನು ಬಿಟ್ಟು ಯಾರೂ ಕಾಣದ ರಮ್ಯ, ಅದ್ಭುತ ಪ್ರಪಂಚವೊಂದನ್ನು ನಿರ್ಮಿಸಿಕೊಂಡರು. ಕಲ್ಪನಾ ಸಾಮ್ರಾಜ್ಯದಲ್ಲಿ ಓಲಾಡಿದರು , ಮಾನವ ಪ್ರಪಂಚದಲ್ಲಿರುವ ನಮಗೆ ಆ ಕನಸುಗಳನ್ನು ಕಟ್ಟಿಕೊಂಡು ಆಗಬೇಕಾದದ್ದೇನು? ಪ್ರಕೃತಿಯಲ್ಲಿ ಅವರು ಕಾಣುವ ಭವ್ಯತೆ, ಅವರ ಅಪ್ಸರೆಯರು ಇವೆಲ್ಲ ನಮ್ಮ ಪ್ರಪಂಚದಲ್ಲಿದೆಯೆ? ಅವನ್ನೆಲ್ಲಾ ಕವಿ ತನ್ನ ಕಲ್ಪನೆಯಿಂದ ಹೊತ್ತು ತಂದಿದ್ದಾನೆ. ಕೋಲ್‌ರಿಜ್ ಹೇಳಿದಂತೆ **'we receive but what we give** 'ನಾವು ಪಡೆಯುವುದಾದರು ನಾವು ಕೊಟ್ಟಿದ್ದನ್ನೆ ಅಥವಾ ಅವೆಲ್ಲ ಇವೆಯೆಂದು ಒಪ್ಪಿದರೂ,ಪ್ರಪಂಚದಲ್ಲಿರುವುದು ಅಷ್ಟು ಮಾತ್ರವೇ? ಮಲೆನಾಡಿನಲ್ಲಿ ಸೌಂದರ್ಯವಿದೆ, ಜೊತೆಗೆ ಮಲೇರಿಯವು ಇದೆ. ಸಾಮಾನ್ಯ ಮಾನವನಲ್ಲಿ ಘನತೆಯಿದೆಯೋ ಇಲ್ಲವೋ– ಕುಡುಕತನ,ವಂಚನೆ, ಕ್ರೌರ್ಯ, ದಾರಿದ್ರ್ಯ ಇವಂತೂ ಇದ್ದೇ ಇವೆ. ಇವೂ ಜೀವನದಲ್ಲಿರುವ ಅಂಶಗಳೇ ಅಲ್ಲವೇ. ಅಲ್ಲದೇ ಇಂದಿನ ಪ್ರಪಂಚದಲ್ಲಿ ಜಟಿಲತೆ ಹೆಚ್ಚು . ಹೊಸ ಅನುಭವಗಳು ಬಂದಿವೆ. ಹೊಸ ವಸ್ತುಗಳು ಅಸ್ತಿತ್ವಕ್ಕೆ ಬಂದಿದೆ . ಇವೊಂದಕ್ಕೂ ರೊಮ್ಯಾಂಟಿಕ್ ಕವಿಗಳಲ್ಲಿ ಸ್ಥಾನ ಸಿಕ್ಕಿಲ್ಲ . ರೇಡಿಯೋ, ಬಸ್ಸು, ಟೆಲಿಫೋನ್, ಬ್ಯಾಟರಿ , ಟ್ರಾನ್ಸಿಸ್ಟರ್ ಇವೆಲ್ಲ ನಾವು ದಿನವೂ ಉಪಯೋಗಿಸುವ ವಸ್ತುಗಳು , ಅವು ಕಾವ್ಯದಲ್ಲೂ ಏಕೆ ಬರಬಾರದು"[೭] ಎಂದು ಪ್ರಶ್ನಿಸುವ ಮೂರ್ತಿರಾಯರು ನಮ್ಮ ಕಣ್ಣಿಗೆ ಕಾಣುವ ಪ್ರಪಂಚವನ್ನು ನಾವು ಚಿತ್ರಿಸಬೇಕು. ಆದರ್ಶ

ರಾಜ್ಯವನ್ನಲ್ಲ ಎನ್ನುತ್ತಾರೆ . ನಮ್ಮ ಕಣ್ಣಿಗೆ ಸೌಂದರ್ಯ ಕಾಣದಿದ್ದರೂ ಸತ್ಯವನ್ನು ನುಡಿಯಬೇಕೆನ್ನುತ್ತಾರೆ. ಅನಂತರ **'Real'** ಎಂಬ ಪದಕ್ಕೆ ಸತ್ಯವಾದದ್ದು ಎಂಬ ಅರ್ಥವನ್ನು ಕೊಟ್ಟರೆ ಒಟ್ಟಿನಲ್ಲಿ ರೊಮ್ಯಾಂಟಿಕ್ ಕವಿಗಳ ವಾದಕ್ಕೂ ವಾಸ್ತವಿಕ ಕವಿಗಳ ವಾದಕ್ಕೂ ತತ್ವತಃ ನಾವು ಎಣಿಸುವ ಭೇದವಿಲ್ಲ. ವಾಸ್ತವಿಕ, ಸತ್ಯ ಇವೆರಡಕ್ಕೂ ಭೇದ ಕಲ್ಪಿಸಿದರೆ ಅದು ಬೇರೆಮಾತು. ವಾಸ್ತವಿಕ ಎನ್ನುವುದು ಆಗ 'fact' (ಅದನ್ನು ಅಸ್ತ್ರಂಶ ಅಥವ ತಥ್ಯ ಎಂದು ಕರೆಯಬಹುದು ) ಆಗುತ್ತದೆ . ರೊಮ್ಯಾಂಟಿಕ್ ಕವಿಗಳ ಅದ್ಭುತ ರಮ್ಯ ಪ್ರಪಂಚ ಮನಸ್ಸಿನ ಕಲ್ಪನೆಯಾದರೂ ಅದಕ್ಕೆ ಆಧಾರ ಜೀವನವೇ. ಅಲ್ಲದೆ ಆ ಕಲ್ಪನೆ ಸತ್ಯವೆಂದೇ ಅವರ ನಂಬಿಕೆ"[೨].ಹೀಗೆ ವಾಸ್ತವತವಾದಿಗಳು ವಾಸ್ತವ ಜಗತ್ತನ್ನು ಭೌತಿಕ ಪ್ರಪಂಚವನ್ನು ತಮ್ಮ ಕೃತಿಗಳಲ್ಲಿ ಚಿತ್ರಿಸಿದರು. ಜೊತೆಗೆ ಆದರ್ಶೀಕೃತ ಪಾತ್ರಗಳಿಗೆ ಬದಲಾಗಿ ಸಾಮಾನ್ಯ (ಜನತೆ) ಪಾತ್ರಗಳನ್ನು ತಮ್ಮ ಕೃತಿಗಳ ಜೀವಾಳವಾಗಬೇಕೆಂದು ಬಯಸಿದರು.

"ವಾಸ್ತವತಾವಾದ ಯಾವತ್ತೂ ಮೂರ್ತ ಜಗತ್ತಿನ ಮೂರ್ತ ವಿವರಗಳ ಅಂತರ್‌ಸಂಬಂಧಗಳನ್ನು ಮುಖ್ಯವಾಗಿ ಪರಿಗಣಿಸುತ್ತದೆ. ಹೀಗಾಗಿ ವಸ್ತುನಿಷ್ಠತೆ ಇದರ ಪ್ರಧಾನ ಕಾಳಜಿಯಾಗುತ್ತದೆ. ವೈಯಕ್ತಿಕ ನಿಲುವುಗಳಿಗಿಂತ ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಸಂರಚನೆಗಳನ್ನು ಅವರು ಎಷ್ಟು ಸಮಗ್ರವಾಗಿ ಮತ್ತು ಅಧಿಕೃತವಾಗಿ ಗ್ರಹಿಸುತ್ತಾರೆ ಎಂಬುದರಲ್ಲಿದೆ"[೮].ಆದ ಕಾರಣ ಇಲ್ಲಿ ಲೇಖಕನ ಜವಾಬ್ದಾರಿ ಮುಖ್ಯವಾಗುತ್ತದೆ. ಆತನ ಮಾನವೀಯ ಸಂಬಂಧಗಳನ್ನು ಆಶಯಗಳನ್ನು ವಿವರವಾಗಿ ತಿಳಿಯಬೇಕಾಗುತ್ತದೆ. ಹಾಗಾದಾಗ ಮಾತ್ರ ಲೇಖಕ ತತ್ವಜ್ಞಾನಿಗಿಂತ ಹೆಚ್ಚಿನದನ್ನು ಸಾಧಿಸಬಲ್ಲ.

ಹದಿನಾಲ್ಕನೆಯ ಶತಮಾನದಿಂದೀಚೆಗೆ ವಿಜ್ಞಾನ ಕ್ಷೇತ್ರದಲ್ಲಿ ಆವಿಷ್ಕಾರಗಳಾಗ ತೊಡಗಿದಾಗ (ಯೂರೋಪಿನಲ್ಲಿ) ಬದುಕನ್ನು ಅರ್ಥೈಸುವ ಮತ್ತು ವಿಶ್ಲೇಷಿಸುವ ರೀತಿಯಲ್ಲಿಯೂ ಬದಲಾವಣೆಗಳಾದವು. ಇದರಿಂದ ನಿಖರವಾದ ಆಶೋತ್ತರಗಳು ಕೃತಿಯಲ್ಲಿ ಮೂಡಿದವು. ಈ ತರಹದ ವೈಜಾನಿಕ ಬೆಳವಣಿಗೆ ಕೂಡ ವಾಸ್ತವವಾದದ ಮೇಲೆ ತನ್ನ ಪ್ರಭಾವವನ್ನು ಬೀರಿತು. ಯೂರೋಪಿನಲ್ಲಾದ ಕೈಗಾರಿಕಾ ಕ್ರಾಂತಿಯ ಪರಿಣಾಮವಾಗಿ ಬದುಕಿನಲ್ಲಾದ ಬದಲಾವಣೆ, ವಾಸ್ತವವಾದಿ ಪರಿಕಲ್ಪನೆ ಹೆಚ್ಚು ನಿರ್ಧಿಷ್ಟವಾದುದಲ್ಲದೆ ನಿರ್ಣಾಯಕ ನೆಲೆಯನ್ನು ತಲುಪಿತು. ಕೃತಿಗಳಲ್ಲಿ ವಿಮರ್ಶೆಗಳಲ್ಲಿ ವಾಸ್ತವವಾದದ ಪರಿಕಲ್ಪನೆ ಹೆಚ್ಚು ನಿಚ್ಚಳವಾಗಿ ಮೂಡಿತು . ಇಂತಹ ಹೊತ್ತಿನಲ್ಲಿ ಸಾಕಷ್ಟು ಲೇಖಕರು ಕೃತಿಗಳನ್ನು ರಚಿಸಿ ಪ್ರಸಿದ್ಧರಾದರು. ಸ್ಯಾಮೂಯೆಲ್ ರಿಚರ್ಡ್‌ಸನ್, ಹೆನ್ರಿಫೀಲ್ಡಿಂಗ್, ಸೇಂಡಾಲ್, ಬಾಲ್ಜಾಕ್, ಟಾಲ್‌ಸ್ಟಾಯ್, ದಾಸ್ತೊವಸ್ಕಿ, ಎಮೀಲಾಝೋಲಾ, ಮೊಪಾಸಾ– ಮೊದಲಾದ ಲೇಖಕರು. ಕಾಲಕ್ಕನುಗುಣವಾಗಿ ಈ ಲೇಖಕರ ಕೃತಿಗಳಲ್ಲಿ ಬದಲಾವಣೆ ಕಂಡುಬಂದರೂ ಮೂಲ ಆಶಯ ಮಾತ್ರ ಒಂದೇ ಆಗಿದೆ. ಈ ವಾಸ್ತವವಾದದಲ್ಲಿ ಮುಖ್ಯವಾಗಿ ನಾಲ್ಕು ಕವಲುಗಳನ್ನು ಗುರುತಿಸಲಾಗಿದೆ.

೧. ವಸ್ತುನಿಷ್ಠ ವಾಸ್ತವವಾದ ೨. ವ್ಯಕ್ತಿನಿಷ್ಠ ವಾಸ್ತವವಾದ ೩. ವಿಶ್ಲೇಷಣಾತ್ಮಕ ವಾಸ್ತವವಾದ ೪. ಸಮಾಜವಾದಿ ವಾಸ್ತವವಾದ

ಕನ್ನಡದ ಪ್ರಗತಿಶೀಲ ಕಾದಂಬರಿಕಾರರು ಚಾರ್ಟ್ಸ್, ಡಿಕೆನ್ಸ್, ಗಾಲ್ಸವರ್ದಿ, ಟಾಲ್‌ಸ್ಟಾಯ್ ಅವರ ಕಾದಂಬರಿಗಳನ್ನು ಅಭ್ಯಸಿಸಿ ಅವರ ಹಾದಿಯನ್ನೇ ಹಿಡಿದರು. ಆರಂಭದ ನವೋದಯ ಬರಹಗಾರರಲ್ಲಿ ವಾಸ್ತವದೃಷ್ಟಿ ತಾನೇ ತಾನಾಗಿ ಮೂಡಿಬಂದಿದೆ. ಕಲ್ಕಿ, ತುತ್ತಿನಚೀಲ, ಕುರುಡು ಕಾಂಚಾಣ, ಅನ್ನಾವತಾರ ಮೊದಲಾದ ಕವನಗಳಲ್ಲಿ ಹಾಗೂ ಕುವೆಂಪು ಅವರ 'ಕಾನೂರು ಹೆಗ್ಗಡಿತಿ', ಮಾಸ್ತಿ ಅವರ 'ಚನ್ನಬಸವನಾಯಕ' ಕಾರಂತರ 'ಮರಳಿ ಮಣ್ಣಿಗೆ' 'ಬೆಟ್ಟದ ಜೀವ' ಗೋಕಾಕರ 'ಸಮರಸವೇಜೀವನ' ಮುಂತಾದ ಕೃತಿಗಳಲ್ಲಿ ವಾಸ್ತವದೃಷ್ಟಿ ಕಂಡುಬರುತ್ತದೆ. ಈ ಕೃತಿಗಳ ನಾಯಕರಲ್ಲಿ ಆದರ್ಶವಾದ ಕಂಡುಬಂದರೂ ಅಲ್ಲಿ ಲೇಖಕರ ವಾಸ್ತವ ದೃಷ್ಟಿ ಅಭಿವ್ಯಕ್ತಗೊಂಡಿದೆ.

ನವೋದಯದ ಅನಂತರ ಬಂದ ಲೇಖಕರು ವಿದೇಶಿ ಬರಹಗಾರರ ವಾಸ್ತವಾವಾದಿ ಕಾದಂಬರಿಗಳನ್ನು ಅಭ್ಯಸಿಸಿದ್ದರಿಂದ ಅವರ ಕೃತಿ ರಚನೆಗೆ ಭದ್ರ ಬುನಾದಿ ದೊರೆಯಿತು. ಮಧ್ಯಮ ವರ್ಗದಿಂದ ಬಂದ ಲೇಖಕರು ಸಾಮಾನ್ಯ ಜನತೆಯ ಬದುಕನ್ನು ಕುರಿತು ಬರೆಯಲಾರಂಭಿಸಿದರು ಕೌಟುಂಬಿಕ ಸಮಸ್ಯೆಗಳಾದ ವಿಷಮ ವಿವಾಹ , ಜಾತಿ ಸಮಸ್ಯೆಗಳು ವಿರಸ ದಾಂಪತ್ಯ , ಬಡತನ ಮುತಾದುವು ಕಾದಂಬರಿಯ ವಸ್ತುಗಳಾದವು. ಪಾಶ್ಚಾತ್ಯ ಸಾಹಿತ್ಯ ಮತ್ತು ಸಂಸ್ಕೃತಿಯ ಪ್ರಭಾವಕ್ಕೋಳಾಗಾದ ಅ.ನ.ಕೃ, ತ.ರಾ.ಸು, ನಿರಂಜನ, ಕಟ್ಟೀಮನಿ ಮುಂತಾದ ಲೇಖಕರು ತಮ್ಮನ್ನು ಪ್ರಗತಿಶೀಲರೆಂದು ಕರೆದುಕೊಂಡರು. "ಪಾಶ್ಚಾತ್ಯ ದೇಶದಲ್ಲಿ ಶ್ರೀಮಂತ ಜನರು ಸಮಾಜದಲ್ಲಿ, ರಾಜ್ಯದಲ್ಲಿ ಪ್ರಬಲರಾಗಿದ್ದು ಬಡವರನ್ನು ಬಾಳಿಸುವುದರಲ್ಲಿ ಆಸಕ್ತಿ ತೋರದೆ ಇದ್ದಾಗ ಬಡಜನರ ಪರವಾಗಿ ಗಂಟಲೆತ್ತುವುದಕ್ಕೆ ಹೊಸದನಿಯ ಸಾಹಿತ್ಯ ಮೊದಲಾಯಿತು. ಇದನ್ನು ಅಲ್ಲಿ ಸಾಮ್ಯವಾದದ ಸಾಹಿತ್ಯವೆಂದು ಕರೆಯುತ್ತಾರೆ. ಸಾಮ್ಯವಾದದ ಈ ಸಾಹಿತ್ಯದಂತೆ ನಮ್ಮಲ್ಲಿಯೂ ಸಾಹಿತ್ಯ ಬಡವರ ಬಾಯಿ ಆಗಬೇಕೆಂದು ಭರತವರ್ಷದ ಲೇಖಕರು ಬಯಸಿದ್ದಾರೆ. ಅದರಂತೆ ಇಲ್ಲಿಯು ಸಾಹಿತ್ಯವನ್ನು ನಿರ್ಮಿಸಲು ತೊಡಗಿ ಅದನ್ನು ಪ್ರೊಗ್ರೆಸ್ಸಿವ್ ಎಂದು ಕರೆದಿದ್ದಾರೆ. ಈ ಪ್ರೊಗ್ರೆಸ್ಸಿವ್ ಎನ್ನುವ ಮಾತಿಗೆ ನಮ್ಮ ಮಿತ್ರರ ಪ್ರಗತಿಶೀಲ ಎನ್ನುವುದು ಸಮಾನಾರ್ಥ ಶಬ್ದ . ಇದರಿಂದ ಸಾಮ್ಯವಾದವನ್ನು ಅಧಿಕರಿಸಿದ ಸಾಹಿತ್ಯ 'ಪ್ರಗತಿಶೀಲ' ಎಂದೂ ಉಳಿದ ಸಾಹಿತ್ಯ 'ಪ್ರಗತಿಶೀಲ' ಅಲ್ಲವೆಂದು ಭಾಸವಾಗುತ್ತದೆ"[೧೦]. ಎಂದು ಪ್ರಗತಿಶೀಲರ ನಿಲುವನ್ನು ವಿಶ್ಲೇಷಿಸಿದ ಮಾಸ್ತಿಯವರು "ನಿಜವಾದ ಆ ಪ್ರಗತಿ ಒಂದು ಪಂಗಡಕ್ಕೆ ಮಾತ್ರ ಒಪ್ಪಿಗೆಯಾಗುವುದಿಲ್ಲ. ಅದು ಎಲ್ಲ ಪಂಗಡಗಳ ಎಲ್ಲ ಜನಾಂಗಗಳ ಒಪ್ಪಿಗೆಯನ್ನು ಸೆಳೆಯುವಂತಿರಬೇಕು"[೧೧]. ಎಂಬ ತಮ್ಮ ಆಶಯವನ್ನು ಪ್ರಗಶೀಲರು ತಮ್ಮ ವಿಚಾರಧಾರೆಗಳ ಮೂಲಕ ಅದನ್ನೊಂದು ಚಳವಳಿಯಾಗಿ ರೂಪುಗೊಳಿಸಿದರು.

ಈ ರೀತಿ ಯಾವುದೇ ಒಂದು ಚಳವಳಿ ಸ್ಪಷ್ಟ ರೂಪವನ್ನು ಪಡೆಯಬೇಕಾದರೆ ಸಾಹಿತ್ಯಕ ಅಂಶಗಳಷ್ಟೆ ಕಾರಣವಲ್ಲ. ಅದಕ್ಕೆ ಅನುಗುಣವಾದ ಸಾಮಾಜಿಕ ಪರಿಸರ ಜಡ್ಡುಗಟ್ಟಿದ ವಾತಾವರಣ. ಇದರಿಂದ... ಮುಕ್ತರಾಗಬೇಕೆಂಬ ಆಕಾಂಕ್ಷೆ ಹೊಸತನಕ್ಕೆ ನಾಂದಿ ಹಾಡಬೇಕೆನ್ನುವ ಪ್ರತಿಭಟನಾ ಮನೋಭಾವ, ಹೊಸಸೃಷ್ಟಿಯ ಉತ್ಸಾಹ, ಛಲಗಳು ಚಳವಳಿಯೊಂದು ರೊಪುಗೊಳ್ಳಲು ಕಾರಣವಾಗುತ್ತದೆ . ಇಂತಹ ಅಶಯ ಮತ್ತು ಅಭಿವ್ಯಕ್ತಿ ಹೊಂದಿದ ಚಳವಳಿ ಘೋಷಣೆಯಾಗಿಯೇ ಉಳಿದಾಗ ಜನತೆ ಭ್ರಮನಿರಸನಕ್ಕೊಳಗಾಗುತ್ತಾರೆ . ಇದರಿಂದ ಹೋರಾಟ ಅವನತಿಯತ್ತ ಸಾಗುತ್ತದೆ. ಪ್ರಗತಿಶೀಲ ಚಳವಳಿ ಕೂಡ ಇಂಥದೇ ಪರಿಸ್ಥಿತಿಯನ್ನು ಎದುರಿಸಿ ಪ್ರಚಾರಕ್ಕೆ ಬಂದಷ್ಟೇ ವೇಗವಾಗಿ ಅವಸಾನಗೊಂಡಿತು. ಅದರ ಸಾಧನೆ ಮತ್ತು ವೈಫಲ್ಯಗಳನ್ನು ಮುಂದೆ ಚರ್ಚಿಸಲಾಗುತ್ತದೆ.

**೨.೩. ಕನ್ನಡ ಸಾಹಿತ್ಯದಲ್ಲಿ ಪ್ರಗತಿಶೀಲತೆ :**

ಪ್ರಗತಿಶೀಲ ಚಳವಳಿ ಆರಂಭವಾಗುವುದಕ್ಕಿಂತಲೂ ಮುಂಚೆಯೇ ನಮ್ಮ ಭಾಷೆ ಮತ್ತು ಸಾಹಿತ್ಯದಲ್ಲಿ ಪ್ರಗತಿಪರ ನಿಲುವುಗಳು ವ್ಯಕ್ತವಾಗಿರುವುದನ್ನು ಕಾಣುತ್ತೇವೆ. ಪ್ರಗತಿಪರ ಮನೋಧರ್ಮ ಪ್ರಗತಿಶೀಲ ಲೇಖಕರಿಂದಲೇ ರೂಪುಗೊಳ್ಳಲಿಲ್ಲ. ಹಳಗನ್ನಡ ಸಾಹಿತ್ಯವನ್ನು ನೋಡಿದಾಗ ರಾಜಾಶ್ರಯಗಳಲ್ಲಿ ಕಾವ್ಯರಚನೆ ಮಾಡಿದ ಕವಿಗಳಲ್ಲಿ ಪ್ರಗತಿಪರ ನಿಲುವುಗಳು ಕಂಡುಬರುತ್ತವೆ. ಹೀಗೆ ಕನ್ನಡ ಸಾಹಿತ್ಯದಲ್ಲಿರುವ ಪ್ರಗತಿಯ ಕುರುಹುಗಳನ್ನು ಸ್ಥೂಲವಾಗಿ ಗಮನಿಸುವ ಪ್ರಯತ್ನ ಮಾಡಲಾಗಿದೆ. ಈ ತರಹದ ಪ್ರಗತಿಪರ ಧೋರಣೆ ಪಂಪನಿಂದಲೇ ಕಂಡುಬರುತ್ತದೆ. ಪಂಪ ತನಗಿಂತ ಪೂರ್ವದಲ್ಲಿದ್ದ ಪುರಾಣವನ್ನು ಹೊರತುಪಡಿಸಿ ಸಮಾಜಕ್ಕೆ ಸಂವಾದಿಯಾಗಬಹುದಾದ ಲೌಕಿಕ ಮತ್ತು ಧಾರ್ಮಿಕ ಎಂಬ ಮಾರ್ಗವನ್ನು ಅನುಸರಿಸಿದ್ದಾನೆ. “ಬೆಳಗುವೆನಿಲ್ಲಿ ಲೌಕಿಕಮನಲ್ಲಿ ಜಿನಾಗಮಮಂ” ಎಂದು ಹೊಸತನ್ನು ಹುಟ್ಟುಹಾಕಿದ್ದಾನೆ . ‘ಮನುಷ್ಯ ಜಾತಿ ತಾನೊಂದೆ ವಲಂ’ ಎಂಬ ಉದ್ಘೋಷಣೆಯೇ ಮೂಲತಃ ಪ್ರಗತಿಪರವಾದುದು.

ನಯಸೇನನು ‘ಧರ್ಮಾಮೃತ’ ದಲ್ಲಿ ಪ್ರಗತಿ ವಿಚಾರವನ್ನು ಖಚಿತವಾಗಿ ತಿಳಿಸಿದ್ದಾನೆ . ಇದು ಜನತೆಗಾಗಿ ರಚಿಸಿದ ಮೊದಲ ಜೈನಪುರಾಣ ‘ಮಿಸುಕನಿಯ ಸಕ್ಕದ’ ವನ್ನು ಕಡೆಗಣಿಸಿ ಶುದ್ಧ ಕನ್ನಡದಲ್ಲಿ ಬರೆಯಬೇಕೆಂದು ಸೂಚಿಸಿದ್ದಾನೆ. ಪರಂಪರೆಯ ಜಾಡಿನಲ್ಲೇ ಕೃತಿ ರಚಿಸುವವರನ್ನು ತನ್ನ ಕೃತಿಯ ಅರಂಭದಲ್ಲೇ ಟೀಕಿಸುವ ಧೈರ್ಯವನ್ನು ತೋರಿದ್ದಾನೆ. “ಜನತೆಯ ಕವಿಗಳೆಂದು ಹೆಸರಾದ ಕನ್ನಡ ಕಲೋಪಾಸಕರಲ್ಲಿ ನಯಸೇನನು ತೀರಾ ಎತ್ತರದಲ್ಲಿ ಅಲ್ಲದಿದ್ದರೂ ಎದ್ದುಕಾಣುವ ನೆಲೆಯಲ್ಲಿ ಕೂಡಬಲ್ಲ ನಿರುಪಮ ಸಹಜ ಕವಿಯಾಗಿದ್ದಾನೆ”[೧೨] ಎನ್ನುವ ವಿಮರ್ಶಕರ ಮಾತು ಗಮನಾರ್ಹವಾದುದು.

ಪಂಪ, ರನ್ನ, ಜನ್ನ, ಮೊದಲಾದ ಕವಿಗಳು ವೈದಿಕ ಧರ್ಮದ ಪುರೋಹಿತಶಾಹಿ ಮೌಲ್ಯಗಳನ್ನು ಬದಿಗಿರಿಸಿ ಜೈನಧರ್ಮದ ತತ್ವಗಳನ್ನು ಎತ್ತಿ ಹಿಡಿದದ್ದು ಪ್ರಗತಿಪರ ಧೋರಣೆಯೇ. ರಾಜಮಹಾರಾಜರುಗಳನ್ನು ಆಶ್ರಯಿಸುತ್ತಲೆ ರಾಜಪ್ರಭುತ್ವ ಪ್ರತಿಭಟಿಸಿರುವ ಸೂಕ್ಷ್ಮ ಎಳೆಗಳನ್ನು ಅವರ ಕೃತಿಗಳಲ್ಲಿ ಕಾಣುತ್ತೇವೆ. ಕೃತಿಗಳ ಆಂತರ್ಯದಲ್ಲಿ 'ವರ್ಣ' ಪ್ರತಿಭಟನೆಯನ್ನು ಬಿಟ್ಟರೆ 'ವರ್ಗ' ಪ್ರತಿಭಟನೆಯನ್ನು ಕಾಣುತ್ತೇವೆ. ಪಂಪ "ಪೆರರೀವುದೇಂ ಪೆರರು ಮಾಡುವುದೇಂ ಪೆರರಿಂದಮಪ್ಪುವುದೇಂ" ಎಂದು ಹೇಳುವಲ್ಲಿ ಆಳುವ ವರ್ಗವನ್ನು ಉಪೇಕ್ಷಿಸುತ್ತಾನೆ. "ನಿಜದೊಳೆ ಭೂಪರೆಂಬುವರವಿವೇಕಿಗಳ್" ಎಂದು ಅಶ್ವತ್ಥಾಮ, "ಓಲಗಿಸಿ ಬಾಳ್ವುದೆ ಕಷ್ಟಮಿಳಾಧಿನಾಥರಂ ತೊಳ್ತಿನ ಮೊಲೆವಾಲನುಂಡಗುಣಂ........ನರೇಂದ್ರರೊಳ್"[೧೩] ಎಂದು ಶಲ್ಯ ಮಾಡುವ ನಿಂದನೆ ವರ್ಗಪ್ರತಿಭಟನೆಗಳೇ ಆಗಿವೆ.

ತಮ್ಮ ಅಂತರಂಗದ ಅನುಭವಗಳನ್ನು ವಚನಗಳ ಮೂಲಕ ತಿಳಿಸಿದ ವಚನಕಾರರು ಕ್ರಾಂತಿಕಾರರೂ ಹೌದು ಹಾಗೂ ಪ್ರಗತಿಶೀಲರೂ ಹೌದು. ಮಾರ್ಗದಿಂದ ದೇಸಿಯತ್ತ ಹೊರಳಿದ ಹನ್ನೆರಡನೆ ಶತಮಾನ ಸಾಮಾನ್ಯ ಜನರ ಆಡುನುಡಿಯನ್ನೇ ಅಭಿವ್ಯಕ್ತಿ ಮಾಧ್ಯಮವಾಗಿಸಿಕೊಂಡಿತು. "ವಚನಕಾರರ ಸಾಮಾಜಿಕ ಪ್ರತಿಭಟನೆ ಮತ್ತು ಸಾಹಿತ್ಯದ ಪ್ರತಿಭಟನೆಗಳು ಒಂದೇ ಪ್ರಕ್ರಿಯೆಯ ಜೈವಿಕ ಸಂಬಂಧವುಳ್ಳ ಅಂಗಗಳಾಗಿವೆ. ವೀರಶೈವ ಶರಣರು ಆಗಿನ ವ್ಯವಸ್ಥೆಯನ್ನು ಅದರಲ್ಲಿ ಅಂತರ್ಗತವಾಗಿದ್ದ ವೈರುಧ್ಯಗಳಿಗಾಗಿ ಪ್ರತಿಭಟಿಸಿದರು . ಹಿಂದೂ ಸಮಾಜದ ವರ್ಣವ್ಯವಸ್ಥೆಯನ್ನು ತಿರಸ್ಕರಿಸಿದರು"[೧೪]. ಈ ರೀತಿ ವಚನಗಳು ಸಾಮಾಜಿಕ ಪರಿವರ್ತನೆಗೆ ಪೂರಕವಾಗಿ ಮೂಡಿಬಂದವು. ಇವು ಸ್ವಾನುಭವ ಜನ್ಯವಾದುದರಿಂದ ವಚನಗಳಲ್ಲಿ ಜನಪರ ಧೋರಣೆ ಸಹಜವಾಗಿಯೇ ಮೂಡಿಬಂದಿದೆ. ಸಾಮಾನ್ಯ ವ್ಯಕ್ತಿಗಳಾದ ಮಡಿವಾಳ ಮಾಚಯ್ಯ, ಆಯ್ದಕ್ಕಿ ಮಾರಯ್ಯ, ಅಂಬಿಗರ ಚೌಡಯ್ಯ ಮುಂತಾದವರು ವಚನ ರಚಿಸಿದುದರಿಂದ ಸಾಹಿತ್ಯ ಪಂಡಿತರಿಂದ ಸಾಮಾನ್ಯರೆಡೆಗೆ ವಾಲಿದ್ದರ ಕುರುಹಾಗುತ್ತದೆ.

ವಚನ ಸಾಹಿತ್ಯದ ಅನಂತರ ಬಂದ ಹರಿಹರ , ರಾಘವಾಂಕ , ಕುಮಾರವ್ಯಾಸರು ಜನಪರ ನಿಲುವುಗಳನ್ನು ಸ್ಪಷ್ಟವಾಗಿ ಪ್ರತಿಪಾದಿಸಿದರು. ಹರಿಹರ ಚಂಪು ಶೈಲಿಯನ್ನು ತೊರೆದು ದೇಸಿ ಛಂದಸ್ಸಾದ ರಗಳೆಯನ್ನು ಪ್ರಯೋಗಿಸಿದ. ಶಿವಭಕ್ತರಾದ ಸಾಮಾನ್ಯ ಜನತೆ ಇವನ ರಗಳೆ ನಾಯಕರು. ರಾಜಾಶ್ರಯವನ್ನು ತಿರಸ್ಕರಿಸಿದ ಹರಿಹರ 'ಮನುಜರ ಮೆಲೆ ಸಾವವರ ಮೇಲೆ ಕೃತಿ ರಚಿಸುವುದಿಲ್ಲವೆಂದಿದ್ದು ಹರಿಹರ ಒಬ್ಬ ಜನಪರ ಕವಿಯೆಂಬುದು ಗೊತ್ತಾಗುತ್ತದೆ.

ಹರಿಹರನ ಸೋದರಳಿಯನಾದ ರಾಘವಾಂಕನ ಕೆಲವು ಕೃತಿಗಳಲ್ಲಿ ಪ್ರಗತಿಯ ಹೊಳಹನ್ನು ಕಾಣುತ್ತೇವೆ. ಶಿವಭಕ್ತನನ್ನು ಬಿಟ್ಟು ಭವಿಯನ್ನು ಕಾವ್ಯನಾಯಕನನ್ನಾಗಿ ಮಾಡಿಕೊಂಡಿದ್ದನ್ನು ಬಿಟ್ಟರೆ ಅಸ್ಪೃಶ್ಯತೆ, ಮತೀಯತೆಯನ್ನು ಮೆರೆಯುತ್ತಾನೆ. ಆದ ಕಾರಣ ಈತನ ಪ್ರಗತಿಶೀಲ ಧೋರಣೆ ಚರ್ಚಾಸ್ಪದವಾಗಿದೆ. ಭಕ್ತಕವಿ ಎಂದೇ ಪ್ರಸಿದ್ಧನಾದ ಕುಮಾರವ್ಯಾಸ ಕೂಡ

ದೇಸಿ ಛಂದಸ್ಸಾದ ಷಟ್ಪದಿಯನ್ನು ಬಳಸುತ್ತಾನೆ.

ಆಡುನುಡಿ, ಸುಂದರ ಲಯಗಾರಿಕೆ,ಹಾಡುಗಬ್ಬದ ಗೇಯತೆ ಎಲ್ಲಕ್ಕಿಂತ ಮಿಗಿಲಾಗಿ ಮಾನವೀಯ ಸಂಬಂಧಗಳ ಎಲ್ಲಾ ಆಯಾಮಗಳನ್ನು ಪ್ರಯೋಗಿಸಿದ್ದು ಅವನ ವಿಶಿಷ್ಟ ಕ್ರಮವೇ ಸರಿ. ಇದನ್ನು ಅವನ ಜನಪರ ಆಶಯವೆಂದು ಹೇಳಬಹುದು. ವಸ್ತುಕವಾಗಿದ್ದ ಛಂದಸ್ಸನ್ನು ವರ್ಣಕವಾಗಿ ಬೆಳೆಸಿದ್ದರಿಂದ ರತ್ನಾಕರವರ್ಣಿ ಒಬ್ಬ ಉತ್ತಮ ಪ್ರಗತಿಶೀಲನೇ. ಭರತೇಶವೈಭದಲ್ಲಿ ತ್ಯಾಗ ಭೋಗಗಳ ಸಮನ್ವಯವನ್ನು ಸಾಧಿಸಿದ್ದು ಅವನ ಹಿರಿಮೆ.

ಪ್ರಗತಿಸಾಹಿತ್ಯದ ಶ್ರೇಷ್ಠ ಕವಿ ಸರ್ವಜ್ಞ, ಅತನ ಬದುಕೆ ಕ್ರಾಂತಿಕಾರಕವಾದುದು. ಇವನ ತ್ರಿಪದಿಗಳು ಪ್ರಗತಿಶೀಲ ಸಾಹಿತ್ಯದ ಶ್ರೇಷ್ಠವಾದ ರಚನೆಗಳು, ಸಮಗ್ರ ಜೀವನಸಾರವೇ ತ್ರಿಪದಿಗಳಲ್ಲಿ ಮೇಳೈಸಿದೆ. ಆಡುನುಡಿಯ ಪ್ರಯೋಗ ನೀತಿಪರವಾದ ಅನುಭವ ಜನ್ಯವಾದ ಧೋರಣೆಗಳು ಜೀವನಸತ್ಯವನ್ನು ಸುಲಲಿತವಾಗಿಯೇ ಬಿಂಬಿಸುತ್ತದೆ. ಹಾಗಾಗೀ ಸರ್ವಜ್ಞ ಜನತೆಯ ಕವಿ ಹಾಗು ಜನಪರ ಕವಿ. ಹೀಗೆ ನಡುಗನ್ನಡದ ಬಹುತೇಕ ಸಾಹಿತ್ಯ ಕೃತಿಗಳಲ್ಲಿ ಪ್ರಗತಿಪರವಾದ ಆಶಯಗಳು ವ್ಯಕ್ತವಾಗಿವೆ. ನೇರವಾಗಿಯಲ್ಲದ್ದಿದ್ದರೂ ಘಟನೆಗಳಲ್ಲಿ, ಸನ್ನಿವೇಶಗಳಲ್ಲಿ ಪಾತ್ರಗಳ ಮಾತುಕತೆಗಳಲ್ಲಿ ಕಂಡುಬರುತ್ತದೆ. ಪ್ರಗತಿಪರ ನಿಲುವನ್ನು ಪ್ರತಿಪಾದಿಸುವುದೇ ಮುಖ್ಯ ಉದ್ದೇಶವಲ್ಲದಿದ್ದರೂ ಅವ್ಯಕ್ತವಾಗಿಯಾದರೂ ಆಂತರಂಗಿಕ ನಿಲುವು ಕೃತಿಗಳಲ್ಲಿ ಒಡಮೂಡಿದೆ.

ಮುದ್ದಣನ ಕೃತಿಗಳು ಹಳಗನ್ನಡದಲ್ಲಿವೆಯಾದರೂ ಆತನೊಬ್ಬ ಪ್ರಗತಿಪರ ಲೇಖಕನೇ. “ಪದ್ಯಂ ವದ್ಯಂ ಗದ್ಯಂ ಹೃದ್ಯಂ ಹೃದ್ಯಮಪ್ಪ ಗದ್ಯದೊಳೆ ಪೇಳ್ವುದು” ಎಂದು ಸಾರಿದ ಮುದ್ದಣ ತಿರುಳ್ಗನ್ನಡದಲ್ಲಿ ಕೃತಿರಚಿಸುವುದರ ಮೂಲಕ ಹೊಸತನವನ್ನು ಮೆರೆದಿದ್ದಾನೆ. ‘ರಾಮಾಶ್ವಮೇಧದ’ ಆರಂಭದಲ್ಲಿ ದೇವತಾಸ್ತುತಿ ಮಾಡದೆ ನೇರವಾಗಿ ಕತೆಯನ್ನು ಹೇಳುವುದರ ಮೂಲಕ ಕ್ರಾಂತಿಕಾರಕ ಬದಲಾವಣೆಯನ್ನು ತಂದಿದ್ದಾನೆ. ಮುದ್ದಣ ಮನೋರಮೆಯರ ಸಂಭಾಷಣೆಯಲ್ಲಿ ಶೃಂಗಾರವನ್ನು ಮುಕ್ತವಾಗಿ ಹೇಳುವ ಅಳುಕು ಕಂಡುಬರುತ್ತದೆ. ಕೆಂಪುನಾರಾಯಣನ ಗದ್ಯಕೃತಿ ‘ಮುದ್ರಾಮಂಜುಷ’ ದಲ್ಲಿ ನವನಂದರ ದಬ್ಬಾಳಿಕೆ ವಿರುದ್ಧ ಚಂದ್ರಗುಪ್ತ ಮೌರ್ಯನನ್ನು ಎತ್ತಿಕಟ್ಟುವ ಚಾಣಕ್ಯನ ತಂತ್ರ ಕೂಡಾ ಪ್ರಗತಿಪರವಾದುದ್ದು. ಹೀಗೆ ಕನ್ನಡ ಸಾಹಿತ್ಯದಲ್ಲಿ – ಹಳಗನ್ನಡ, ನಡುಗನ್ನಡ, ಚಂಪೂ, ಮಾರ್ಗ ಮತ್ತು ದೇಸಿಯಲ್ಲಿ ಪ್ರಗತಿಶೀಲತೆಯನ್ನು ಗುರುತಿಸಬಹುದಾಗಿದೆ.

ಅಲ್ಲದೆ ಜನಪದ ಸಾಹಿತ್ಯದಲ್ಲಿಯೂ ಪ್ರಗತಿಪರವಾದ ನಿಲುವುಗಳನ್ನು ಕಾಣುತ್ತೇವೆ. ಜಾನಪದ ಗೀತೆಗಳಲ್ಲಿ, ಜನಪದ ಕತೆಗಳಲ್ಲಿ, ಕಾವ್ಯಗಳಲ್ಲಿಯೂ ಕೂಡ ಸಾಮಾಜಿಕ ಮೌಲ್ಯಗಳನ್ನು ಪ್ರತಿಭಟನೆ, ಬಂಡಾಯವನ್ನು ಕಾಣುತ್ತೇವೆ. ಕೆರೆಗೆಹಾರದಂತಹ ಕಥನಕವನದಲ್ಲಿ ಬಂಜೆತನ, ಬಡತನ, ತ್ಯಾಗ ಮುಂತಾದ ಮೌಲ್ಯಗಳು ಕಂಡುಬಂದರೂ ಒಟ್ಟು ಅದರ ಆಂತರಿಕ ಉದ್ದೇಶ ಅವ್ಯವಸ್ಥೆಯ ವಿರುದ್ಧದ ಪ್ರತಿಭಟನೆಯೇ ಆಗಿದೆ.

ನವೋದಯ ಸಾಹಿತ್ಯ ತನ್ನ ಹಿಂದಿನ ಸಾಹಿತ್ಯಕ ಸಂಪ್ರದಾಯದ ತೊಡಕುಗಳನ್ನು ಕೈಬಿಟ್ಟು ಹೊಸ ಸೃಷ್ಠಿಗೆ ನಾಂದಿ ಹಾಡಿತು. ಆರಂಭದ ಗದ್ಯ ಕೃತಿಗಳಾದ ಯಾದವನ 'ಕಲಾವತಿಪರಿಣಯ '(೧೮೧೫), ಮುಮ್ಮಡಿ ಕೃಷ್ಣರಾಜರ 'ಸೌಗಂಧಿಕಾ ಪರಿಣಯ'(೧೮೨೧), ಕೆಂಪುನಾರಾಯಣನ 'ಮುದ್ರಾಮಂಜೂಷ' (೧೮೨೫), ಇವುಗಳಲ್ಲಿ ಅಲಂಕಾರ, ವೀರ, ಶೃಂಗಾರ ರಸಗಳು ದೇವದಾನವರನ್ನು ಒಳಗೊಂಡು ಅಲೌಕಿಕ ವಿಚಾರಗಳು ಪ್ರಮುಖವಾದ ವರ್ಣನಾತ್ಮಕ ಅಂಶಗಳಾಗಿವೆ. ನಿರೂಪಣೆಯಲ್ಲಿ ರಮ್ಯತೆ, ರೋಚಕತೆ, ವರ್ಣನೆಗಳಲ್ಲಿ ರಂಜನೆಯ ಗುಣವನ್ನು ಪಡೆದುಕೊಂಡ ಈ ಕೃತಿಗಳ ಮೌಲಿಕ ನೆಲೆಯೇ ಬೇರೆಯಾದುದು. ಇದೇ ಗುಣವನ್ನು ಅನುವಾದ ಕಾದಂಬರಿಗಳಲ್ಲಿ ಕಾಣಬಹುದು. ಈ ಅಂಶಗಳನ್ನು ಬಿಟ್ಟುಕೊಟ್ಟ ನವೋದಯ ಸಾಹಿತ್ಯ ಸಾಮಾಜಿಕ ವಿಚಾರಗಳಿಗೆ, ಸರಳ ನಿರೂಪಣೆಗೆ ಒತ್ತು ಕೊಡುವುದರ ಮೂಲಕ ಬದಲಾವಣೆಯ ಹೊಸತನವನ್ನು ರೂಢಿಸಿಕೊಂಡಿತು.

ನವೋದಯ ಸಾಹಿತ್ಯದ ಆರಂಭದಲ್ಲಿ ಸಣ್ಣಕತೆ, ಕಾದಂಬರಿ, ಭಾವಗೀತೆ ಪ್ರಕಾರಗಳು ಯಥೇಚ್ಛವಾಗಿ ಮೂಡಿಬಂದವು. ಪ್ರಕೃತಿಪರವಾದ ಒಲವನ್ನುಳ್ಳ ಈ ರಚನೆಗಳಲ್ಲಿ ಆದರ್ಶವಾದ, ಮಾನವೀಯ ಅಂತಃಕರಣ, ಅತೀಂದ್ರಿಯ ಅನುಭವಗಳೇ ಕಂಡುಬರುತ್ತವೆ. ಕುವೆಂಪು, ಬೇಂದ್ರೆ ಮುಂತಾದವರ ಹಲವು ಕವಿತೆಗಳು ಕಾರಂತ, ಮಾಸ್ತಿಯವರ ಗದ್ಯಕೃತಿಗಳು, ಪ್ರಗತಿಶೀಲ ಯುಗದ ಯಾವುದೇ ಕೃತಿಗಿಂತ ಹೆಚ್ಚು ನೈಜವಾಗಿ, ಜನಪರವೂ, ಪ್ರಗತಿಸಾರವೂ ಆಗಿದೆಯೆಂಬುದನ್ನು ಯಾರೂ ಅಲ್ಲಗೆಳೆಯಲಾರರು"[೧೫] ಎನ್ನುವ ಅಭಿಪ್ರಾಯ ಕೂಡ ನವೋದಯ ಸಾಹಿತ್ಯವನ್ನು ಸರಿಯಾಗಿಯೇ ವಿಶ್ಲೇಷಿಸಿದಂತಾಗಿದೆ.

ಪ್ರಗತಿಶೀಲ ಚಳವಳಿ ಆರಂಭವಾಗುವ ಮುನ್ನವೇ ಪ್ರಗತಿಪರ ಧೋರಣೆಗಳನ್ನು ಕನ್ನಡ ಸಾಹಿತ್ಯದಲ್ಲಿ ಗುರುತಿಸುತ್ತೇವೆ.ಆದರೆ ಆ ಧೋರಣೆಗಳನ್ನು ಯಾರೂ ಗಮನಿಸದೇ ಇದ್ದುದ್ದರಿಂದ ಪ್ರಗತಿಶೀಲ ಚಳವಳಿ ಅರಂಭವಾಯಿತು. ೧೯೨೦ ರಿಂದ ೧೯೪೫ ರವರೆಗೆ ನವೋದಯ ಸಾಹಿತ್ಯ ಕೆಲವು ತನ್ನದೇ ಆದ ಲೋಪದೋಷಗಳಿಂದ ಸೊರಗತೊಡಗಿತು. ಅದರಲ್ಲಿನ ಏಕತಾನತೆಯಿಂದಾಗಿ ಸಾಹಿತ್ಯಕ್ಕೆ ಹೊಸ ತಿರುವನ್ನು ಕೊಡಬೇಕೆಂಬ ಉದ್ದೇಶದಿಂದ ಸಂಘವೊಂದು ರಚನೆಯಾಯಿತು. ಅದರೊಂದಿಗೆ ಪ್ರಗತಿಪ್ರಜ್ಞೆಯ ಅರಿವಾಗಿ ಚಳವಳಿ ಅರಂಭವಾಯಿತು. ಅದೇ ಪ್ರಗತಿಶೀಲ ಚಳವಳಿ (Progressive movement). "ನೀರು ನಿಂತಲ್ಲೇ ನಿಂತರೆ ಕೊಳೆತು ನಾರುತ್ತೆ ಅದು ಮುಂದು ಮುಂದು ಹರಿಯುತ್ತಿದ್ದರೆ ಚೆನ್ನ. ನಮ್ಮ ಸಾಹಿತ್ಯ ಬೆಳವಣಿಗೆ ಮುಂದುವರಿಯದೆ ಒಂದೆಡೆಯೇ ನಿಂತಿದ್ದರಿಂದ ಅದರ ದುರ್ನಾತವನ್ನು ಸಹಿಸಲಾರದೆ ಪ್ರಗತಿಶೀಲ ಸಾಹಿತ್ಯ ಅರಂಭವಾಗಬೇಕಾಯಿತು"[೧೬] ಎಂಬುದಾಗಿ ಕೃಷ್ಣರಾಯ ನಾಡಿಗೇರ ನಮ್ಮ ಸಾಹಿತ್ಯ ಅದರ ಗುರಿ ಎಂಬುದಾಗಿ ಅದರ ಹುಟ್ಟಿನ ಕಾರಣವನ್ನು ಈ ಮೇಲಿನಂತೆ ತಿಳಿಸುತ್ತಾರೆ.

## ೨.೪. ಪ್ರಗತಿಶೀಲ ಸಾಹಿತ್ಯ ಚಳವಳಿಯ ಸ್ವರೂಪ ಮತ್ತು ಹಿನ್ನೆಲೆ :

ಪ್ರಗತಿಶೀಲ ಸಾಹಿತ್ಯ ಚಳವಳಿ ಮೊದಲು ಅಂಕುರಿಸಿದ್ದು ಫ್ಯಾಸಿಸ್ಟ್ ಶಕ್ತಿಗಳ ದಬ್ಬಾಳಿಕೆಯಿಂದ ಬೇಸತ್ತಿದ್ದ ಯೂರೋಪಿನಲ್ಲಿ. ಅದೇವೇಳೆಗೆ ಲಂಡನ್ನಿನಲ್ಲಿ ವಕೀಲನಾಗಲು ಶಿಕ್ಷಣ ಪಡೆಯುವುದಕ್ಕೆ ಭಾರತದಿಂದ ಲಂಡನ್ನಿಗೆ ಹೋಗಿದ್ದ ಉರ್ದು ಸಾಹಿತಿ ಸಜ್ಜದ್‌ಜಾಹಿರ್ ಅವರು ತಮ್ಮ ಕಣ್ಣೆದುರಿನಲ್ಲೆ ಕಂಡ ಶೋಷಣೆ, ಕ್ರೌರ್ಯ ಸಾಹಸ ಮತ್ತು ಸಾಹಿತ್ಯ ಸೃಷ್ಟಿಗಳಿಂದ ಪ್ರೇರಿತನಾಗಿ ಪ್ರಗತಿಶೀಲರಾಗುವ ಕನಸು ಕಂಡರು. ೧೯೩೫ ರಲ್ಲಿ ಇವರಿಗೆ ಜೊತೆಯಾದವರೆಂದರೆ ಡಾ. ಮುಲ್ಕ್‌ರಾಜ್‌ಆನಂದ್. ಇವರಿಬ್ಬರು ಲಂಡನ್ನಿನಲ್ಲಿದ್ದ ಸಂದರ್ಭದಲ್ಲಿ ಫ್ಯಾಸಿಸ್ಟ್ ವಿರೋಧಿ ಚಳವಳಿ ನಡೆಯತೊಡಗಿತು. ಬುದ್ಧಿಜೀವಿಗಳಲ್ಲೂ ಆ ವೇಳೆಗೆ ವಿಚಾರಕ್ರಾಂತಿ ಮೂಡತೊಡಗಿತ್ತು.

ಅಗ ವಿಚಾರವಾದಿಗಳೆಲ್ಲ ಒಂದೆಡೆ ಸೇರಿ ಚಳವಳಿಯ ಗುರಿ, ಉದ್ದೇಶಗಳನ್ನು ನಿರೂಪಿಸಿ ಒಂದು ಕರಡನ್ನು ತಯಾರಿಸಿದರು. ತಿಂಗಳಿಗೊಮ್ಮೆ ಸಭೆಸೇರಿ ತಾವು ಬರೆದ ಲೇಖನ, ಕಥೆ, ಕವನಗಳನ್ನು ಓದುವುದರ ಮೂಲಕ ಪರಸ್ಪರ ವಿಚಾರ ವಿನಿಮಯ ಮಾಡಿಕೊಳ್ಳುತ್ತಿದ್ದರು. ಅದರ ಫಲವಗಿ ೧೯೩೫ರಲ್ಲಿ ಸಂಸ್ಕೃತಿಯ ರಕ್ಷಣೆಗಾಗಿ ವಿಶ್ವದ ಸಾಹಿತಿಗಳ ಸಮಾವೇಶವು (World Congress of wirters for the defense of culture) ಜರುಗಿತು. ಇದರಲ್ಲಿ ಮ್ಯಾಕ್ಸಿಂಗಾರ್ಕಿ, ಕೋಮೆರೋಲಾ, ಹೆನ್ರಿಬಾರ್ಬೊಸ್ ಮುಂತಾದವರು ಭಾಗವಹಿಸಿ ಅದರ ಯಶಸ್ಸಿಗಾಗಿ ಹಗಲಿರುಳು ದುಡಿದರು.

ಹೀಗೆ ಲಂಡನ್ನಿನಂತೆ ಭಾರತದಲ್ಲಿಯೂ ಪ್ರಗತಿಶೀಲ ಚಳವಳಿಯನ್ನು ಪ್ರಾರಂಭಿಸಬೇಕೆಂದು ನಿರ್ಧರಿಸುತ್ತಾರೆ. ಉರ್ದು ಸಾಹಿತಿ ಸಜ್ಜದ್‌ಜಾಹಿರ್ ಮುಂತಾದವರು ಪ್ರೇಂಚಂದ್ ಅವರನ್ನು ಭೇಟಿಯಾಗಿ ಚರ್ಚಿಸುತ್ತಾರೆ. ಪ್ರಗತಿಶೀಲ ಚಳವಳಿ ಅರಂಭವಾಗುವುದಕ್ಕೆ ಮುನ್ನವೆ ಪ್ರಗತಿಪರ ಧೋರಣೆಗಳಿಂದ ಕೃತಿ ರಚಿಸುತ್ತಿದ್ದ ಪ್ರೇಂಚಂದ್ ಉರ್ದು ಕವಿಗಳ ಪ್ರಸ್ತಾವಕ್ಕೆ ಸಮ್ಮತಿ ಸೂಚಿಸುತ್ತಾರೆ. ಅಲ್ಲದೆ ಮಾರ್ಕ್ಸ್‌ವಾದದ ಪ್ರಭಾವ ಕೂಡ ಇವರ ಮೇಲಾಗಿರುತ್ತದೆ. ಇದರ ಫಲವಾಗಿ ಸಜ್ಜದ್‌ಜಾಹಿರ್ ಭಾರತಕ್ಕೆ ಹಿಂತಿರುಗಿದ ಮೇಲೆ ಏಪ್ರಿಲ್ ೧೦. ೧೯೩೬ ರಂದು ಲಖನೌ ನಗರದಲ್ಲಿ 'ಅಖಿಲಭಾರತ ಪ್ರಗತಿಶೀಲ ಲೇಖಕರ ಸಂಘ' ದ ಅಧಿವೇಶನ ನೆಡೆಸುತ್ತಾರೆ. ಪ್ರಸಿದ್ಧ ಹಿಂದಿ ಕಾದಂಬರಿಕಾರರಾದ ಪ್ರೇಂಚಂದ್ ಇದರ ಅಧ್ಯಕ್ಷತೆ ವಹಿಸಿದ್ದರು. ಅವರು ಅಧ್ಯಕ್ಷ ಭಾಷಣ ಮಾಡುತ್ತಾ "ಬರಹಗಾರರು ಒಬ್ಬ ಮನುಷ್ಯ ಸಾವಿರಾರು ಜನರ ಮೆಲೆ ದಬ್ಬಾಳಿಕೆ ನಡೆಸಲು ಅವಕಾಶ ಕೊಡುವ ಸಾಮೂಹಿಕ ವ್ಯವಸ್ಥೆಯನ್ನು ಬುಡಸಹಿತ ಕಿತ್ತು ಹಾಕುವಂತೆ ಮಾಡುತ್ತಾರೆ. ಬಂಡವಾಳಶಾಹಿ, ಸೈನ್ಯಬಲಶಾಹಿ, ಸಾಮ್ರಾಜ್ಯಶಾಹಿಗಳ ವಿರುದ್ಧ ಬಂಡಾಯದ ಬಾವುಟವನ್ನು ಎತ್ತಿ ಹಿಡಿಯುವಂತೆ ಮಾನವೀಯ ಅತ್ಮಗೌರವ ನಮ್ಮನ್ನು ಪ್ರಚೋದಿಸುತ್ತದೆ... ಈ ಎಲ್ಲ ಅನ್ಯಾಯದ ಬಗೆಗೆ ನಮ್ಮ ಅಸಮ್ಮತಿಯನ್ನು ಕಾಗದದ ಮೇಲೆ ವ್ಯಕ್ತಪಡಿಸಿಬಿಟ್ಟರೆ ಸಾಲದು,

ಚೆಲುವು, ಸದಭಿರುಚಿ, ಮತ್ತು ಮಾನವೀಯ ಘನತೆ ಇದನ್ನು ಬಿಟ್ಟುಕೊಡುವ ಸಾಮಾಜಿಕ ವ್ಯವಸ್ಥೆಯ ಸ್ಥಾಪನೆಗಾಗಿ ನಾವು ಶ್ರಮಿಸಬೇಕು”[೧೭]. ಎಂದು ಹೇಳಿದರು.

೧೯೪೦ರಲ್ಲಿ ಕಲ್ಕತ್ತದಲ್ಲಿ ನಡೆದ ಅಧಿವೇಶನದ ಅಧ್ಯಕ್ಷತೆಯನ್ನು ರವೀಂದ್ರನಾಥ ಠಾಕೂರರು ವಹಿಸಿದ್ದರು. ಅವರು ತಮ್ಮ ಭಾಷಣವನ್ನು ಬರೆದು ಕಳುಹಿಸಿದ್ದರು. ಜವಾಹರ್‌ಲಾಲ್‌ನೆಹರು, ಅಚಾರ್ಯ ನರೇಂದ್ರದೇವ್,ಪ್ರೇಮ್‌ಚಂದ್, ಸುಮಿತ್ರಾನಂದನ್‌ಪಂತ್, ಬಾಲರಾಜ್‌ಸಾಹ್ನಿ, ಕಾಕಾಮುಕಾಲೇಕ್ಕರ್, ಕೆ.ಎ. ಅಬ್ಬಾಸ್, ಉಮಾಶಂಕರ್‌ಜೋಷಿ ಆಲ್ಕರಾಜ್‌ಂದ್ ಮುಲ್ಕ್‌ರಾಜಾನಂದ್ ಮುಂತಾದ ಹಿರಿಯ ಲೇಖಕರು ಭಾಗವಹಿಸಿದ್ದರು. ೧೯೪೩ ಮೇ ೨೨ ರಿಂದ ೨೪ ರವರೆಗೆ ಮುಂಬಯಿಯಲ್ಲಿ ಅಖಿಲಭಾರತ ಪ್ರಗತಿಶೀಲರ ನಾಲ್ಕನೆಯ ಸಮ್ಮೇಳನ ನಡೆಯಿತು.

ಈ ಸಮ್ಮೇಳನದಲ್ಲಿ ಶ್ರೀರಂಗ, ಅ.ನ.ಕೃ, ನಿರಂಜನ, ತ.ರಾ.ಸು ಮೊದಲಾದವರು ಭಾಗವಹಿಸಿದ್ದರು. ಈ ಸಮ್ಮೇಳನದಲ್ಲಿ ಜಗತ್ತಿನ ಪರಿಸ್ಥಿತಿಯನ್ನು ಚರ್ಚಿಸಿ ಭಾರತದ ಲೇಖಕರ ಜವಾಬ್ದಾರಿಗಳ ಬಗ್ಗೆ ಚರ್ಚಿಸಲಾಯಿತು:

೧. ಸಾಮ್ರಾಜ್ಯಶಾಹಿ ಸಂಕಲೆಗಳಿಂದ ಸ್ವತಂತ್ರರಾಗಲು,ಐಕ್ಯತೆಯನ್ನು ಸಾಧಿಸುವಂತೆ ಜಪಾನಿನ ಫ್ಯಾಸಿಸ್ಟರ ಆಕ್ರಮಣದಿಂದ ಭಾರತವನ್ನು ರಕ್ಷಿಸುವಂತೆ ಜನತೆಯನ್ನು ಹುರಿದುಂಬಿಸಿ ಮುನ್ನಡೆಸಲು ಸಾಧಕವಾದ ನಾಟಕ, ಕತೆ, ಕವನ, ಪ್ರಹಸನ, ಕಥನಕವನ, ಲಾವಣಿ ಮೊದಲಾದವುಗಳನ್ನು ಬರೆಯುವುದು.

೨. ಬೇರೆಬೇರೆ ರಾಷ್ಟ್ರಗಳ ಭಾಷೆಗಳಲ್ಲಿ ರಚನೆಗೊಂಡ ಸಾಹಿತ್ಯವನ್ನು ಅನುವಾದಿಸಿ ಪ್ರಕಟಿಸುವುದು, ದೇಶದ ಬೇರೆ ಬೇರೆ ಭಾಷೆಗಳಲ್ಲಿ ರಚನೆಗೊಂಡ ಸಾಹಿತ್ಯವನ್ನು ಇಂಗ್ಲಿಷ್‌ನಲ್ಲಿ ಆಗಾಗ ಪ್ರಕಟಿಸುವುದು.

೩. ಕೂಲಿಕಾರ್ಮಿಕರ ಮತ್ತು ರೈತರ ನಡುವೆ ಲಾವಣಿ, ಹಾಡು, ಯಕ್ಷಗಾನ, ಕವಿಗೋಷ್ಠಿ ಮುಂತಾದ ಸಾಹಿತ್ಯ ಮತ್ತು ಕಲೆಗಳೊಡನೆ ಪ್ರಗತಿಶೀಲ ಬರಹಗಾರರ ಗುಂಪನ್ನು ಹೊಂದಿಸುವುದು.

೪. ಭಾರತ ಜನತಾ ರಂಗಭೂಮಿಯೊಡನೆ ನಾಟಕ ಬರೆಯುವುದರಲ್ಲೂ ಅಭಿನಯಿಸುವುದರಲ್ಲೂ ಸಹಕರಿಸುವುದು.

೫. ಬೇರೆಬೇರೆ ಭಾಷೆಗಳಲ್ಲಿ ಪ್ರಗತಿಶೀಲ ಸಾಹಿತ್ಯದ ಪತ್ರಿಕೆಗಳನ್ನು ಪ್ರಕಟಿಸುವುದು.

ಇವು ಪ್ರಗತಿಶೀಲರ ಸ್ಪಷ್ಟ ನಿಲುವುಗಳಾಗಿದ್ದರೂ ಕೂಡ ಪೂರ್ಣವಾಗಿ ಕಾರ್ಯರೂಪಕ್ಕೆ ಬರಲಿಲ್ಲ. ಆರಂಭದಲ್ಲಿ ಕಂಡುಬಂದ ಉತ್ಸಾಹ ಹಾಗೂ ಸಹಕಾರ ಕೊನೆಯವರೆಗೂ ಉಳಿಯದೇ ಇದ್ದದ್ದರಿಂದ ಅವರ ನಿಲುವುಗಳನ್ನು ಕಾರ್ಯರೂಪಕ್ಕೆ ತರಲಾಗಲಿಲ್ಲ.

೧೯೪೩–೪೪ರ ಸುಮಾರಿಗೆ ಕರ್ನಾಟಕದಲ್ಲೂ ಪ್ರಗತಿಶೀಲಸಾಹಿತ್ಯ ಚಳವಳಿ ಆರಂಭವಾಯಿತು. ೧೯೪೩ ರ ಡಿಸೆಂಬರ್‌ನಲ್ಲಿ ಪ್ರಗತಿಶೀಲ ಬರಹಗಾರರ ಸಂಘ ಸ್ಥಾಪಿತವಾಯಿತು. ಪ್ರಗತಿಶೀಲರ ಆ ಸಭೆಗೆ ಬಿ.ವಿ.ಬಳ್ಳಾರಿವರು ಅಧ್ಯಕ್ಷರಾಗಿದ್ದರು. ಅ.ನ.ಕೃ. ಸಂಘದ ಅಧ್ಯಕ್ಷರಾಗಿಯೂ, ನಾಡಿಗೇರ ಕೃಷ್ಣರಾಯ, ಅನಂತ ಪದ್ಮನಾಭ ಪೋಗಲ ಇವರು ಕಾರ್ಯದರ್ಶಿಗಳಾಗಿಯೂ ಚುನಾಯಿತರಾದರು.

"೧೯೪೪ರಲ್ಲಿಯೇ ನಾನು ಗೆಳೆಯರೊಂದಿಗೆ ಚಳವಳಿ ಆರಂಭಿಸಿದೆ ಎಂದು ಹೇಳುವ ಅ.ನ.ಕೃ. ಈ ಚಳವಳಿ ನಾಯಕರಾಗುತ್ತಾರೆ. ದಿ.ವೈದ್ಯಭಾನು, ದ.ಕೃ.ಭಾರಧ್ವಾಜ, ಮ.ಶ್ರೀಧರಮೂರ್ತಿ, ಎಸ್ ಅನಂತನಾರಾಯಣ, ತಿರುಮಲೆ ತಾತಾಚಾರ್ಯಶರ್ಮ, ಮಾ.ನಾ.ಚೌಡಪ್ಪ, ವೀರಕೇಸರಿ ಸೀತಾರಾಮಶಾಸ್ತ್ರಿ, ದಿ:ಮೋಟಗನಹಳ್ಳಿ ಸುಬ್ರಮಣ್ಯಶಾಸ್ತ್ರಿ, ಎಂ.ಜಿ. ನಂಜುಡಾರಾಧ್ಯ, ದಿ.ಚನ್ನಪ್ಪ ಉತ್ತಂಗಿ ಮೊದಲಾದ ಅನೇಕ ಗಣ್ಯ ಸಾಹಿತಿಗಳು ಪ್ರಗತಿಶೀಲರ ಬೆಂಬಲಿಗರಾದರು"[೧೯]. ಆದ್ಯ ರಂಗಾಚಾರ್ಯ, ವಿ.ಕೃ.ಗೋಕಾಕ್ ಮೊದಲಾದವರು ಚಳವಳಿ ಬಗೆಗೆ ಆಸಕ್ತಿ ವಹಿಸಿದರು. ಕಮ್ಯೂನಿಷ್ಟರಿಗೆ ಕಟ್ಟಾವಿರೋಧಿಯಾಗಿದ್ದ ಅ.ನ.ಕೃ. ಅವರ ಗುಂಪಿಗೆ ದೇವುಡು, ಬೀಚಿ, ನಂಜುಂಡಾರಾಧ್ಯ, ಭಾರಧ್ವಾಜ, ನಾಡಿಗೇರ, ತ.ರಾ.ಸು. ಅರ್ಚಕ ವೆಂಕಟೇಶ ಮೊದಲಾದವರು ಸೇರಿಕೊಂಡರು. ಮಾರ್ಕ್ಸ್ ಸಿದ್ಧಾಂತವನ್ನು ಅಭ್ಯಸಿಸಿ ಅದನ್ನು ನಂಬಿ ಕೃತಿ ರಚಿಸತೊಡಗಿದರು. ಕಟ್ಟೀಮನಿ, ನಿರಂಜನ, ಮತ್ತು ಸೋಗಾಲಿಯವರು ಅ.ನ.ಕೃ. ಊರೂರುಗಳಲ್ಲಿ, ಶಾಲಾ ಕಾಲೇಜುಗಳಲ್ಲಿ ಸಾರ್ವಜನಿಕ ಸಭೆ ಸಮಾರಂಭಗಳಲ್ಲಿ ಭಾಷಣ ಮಾಡುತ್ತಾ ಜನರ ಮೆಚ್ಚುಗೆ ಗಳಿಸಿದರು. ಇದರ ಫಲವಾಗಿ ಬೆಂಗಳೂರು, ಮಂಗಳೂರು, ಧಾರವಾಡ ಮುಂತಾದೆಡೆಗಳಲ್ಲಿ ಭಾಷಣ, ಪ್ರಗತಿಶೀಲ ಲೇಖಕರ ಸಂಘಗಳು ಸ್ಥಾಪಿತವಾದವು. ಒಂದು ವರ್ಷದಲ್ಲಿ ಇಡೀ ಕರ್ನಾಟಕದಲ್ಲಿ ೨೨ ಶಾಖೆಗಳು ಆರಂಭವಾದವು.

## ೨.೫. ಪ್ರಗತಿಶೀಲ ಪಂಥದ ಜೀವನ ದೃಷ್ಟಿ :

ಪ್ರಗತಿಶೀಲ ಸಂಘದ ಹುಟ್ಟಿನೊಂದಿಗೆ ಸಾಹಿತ್ಯ ರಚನೆ ಕೂಡ ಆರಂಭವಾಯಿತು. ಜನಸಾಮಾನ್ಯರ ಬಗೆಗೆ ಅಪಾರ ಕಾಳಜಿ ಹೊಂದಿದ್ದ ಈ ಸಾಹಿತ್ಯ ಆ ಸಂಧರ್ಭದಲ್ಲಿ ಕೇವಲ ಪ್ರಚರಕ್ಕಾಗಿ ರೂಪುಗೊಳ್ಳಲಿಲ್ಲ. ಇದರ ಹುಟ್ಟಿನ ಹಿಂದೆ ಪ್ರಭಲವಾದ ಹಿನ್ನೆಲೆ ಇತ್ತು. ನವೋದಯ ಸಾಹಿತ್ಯದ ಇತಿಮಿತಿಗಳನ್ನು ಗುರುತಿಸುತ್ತಲೆ ಹೊಸ ದೃಷ್ಟಿಕೋನದ ಸಾಹಿತ್ಯ ಸೃಷ್ಟಿಯಾಯಿತು. ಕ್ರಿಯಾತ್ಮಕವಾದ ಈ ಚಟುವಟಿಕೆಗೆ ಮಹತ್ತರವಾದ ಕಾರಣಗಳಿದ್ದವು.

೧೯೪೨ರ ಅಗಸ್ಟ್ ವಿಪ್ಲವದಂತಹ ಮಹತ್ತರ ವಿಷಯವಾಗಲಿ, ಬಂಗಾಳ, ಬಿಜಾಪುರ, ಕೇರಳಗಳ ಘೋರ ಕ್ಷಾಮಗಳಾಗಲಿ ನವೋದಯ ಸಾಹಿತಿಗಳ ಮನಸ್ಸನ್ನು ಕಲಕಲಿಲ್ಲ. ಸಮಕಾಲೀನ ಸಮಸ್ಯೆಗಳಿಗೆ ಸ್ಪಂದಿಸದೆ ಸಾಮಾಜಿಕ ಹೊಣೆಗಾರಿಕೆಯಿಂದ ನುಣಿಚಿಕೊಳ್ಳುವ,

ಕಲ್ಪನೆಯ ಲೋಕದಲ್ಲಿ ವಿಹರಿಸುವ ಹಾಗೂ ಬದುಕಿನ ರಮ್ಯ ಕ್ಷಣಗಳನ್ನು ವರ್ಣನೆ ಮಾಡುವುದು ಸರಿಯೇ? ಎಂಬ ಪ್ರಶ್ನೆ ಎದುರಾಯಿತು. ನವೋದಯ ಕವಿಗಳ ಬಗ್ಗೆ ಅ.ನ.ಕೃ "ಒಬ್ಬ ಮಹಾರಾಜರು ತೀರಿಕೊಂಡರೆ ಕವಿಗಳ ಮೇಲೆ ಕವಿಗಳು ಚರಮ ಶ್ಲೋಕವನ್ನು ಬರೆಯಲು ಧಾವಿಸುತ್ತಾರೆ. ಬಂಗಾಳ, ಬಿಜಾಪುರ, ಕೇರಳಗಳಲ್ಲಿ ಸಾವಿರ, ಲಕ್ಷಗಟ್ಟಲೆ ಜನ ಹೊಟ್ಟೆಗಿಲ್ಲದೆ ಸತ್ತರೆ ಕವಿಗಳ ಕರುಳು ಮಿಡಿಯುವಂತಿಲ್ಲ. ರಾವಣ, ಜರಾಸಂಧ, ಶಿಶುಪಾಲಾದಿ ರಾಕ್ಷಸರ ದಬ್ಬಾಳಿಕೆಯನ್ನು ಖಂಡಿಸಲು ನಮ್ಮ ಕವಿಗಳು ಮುನ್ನುಗ್ಗುತ್ತಾರೆ.. ಆದರೆ ನಾಜಿರಾಕ್ಷಸ ಫ್ಯಾಸಿಸಂದೈತ್ಯ ಬಂಡವಾಳಶಾಹಿ ಸಾಮ್ರಾಜ್ಯಶಾಹಿ ರಾಕ್ಷಸರ ವಿರೋಧವಾಗಿ ನಮ್ಮ ಕವಿಗಳು ಒಂದು ಚಕಾರ ಶಬ್ದವನ್ನು ಎತ್ತುವುದಿಲ್ಲ. ನಮ್ಮ ಕವಿಗಳು ಮನುಷ್ಯರಲ್ಲ ಅವರಲ್ಲಿ ಅಂತಃಕರಣವಿಲ್ಲ. ಅವರ ಹೃದಯದಲ್ಲಿ ನೀಚತನ ಸುಲಿಗೆ, ದಬ್ಬಾಳಿಕೆಗಳನ್ನೆದುರಿಸುವ ಅಮೃತಾಗ್ನಿಯಿಲ್ಲ. ಅವರು ಪದ್ಯ ಬರೆಯುವ ಸಜೀವ ಯಂತ್ರಗಳು"[೨೦]. ಎಂಬುದಾಗಿ ಹೇಳಿದ್ದಾರೆ. ಅ.ನ.ಕೃ ಅವರ ಮೇಲಿನ ಮಾತುಗಳಲ್ಲಿ ಆವೇಶವಿದ್ದರೂ ಅದರ ಹಿಂದೆ ಜನಸಾಮಾನ್ಯರ ಬದುಕಿನ ಬಗ್ಗೆ ಇರುವ ಕಾಳಜಿ ಗಮನಾರ್ಹ. ಇದರಿಂದ ಪ್ರಗತಿಶೀಲ ಸಾಹಿತ್ಯದ ಬಗ್ಗೆ ಚಿಂತನೆ ಆರಂಭವಾಯಿತು ಹಾಗೂ ಪ್ರಗತಿಶೀಲ ಸಾಹಿತಿಯ ಕರ್ತವ್ಯ ಮತ್ತು ಜವಾಬ್ದಾರಿಗಳ ಬಗ್ಗೆ ನಿರ್ಧರಿಸಲಾಯಿತು.ಹೀಗೆ ಒಂದು ಸಮಾಜ ರೂಪುಗೊಂಡಂತೆಲ್ಲಾ ಜಮೀನ್ದಾರರಿಂದ, ಬಂಡವಾಳಶಾಹಿಗಳಿಂದ ಸಮಾಜದ ಸೌಖ್ಯಕ್ಕೆ ಆತಂಕಗಳು ಬಂದೆರಗಿದಾಗ, ಇಂತಹ ವ್ಯವಸ್ಥೆಗೆ ಸಿಲುಕಿ ನೊಂದ ಜನತೆಗೆ ಹೊಸ ಸ್ಫೂರ್ತಿ, ಹೊಸ ಆದರ್ಶಗಳನ್ನು ಕೊಡುವ ಕೆಲಸವನ್ನು ಪ್ರಗತಿಶೀಲ ಬರಹಗಾರ ಮಾಡಬೇಕೆಂದು ಹೇಳುವುದರೊಂದಿಗೆ ಅವರ ಧ್ಯೇಯವನ್ನು ಸ್ಪಷ್ಟಪಡಿಸಲಾಯಿತು.

"ಸಾಹಿತ್ಯವು ಧ್ಯೇಯವಾದಿಯಾಗಿರಬೇಕು. ದ್ಯೇಯನಿಷ್ಠೆಯನ್ನು ಮಾಡುವಂತೆ ಇರಬೇಕು. ಕರ್ತವ್ಯದ ಆನಂದದ ಅರಿವನ್ನು ಉಂಟುಮಾಡುವಂತಿರಬೇಕು. ಸಾಹಿತ್ಯದಲ್ಲಿ ವ್ಯವಹಾರಕ್ಕಿಂತ ಧ್ಯೇಯವಾದವು ಪ್ರಾಮುಖ್ಯವಾಗಿರಬೇಕು. . ಆತ್ಮಸ್ಫೂರ್ತಿಯಿಂದ ಹೊಸ ಧ್ಯೇಯಸೃಷ್ಟಿಯನ್ನು ನಿರ್ಮಿಸುವುದೇ ಪುರೋಗಾಮಿ ಸಾಹಿತ್ಯದ ಮುಖ್ಯ ಲಕ್ಷಣವಾಗಿದೆ"[೨೧]. ಅ.ನ.ಕೃ ಅವರ ಈ ಮಾತುಗಳಿಂದ ಸ್ಪಷ್ಟವಾಗುವುದೇನೆಂದರೆ ಸಾಹಿತ್ಯ ಜನಸಾಮಾನ್ಯರನ್ನು ಜಾಗೃತಗೊಳಿಸುವುದೇ ಆಗಿದೆ. ಜನರ ಬಯಕೆಗೆ ಅನುಸಾರವಾದ ಸಾಹಿತ್ಯ ಸೃಷ್ಟಿಯಾಗಬೇಕು. ಹಾಗಾದಾಗ ಮಾತ್ರ ಸಮಸ್ಯೆಗಳನ್ನು ಕೃತಿಯಲ್ಲಿ ಪ್ರಯೋಗಮಾಡುವ ಕಾರ್ಯ ಸಫಲವಾಗುತ್ತದೆ. ಹೀಗೆ ಪ್ರಗತಿಶೀಲ ಸಾಹಿತ್ಯ ರಚನೆಯ ಹಿಂದೆ ಆಳವಾದ ಜೀವನಾನುಭವ ಹಾಗೂ ಅಭ್ಯಾಸ ಇದ್ದಾಗ ಮಾತ್ರ ಉತ್ತಮ ಕೃತಿಯೊಂದು ಹೊರಹೊಮ್ಮಲು ಸಾಧ್ಯ ಅಂತಹ ಸಾಹಿತ್ಯವು ಜನಸಮೀಪವೂ ಜನಪರವೂ ಆಗುತ್ತದೆ. ತ.ರಾ.ಸು. ಅವರ ಅಭಿಪ್ರಾಯಗಳು ಕೂಡ ಮೇಲಿನ ಧೋರಣೆಗೆ ಪೂರಕವಾದವುಗಳೆ.

"ಸಾಹಿತಿಗಳು ದಂತದ ಉಪ್ಪರಿಗೆಯಲ್ಲಿ ಕಣ್ಣುಮುಚ್ಚಿ ಕುಳಿತು ಕಲ್ಪನೆಯಲ್ಲಿ ಆನಂದಪಡುವ

ಸ್ಥಿತಿ ಬಿಟ್ಟು ಜನಸಾಮಾನ್ಯರ ಕಲ್ಲುಮುಳ್ಳಿನ ದಾರಿಗೆ, ವ್ಯವಹಾರ ಸತ್ಯಕ್ಕೆ ಇಳಿದು ಬರೆಯಬೇಕು. ಅಲ್ಲಿ ಆನಂದ ದೊರಕಿಸಬೇಕು. ಸ್ವಾತಂತ್ರ್ಯ ಬರುವಂತೆ ಮಾಡಬೇಕು. ನಮ್ಮ ಜನ ನಮ್ಮ ನಾಡು ನಗುನಗುತ್ತ ಗೆಲುವು ಮುಖದಿಂದ ಕಲೆಯುವಂತೆ ಮಾಡಬೇಕು. ಹಸಿದಿರುವಾಗ ಒಂದು ತುತ್ತು ಅನ್ನ ಕೊಡುವುದೇ, ದಾಸ್ಯದಲ್ಲಿರುವಾಗ ಬಿಡುಗಡೆ ಮಾದುವುದೇ ಪ್ರಗತಿಶೀಲ ಸಾಹಿತ್ಯ"೨೨ ಸಾಹಿತಿಯಾದವನು ಎಲ್ಲಿಯೊ ಕುಳಿತು ಕಲ್ಪನಾಲೋಕದಲ್ಲಿ ಕೃತಿ ರಚಿಸುವುದಕ್ಕಿಂತ ಸಾಮಾಜಿಕ ಬದುಕಿಗೆ ಸ್ಪಂದಿಸಿ ಸಾಮಾಜಿಕ ಪರಿಸರದೊಂದಿಗೆ ಬೇರೆಯಾಗಬೇಕೆಂಬುದೇ ತ.ರಾ.ಸು ಅವರ ಮಾತಿನ ಆಶಯ. ಮುಂದುವರಿದು ಪ್ರಗತಿಶೀಲತೆಯ ಕೂಗು ಎಲ್ಲೆಡೆ ಕೇಳಿಬರುತ್ತಿದ್ದ ಸಂದರ್ಭದಲ್ಲಿ ತ.ರಾ.ಸು. ಅವರು ಮತ್ತು ಅ.ನ.ಕೃ. ಪ್ರಗತಿಶೀಲ ಸಾಹಿತ್ಯವನ್ನು ಕುರಿತು ನಾಡಿನ ವಿವಿಧ ಭಾಗಗಳಲ್ಲಿ ಭಾಷಣಗಳನ್ನು ಮಾಡಿ ಆ ಬಗ್ಗೆ ಪ್ರಚಾರ ಮಾಡಿದರು. ತ.ರಾ.ಸು ತಮ್ಮ ಭಾಷಣದಲ್ಲಿ ನವೋದಯ ಸಾಹಿತ್ಯದಲ್ಲಿನ ನ್ಯೂನ್ಯತೆಗಳನ್ನು ಎತ್ತಿ ಹಿಡಿಯುವ ಮೂಲಕ ಪ್ರಗತಿಶೀಲಪಂಥದ ಮಹತ್ವವನ್ನು ಮನಗಾಣಿಸಿದರು. ಅ.ನ.ಕೃ. ನಮ್ಮ ಜನರಲ್ಲಿನ ಅಜ್ಞಾನ ಹಸಿವುಗಳನ್ನು ಹೋಗಲಾಡಿಸಿ ಅವರನ್ನು ಎಚ್ಚರಿಸಬೇಕು ಎಂದು ವಾದಿಸಿದ್ದರು. ಅಲ್ಲದೆ ಜನಪದ ನಮ್ಮ ದೇಶದ ಶಕ್ತಿ ಎನ್ನುವಂತೆ ಮಾಡಬೇಕು ಎಂಬುದು ಅವರ ಮುಖ್ಯ ಪ್ರತಿಪಾದನೆ.

ಪ್ರಗತಿಶೀಲ ಸಾಹಿತ್ಯದ ಗುರಿಯನ್ನು ಕುರಿತಂತೆ ಲೆನಿನ್ ಹೇಳಿರುವ ಮಾತು. "ಶೋಷಣೆಯೇ ಬಹುಮುಖ್ಯವಾಗಿರುವ ಸಮಾಜದಲ್ಲಿ ತಾತ್ತ್ವಿಕವಾಗಿ ಅದರ ವಿರುದ್ಧ ಬಂಡಾಯವೇಳುವುದು ಸರ್ವಸಮತೆಯನ್ನು ಸಾಧಿಸುವುದು ಭವಿಷ್ಯದ ಕಡೆಗೆ ಮುಖ ಮಾಡಿರುವ (ಎಂದರೆ ಪ್ರಗತಿಶೀಲವಾದ) ಹಿಡಿಯುವ ಮೂಲಕ ಪ್ರಗತಿಶೀಲ ಪಂಥದ ಮಹತ್ವವನ್ನು ಮನಗಾಣಿಸಿದರು"೨೩.ಎಂಬುದು ಅವರ ಮುಖ್ಯ ಪ್ರತಿಪಾದನೆ. ಅಂದರೆ ಪ್ರಗತಿಶೀಲ ಸಾಹಿತ್ಯದ ಉದ್ದೇಶ ನೊಂದ ಜನತೆಯ ಪರವಾಗಿ ದನಿಯೆತ್ತಬೇಕುಂದೇ ಮೇಲಿನ ಅಭಿಪ್ರಾಯದ ಮುಖ್ಯ ಆಶಯವಾಗಿದೆ.

ಪ್ರಗತಿಶೀಲ ಬರಹಗಾರರ ಜೀವನದೃಷ್ಟಿ ಯಾವುದಾಗಿರಬೇಕು ಮತ್ತು ಅವರ ನಿಲುವುಗಳೇನೆಂಬುದರ ಬಗ್ಗೆ ಜವಹಾರಲಾಲ್ ನೆಹರೂ "ಕತ್ತಲಿನಿಂದ ಬೆಳಕಿಗೆ ದಾಸ್ಯದಿಂದ ಸ್ವಾತಂತ್ರಕ್ಕೆ ಯಾವುದು ಒಯ್ಯುತದೆಯೋ ಅದು ಪ್ರಗತಿಶೀಲ ಸಮಾಜವಾದಿ ಧೋರಣೆ ಎಂದು ಹೇಳಿದ್ದಾರೆ.೨೪" ಪ್ರಗತಿಶೀಲ ಸಾಹಿತಿ ಜವಾಬ್ದಾರಿಗಳೇನು ಮತ್ತು ಬದುಕನ್ನು ಹೇಗೆ ಅರ್ಥೈಸಬೇಕೆಂಬುದರ ಬಗ್ಗೆ ನೆಹರೂ ಹೆಚ್ಚಿನ ಒತ್ತು ಕೊಟ್ಟಿದ್ದಾರೆ.

ಪ್ರಗತಿಶೀಲರ ದೃಷ್ಟಿಯಲ್ಲಿಯೂ ನವೋದಯದವರ ಹಾಗೆ ಬದುಕು ಸ್ವೀಕಾರಾರ್ಹವೇ! ಆದರೆ ಬದುಕನ್ನು ಇನ್ನೂ ಶುಭ್ರಗೊಳಿಸಬೇಕೆಂಬ ಹಂಬಲ ಇವರಲ್ಲಿ ತೀವ್ರವಾಗಿತ್ತು. ಪ್ರಗತಿಶೀಲ ದೃಷ್ಟಿಯುಳ್ಳವರು ಮಾತ್ರ ಪ್ರಗತಿಶೀಲ ಸಾಹಿತ್ಯವನ್ನು ನಿರ್ಮಿಸಬಲ್ಲರೆಂಬುದು ಇವರ ನಂಬಿಕೆ. ಆಧುನಿಕ ಬರಹಗಾರರು ಸಮಕಾಲೀನ ಸಮಸ್ಯೆಗಳ ಅರಿವಿನೊಂದಿಗೆ ಸಾಹಿತ್ಯ ರಚಿಸಬೇಕೆಂಬುದು

ಪ್ರಗತಿಶೀಲರ ವಾದ. ಇಂದಿನ ರಾಜಕಾರಣ, ಅರ್ಥಶಾಸ್ತ್ರ, ತತ್ವಜ್ಞಾನ, ಸಮಾಜಶಾಸ್ತ್ರ ಮುಂತಾದ ಅವಶ್ಯಕ ಶಾಸ್ತ್ರಗಳನ್ನಾದರೂ ತಿಳಿದಿರಬೇಕೆಂಬುದು ಪ್ರಗತಿಶೀಲರ ಒತ್ತಾಸೆಯಾಗಿತ್ತು.

ಹೀಗೆ ಪ್ರಗತಿಶೀಲರ ನಿಲುವಿಗೆ ಅದರಲ್ಲೂ ಮುಖ್ಯವಾಗಿ ಅ.ನ.ಕೃ. ನಿಲುವುಗಳಿಗೆ ಬಂದ ಪ್ರತಿಕ್ರಿಯೆ ಮತ್ತು ಆಲೋಚನೆಗಳು ಪ್ರಗತಿಶೀಲ ಸಾಹಿತ್ಯದ ಅರ್ಥ ಮತ್ತು ಅದರ ವ್ಯಾಪಕತೆಗೆ ನಿರ್ದಿಷ್ಟ ನಿದರ್ಶನಗಳಾಗಿವೆ. ಮುಂಬಯಿ ಕರ್ನಾಟಕ ಸಂಘದಲ್ಲಿ ಪ್ರಗತಿಶೀಲ ಸಾಹಿತ್ಯ ಮತ್ತು ಸಾಹಿತಿಗಳ ಬಗ್ಗೆ ವ್ಯಾಪಕವಾದ ಚರ್ಚೆ ಏರ್ಪಟ್ಟಿತ್ತು. ಗೋಕಾಕರ ಮಾತಿನಂತೆ "ಮಹಾಕಾವ್ಯ ತತ್ಕಾಲ ಅನಂತಗಳ ನಡುವೆ ಸೇತುವೆ ಕಟ್ಟುವುದು. ಸಮಕಾಲೀನವಿಲ್ಲದೆ ಹೋದರೆ ಸಾಹಿತ್ಯ ಒಂದು ಅಂಗದಲ್ಲಿ ಊನವಾದಂತೆ. ಇದು ಯಾವಗಲೂ ನಮ್ಮ ಲಕ್ಷ್ಯದಲ್ಲಿರಬೇಕು. ಅದರ ಜೊತೆಗೆ ಬರಿ ಪ್ರಗತಿಶೀಲ ಸಂಘದ ಸದಸ್ಯತ್ವದಿಂದ ಇಲ್ಲವೇ ಸಮತಾವಾದವನ್ನು ಸ್ಥಾಪಿಸುವುದರಿಂದ ಸಾಹಿತ್ಯ ಗುಣ ಇಲ್ಲವೇ ಪ್ರಗತಿ ಯಾವ ಕೃತಿಯಲ್ಲಿಯೂ ಕಂಡು ಬರಲಾರದೆಂಬುದನ್ನು ನಾವು ನೆನಪಿಡಬೇಕಲ್ಲವೇ? ಯಾವ ಕೃತಿಯೇ ಆಗಲಿ ಅದನ್ನು ಯಾರೇ ಬರೆದಿರಲಿ ಮೊದಲು ಅದು ಉಳಿದ ಎಲ್ಲಾ ಕೃತಿಗಳಂತೆ ಸಾಹಿತ್ಯಕವಾಗಿದೆಯೋ, ಇಲ್ಲವೋ ಎಂಬುದು ಮುಖ್ಯ ಪ್ರಶ್ನೆಯಾಗುತ್ತದೆ. ಆಮೇಲೆ ಅದರಲ್ಲಿ ಪ್ರಗತಿ ಇದೆಯೇ? ಇದ್ದರೆ ಎಂತಹ ಪ್ರಗತಿ? ಇವೇ ಮೊದಲಾದ ಪ್ರಶ್ನೆಗಳು ಬರುತ್ತವೆ.

ಸಾಹಿತ್ಯದಲ್ಲಿ ಎಲ್ಲಾ ವ್ಯಕ್ತಿದರ್ಶನಗಳಿಗೂ ಅನುಭವಗಳಿಗೂ ಸ್ಥಾನವಿದೆ. ನಾವು ನಮ್ಮ ಒಲವು ವೃತ್ತಿಗಳನ್ನು, ಪ್ರಿಯ ಅಪ್ರಿಯ ಸಿದ್ಧಾಂತಗಳನ್ನಾಗಿಸಿ ಉಳಿದ ಒಲವುಗಳನ್ನು, ಮನೋಧರ್ಮಗಳನ್ನು ಅಲ್ಲಗಳೆಯುವಂತಹ ಲೇಖನ ಇಲ್ಲವೇ ವಿಮರ್ಶೆಗೆ ಕೈಹಾಕುವುದು ಬೇಡ. ಇದರಿಂದ ವಿಮರ್ಶೆ ಸಂಕುಚಿತವಾಗುವುದು. ಸಾಹಿತ್ಯದಲ್ಲಿ ಪಂಗಡಗಳಾವುವು ಅಲ್ಲದೆ ಜೀವನ ಪಾವನಗೊಳಿಸಲು ಹೊರಟ ಸಾಹಿತ್ಯದಿಂದಲೇ ಅಸ್ವಸ್ಥತೆ ಉಂಟಾಗುವುದು."[೨೫] ಗೋಕಾಕರ ಈ ಅಭಿಪ್ರಾಯದಲ್ಲಿ ಸಾಹಿತ್ಯದಿಂದಾಗುವ ಪರಿಣಾಮ ಎಂಥದು ಎಂಬುದು ವ್ಯಕ್ತವಾಗುತ್ತದೆ.

ಸಾಹಿತ್ಯಕವಾಗಿ ಹಾಗೂ ಸಾಮಾಜಿಕವಾಗಿ ಪರಿವರ್ತನೆಯನ್ನು ಬಯಸುವ ಪ್ರಗತಿಶೀಲರ ಆಶಯವೇನೋ ಉತ್ತಮವಾದುದೇ. ಆದರೆ ಕಾಲ ದೇಶಗಳ ಪರಿಧಿಗೆ ಒಳಪಟ್ಟ ಈ ಬದಲಾವಣೆ ಲೇಖನಗಳ ಮಟ್ಟಕ್ಕಷ್ಟೆ ಸೀಮಿತವಾಯಿತು. ಗಟ್ಟಿತನವಿಲ್ಲದ ಸಮಸ್ಯೆಗಳ ಮೇಲ್ಪದರದ ಚಿತ್ರಣವಷ್ಟೆ ಆಯಿತು. ಭಾವನಾತ್ಮಕವಾಗಿ ಆಂತರಂಗಿಕವಾಗಿ ಆಗಬೇಕಾದ ಪರಿವರ್ತನೆ ಘೋಷಣೆ ಮತ್ತು ಸಮರ್ಥನೆಗಳ ಗೊಂದಲದಲ್ಲಿ ಸಿಲುಕಿಕೊಂಡಿತು. ಇಂತಹ ಹೊತ್ತಿನಲ್ಲಿ ಸಾಮರಸ್ಯವನ್ನು ಉಂಟುಮಾಡುವ ಮಾರ್ಗದರ್ಶನದ ಮಾತುಗಳನ್ನು ಕೆಲವರಾಡಿದರೆ, ಮತ್ತೆ ಕೆಲವರು ಪ್ರಗತಿಶೀಲವನ್ನು ಟೀಕಿಸಲು ಇದೇ ಸಂದರ್ಭವನ್ನು ಬಳಸಿಕೊಂಡರು. "ಸಾಹಿತಿ ಅಥವಾ ಕಲಾಕಾರನು ಸ್ವಭಾವತಃ ಪ್ರಗತಿಶೀಲನಾಗಿರುತ್ತಾನೆ. ಒಂದು ವೇಳೆ ಅದು ಅವನ ಸ್ವಭಾವವಾಗಿರದಿದ್ದರೆ ಬಹುತರವಾಗಿ ಅವನು ಸಾಹಿತಿಯಾಗಿರಲಾರ"[೨೬] ಎನ್ನುವ ಪ್ರೇಮಚಂದ್

ಅವರ ನಿಲುವು ಕೂಡ ಪ್ರಗತಿಶೀಲರ ಉತ್ಸಾಹಭರಿತ ಮಾತುಗಳ ಮಧ್ಯೆ ಮರೆಯಾಯಿತು. ಇದರಿಂದಾಗಿ ಪ್ರಗತಿಶೀಲರು ಸಾಕಷ್ಟು ಟೀಕೆಗಳಿಗೆ ಗುರಿಯಾದರು.

ತ.ರಾ.ಸು. ಅವರ ಕಾದಂಬರಿಗಳಲ್ಲಿ ಮಹಿಳಾಸಂವೇದನೆ ಗುರುತಿಸುವುದು ನನ್ನ ಉದ್ದೇಶವಾಗಿರುವುದರಿಂದ ಪ್ರಗತಿಶೀಲ ಸಾಹಿತ್ಯದ ಸಮಗ್ರವಾದ ಚಿತ್ರಣವನ್ನು ಕೊಡದೇ ಅದರ ಸಂಕ್ಷಿಪ್ತ ಸ್ಥೂಲವಾದ ಚಿತ್ರಣವನ್ನು ಮಾತ್ರ ಇಲ್ಲಿ ಕೊಟ್ಟಿರುತ್ತೇನೆ. ಆ ಹಿನ್ನಲೆಯಲ್ಲಿ ಪ್ರಗತಿಶೀಲ ಬರಹಗಾರರ ಮೇಲಿನ ಕೆಲವು ಟೀಕೆಗಳು ಈ ಕೆಳಗಿನಂತಿವೆ:

**ಟೀಕೆಗಳು :**

ಪ್ರಗತಿಶೀಲ ಚಳವಳಿ ಎಷ್ಟು ತೀವ್ರಗತಿಯಲ್ಲಿ ಪ್ರಸಿದ್ಧಿಯನ್ನು ಪಡೆಯಿತೋ ಅಷ್ಟೇ ಬೇಗ ವಿರೋಧಾಭಿಪ್ರಾಯಗಳಿಗೆ ಒಳಗಾಯಿತು. ಟೀಕೆಗಳ ಜೊತೆಗೆ ವಾದ–ವಿವಾದಗಳು ಬಿರುಸಾಗಿ ಆರಂಭವಾದವು. ವಿರೋಧಾಭಿಪ್ರಾಯಗಳನ್ನು ಅಲ್ಲಗಳೆಯುವುದರ ಜೊತೆಗೆ ತಮ್ಮ ನಿಲುವುಗಳನ್ನು ಸಮರ್ಥಿಸಿಕೊಳ್ಳುವ ಪ್ರಯತ್ನವನ್ನು ಪ್ರಗತಿಶೀಲರು ಮಾಡಬೇಕಾಯಿತು.

ಆರಂಭದಲ್ಲಿಯೇ ಧಾರವಾಡದಲ್ಲಿ ನಡೆದ ವಿಚಾರಗೋಷ್ಠಿಯಲ್ಲಿ ಪ್ರಗತಿಶೀಲ ಸಾಹಿತ್ಯದ ಪರ–ವಿರೋಧ ಚರ್ಚೆಗಳು ನಡೆದವು. ಆ ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದ ಆದ್ಯರಂಗಾಚಾರ್ಯರು ಮಾತನಾಡುತ್ತ ಪ್ರಗತಿಶೀಲರನ್ನು ಹೀಗಳೆಯುತ್ತಾರೆ. ಅ.ನ.ಕೃ, ತಮ್ಮ ಮೇಲಿನ ಆರೋಪವನ್ನೆಲ್ಲ ಅಲ್ಲಗಳೆದು ಸಭಿಕರ ಬೆಂಬಲಗಳಿಸುತ್ತಾರೆ. ಪ್ರಗತಿಶೀಲರಿಂದ ದೂರವಾಗಿದ್ದ ಕಟ್ಟೀಮನಿ ಅವರು ಕೂಡ ಪ್ರಗತಿಶೀಲರನ್ನು ಟೀಕಿಸುತ್ತಾರೆ:

"ಕೆಲವು ಲೇಖಕರು ಪ್ರಗತಿಶೀಲತೆಯನ್ನೆ ಬಂಡವಾಳ ಮಾಡಿಕೊಂಡು ತಮಗಿಂತ ಹಿರಿಯರಾದ ಮಾಸ್ತಿಯವರೇ ಮೊದಲಾದ ಸಾಹಿತಿಗಳನ್ನು ಟೀಕಿಸಲು ಹಿಂಜರಿಯಲಿಲ್ಲ. ಆದರೆ ಕೇವಲ ಕೂಗಾಟ, ಕಿರುಚಾಟದಿಂದ ಪ್ರಗತಿಶೀಲತೆ ಉದಯಿಸುವುದಿಲ್ಲ ಎನ್ನುವುದು ನನಗೆ ಚೆನ್ನಾಗಿ ಗೊತ್ತಿತ್ತು. ನಮಗಿಂತ ಹಿರಿಯರಾಗಿದ್ದ ಮಾಸ್ತಿ, ಕುವೆಂಪು, ಆನಂದ ಮೊದಲಾದವರು ಜೀವನದ ವಾಸ್ತವತೆಯನ್ನು ಕಡೆಗಣಿಸಿರಲಿಲ್ಲವೆನ್ನುವುದಕ್ಕೆ ಅವರ ರಚನೆಗಳೇ ಸಾಕ್ಷಿಯಾಗಿದ್ದವು. ಸಾಲದ ಮಗುವಿನಂತಹ ಕಥೆಯಾಗಲೀ, ಕಲ್ಕಿಯಂತಹ ಕವಿತೆಯನ್ನಾಗಲೀ, ಹೆಗ್ಗಡಿತಿಯಂತಹ ಕಾದಂಬರಿಯನ್ನಾಗಲೀ ಯಾವ ಪ್ರಗತಿಶೀಲ ಬರೆದಿದ್ದಾನೆ? ಪ್ರಗತಿಶೀಲತೆಯ ಕೂಗುಹಾಕುವ ಈ ಲೇಖಕರು ಬರೆದುದು ಹೋಟೆಲು, ರೂಮು, ಬೆಲೆವೆಣ್ಣುಗಳು, ಬಾಟಲುಗಳು, ತಲೆ ಹಿಡುಕರು ಹಾಗೂ ವ್ಯಭಿಚಾರದ ಕಾದಂಬರಿಗಳನ್ನು. ಅವರಿಗೆ ಗೊತ್ತಿರುವುದನ್ನು ಅವರು ಬರೆದರೆನ್ನಿ. ಪ್ರಸಿದ್ಧಿಗಾಗಿ ಇವರು ನಡೆಸಿದ ಸ್ಟಂಟು ನನಗೆ ಬಲುಬೇಗನೆ ಗೊತ್ತಾಯಿತು. ನಾನು ಆ ಗೊಂದಲಕ್ಕೆ ಸಿಲುಕಿಕೊಳ್ಳದೆ ನನಗೆ ಗೊತ್ತಿದ್ದ ದೀನದಲಿತರ ಜೀವನದ ಚಿತ್ರಗಳನ್ನು ರಚಿಸುತ್ತಾ ಬಂದೆ."[೨೬] ಹೀಗೆ ಸಮಕಾಲೀನ ಲೇಖಕರನ್ನು ಯಾವ ಅಳುಕು ಇಲ್ಲದೆ ಟೀಕಿಸಿ ತಮ್ಮ ನಿಲುವನ್ನು ಪ್ರತಿಪಾದಿಸಿದರು. ಪರೋಕ್ಷವಾಗಿ ನವೋದಯ ಸಾಹಿತ್ಯದಲ್ಲಿನ ಪ್ರಗತಿಶೀಲ ಅಂಶಗಳನ್ನು

ಗುರುತಿಸಿದರು. ಈ ರೀತಿ ನವೋದಯ ಪ್ರಗತಿಶೀಲವನ್ನು ತೌಲನಿಕವಾಗಿ ನೋಡುವ ಕಟ್ಟೀಮನಿ ಒಂದು ಕಡೆ, ತಮ್ಮ ಮೇಲೆ ಬಂದ ದೋಷಾರೋಪಗಳನ್ನು ದೂರಮಾಡಲು 'ಸಾಹಿತ್ಯ ಮತ್ತು ಕಾಮ ಪ್ರಚೋದನೆ' ಎಂಬ ಕೃತಿ ಬರೆದ ಅ.ನ.ಕೃ., ಒಂದುಕಡೆ, ಈ ರೀತಿ ಹೀಗೆ ವಿರುದ್ಧ ಮನೋಧರ್ಮದಿಂದಾಗಿ ಪ್ರಗತಿಶೀಲರಲ್ಲಿ ಒಡಕುಂಟಾಯಿತು. ಇದನ್ನು ನಿರಂಜನರು ಇನ್ನೂ ಖಚಿತವಾಗಿಯೇ ನಿರೂಪಿಸುತ್ತಾರೆ.

"ಕಳೆದ ಎರಡು ವರ್ಷಗಳಲ್ಲಿ ಚಿತ್ರವಿಚಿತ್ರವಾಗಿ ನಮ್ಮ ನಾಡಿನಲ್ಲೂ ಪ್ರಗತಿಶೀಲ ಲೇಖಕರ ಆಂದೋಲನ ಹುಟ್ಟಿಕೊಂಡು ಬೆಳೆದಿದೆ. ಆದರೆ ಒಂದು ಸ್ಥಾನಕ್ಕಾಗಿ-ಮಾನಕ್ಕಾಗಿ, ಗೌರವಕ್ಕಾಗಿ ಹೆಸರಿಗಾಗಿ ಕಚ್ಚಿಕಡಿದಾಡುವ ನಾಡು ನಮ್ಮದು. ಸಾಹಿತ್ಯದ ಶೀತೋದಕದಲ್ಲಿ ಅಂತರ್ಗತವಾಗಿ ಅರಿಯುವ ಉಷ್ಣೋದಕದ ಪ್ರವಾಹವಾಗಿ ಕನ್ನಡ ಪ್ರಗತಿಶೀಲ ಸಾಹಿತ್ಯ ಆಂದೋಲನ ರೂಪುಗೊಂಡಿಲ್ಲ. ಅಸಹಿಷ್ಣುತೆ ನಮ್ಮ ಧರ್ಮವಾಗಿದೆ, ಪರನಿಂದೆ ಅನುದಿನದ ಆಚರಣೆಯಾಗಿದೆ."[೨೮] ಈ ರೀತಿ ಪ್ರಗತಿಶೀಲರ ತಾತ್ತ್ವಿಕ ನಿಲುವುಗಳ ಅಬ್ಬರದ ಪ್ರಚಾರ ಕುರಿತಂತೆ ತಮ್ಮ ಅಭಿಪ್ರಾಯಗಳನ್ನು ಮೇಲಿನಂತೆ ದಾಖಲಿಸುತ್ತಾರೆ.

ಪ್ರಗತಿಶೀಲರಲ್ಲಿಯೇ ಉಂಟಾದ ಪರಸ್ಪರ ನಿಂದನೆ ಮತ್ತು ಅಂತಃಕಲಹಗಳು ತಪ್ಪುಕಲ್ಪನೆಗೆ ದಾರಿ ಮಾಡಿಕೊಟ್ಟಿತು. ಅರ್ಚಕ ವೆಂಕಟೇಶ, ತ.ರಾ.ಸು., ಅ.ನ.ಕೃ., ಕುಮಾರ ವೆಂಕಣ್ಣ, ನಾಡಿಗೇರ ಕೃಷ್ಣರಾಯರು ಒಂದು ಬಣವಾಗುತ್ತಾರೆ. ಪ್ರಗತಿಶೀಲರ ಅಸ್ತಿತ್ವಕ್ಕಾಗಿ ಹೋರಾಡಿ ಎಲ್ಲರ ವಿರೋಧ ಕಟ್ಟಿಕೊಳ್ಳುತ್ತಾರೆ. ನಿರಂಜನ, ಕಟ್ಟೀಮನಿ ಮುಂತಾದವರು ಮತ್ತೊಂದು ಬಣವಾಗುತ್ತಾರೆ. ಹೀಗೆ ಅ.ನ.ಕೃ. ಮತ್ತು ನಿರಂಜನರ ಬಣವೆಂದು ಪ್ರಗತಿಶೀಲ ಚಳವಳಿ ಸ್ಪಷ್ಟವಾಗಿ ಇಬ್ಭಾಗವಾಗುತ್ತದೆ. ತ.ರಾ.ಸು. ಅವರು ಅ.ನ.ಕೃ ಬಣದ ಮುಂಚೂಣಿದಾರರಾಗುತ್ತಾರೆ. ಈ ರೀತಿ ನಾಡಿನಾದ್ಯಂತ ಸಂಚರಿಸಿದ ಅ.ನ.ಕೃ. ಮತ್ತು ಸಂಗಡಿಗರು ಪ್ರಗತಿಶೀಲ ಸಾಹಿತ್ಯದ ಧ್ಯೇಯೋದ್ದೇಶಗಳನ್ನು ಸಾರುತ್ತಾರೆ. ಪ್ರಗತಿಶೀಲರು ಕೂಲಿಕಾರ್ಮಿಕರ, ಬಡವರ, ಹಳ್ಳಿಗರ, ವಿದ್ಯಾರ್ಥಿಗಳ ಕಷ್ಟ ಸುಖಗಳನ್ನು ಕುರಿತು ಬರೆಯಬೇಕೆನ್ನುತ್ತಾರೆ. ಧರ್ಮದ ಹೆಸರಿನಲ್ಲಿ ನಡೆಯುವ ವೇಶ್ಯಾವೃತ್ತಿ ಹೋಗಬೇಕೆನ್ನುತ್ತಾರೆ. ಆಧುನಿಕ ಸಾಹಿತ್ಯ ಬಹುಮಟ್ಟಿಗೆ ನಿರರ್ಥಕವಾದ ಸಾಹಿತ್ಯ ಯುವಕ/ತಿಯರ ಅಪಕ್ವ ಪ್ರಣಯದ ಚೆಲ್ಲಾಟಗಳಿಂದ ತುಂಬಿದೆ. ಜಾನಪದದೃಷ್ಟಿ ಅವರಲ್ಲಿ ಶೂನ್ಯವೆನ್ನುತ್ತಾರೆ. ಪ್ರಗತಿಶೀಲ ಸಾಹಿತ್ಯದ ಆಶಯವನ್ನು ಖಚಿತಪಡಿಸಿದ ಅ.ನ.ಕೃ. ಅವರಿಗೆ ಸಮಾಜಾಭಿವೃದ್ಧಿಯ ಬಗ್ಗೆ ಅಪಾರವಾದ ಕಾಳಜಿ ಇತ್ತು.

ನಿರಂಜನ ಮತ್ತು ಕಟ್ಟೀಮನಿಯವರು ಅ.ನ.ಕೃ. ಬಣಕ್ಕೆ ವಿರೋಧವಾದ ನಿಲುವನ್ನು ಹೊಂದಿದ್ದಂತಹವರು. ಇವರಿಗೆ ಸಂಪೂರ್ಣವಾಗಿ ಮಾರ್ಕ್ಸ್‌ವಾದದ ಪ್ರಭಾವವಾಗಿರುತ್ತದೆ. ಆದರೆ ಪ್ರಗತಿಶೀಲ ಚಳವಳಿ ಕ್ಷೀಣಿಸಲು ಅ.ನ.ಕೃ ಮತ್ತು ನಿರಂಜನ ಅವರು ಸ್ಪಷ್ಟವಾಗಿ ಎರಡು ಪಕ್ಷಗಳಲ್ಲಿ ತಮ್ಮನ್ನು ಗುರುತಿಸಿಕೊಳ್ಳುತ್ತಾರೆ. ನಿರಂಜನ ಮತ್ತು ಕಟ್ಟೀಮನಿಯವರು ಮಾರ್ಕ್ಸ್‌ಸಿದ್ಧಾಂತದಿಂದ

ಪ್ರಭಾವಿತರಾಗಿ ಕಮ್ಯೂನಿಷ್ಟ್ ಪಕ್ಷದಲ್ಲಿ ಗುರುತಿಸಿಕೊಂಡರೆ ಅ.ನ.ಕೃ ಅವರು ಕಾಂಗ್ರೆಸ್ ಪಕ್ಷದಲ್ಲಿ ಸ್ಪಷ್ಟವಾಗಿ ಗುರುತಿಸಿಕೊಳ್ಳುತ್ತಾರೆ. ಈ ರೀತಿ ಎರಡು ರಾಜಕೀಯ ಪಕ್ಷಗಳಲ್ಲಿ ಗುರುತಿಸಿಕೊಂಡದ್ದರ ಕಾರಣದಿಂದ ಆ ರಾಜಕೀಯ ಪಕ್ಷಗಳ ಮನೋಧರ್ಮವೇ ಬೇರೆಬೇರೆಯಾಗಿದ್ದರಿಂದ ಈ ಸೈದ್ಧಾಂತಿಕ ಕಾರಣವೇ ಪ್ರಗತಿಶೀಲ ಚಳವಳಿ ಕ್ಷೀಣಿಸಲು ಕಾರಣವಾಗುತ್ತದೆ. ಮಾರ್ಕ್ಸ್‌ಸಿದ್ಧಾಂತದ ಪ್ರೇರಣೆಯಿಂದಲೇ ರೈತರ ಹೋರಾಟವನ್ನು ಕುರಿತಾದ 'ಚಿರಸ್ಮರಣೆ' ಬರೆದರು. ಅನಂತರ 'ಮೃತ್ಯುಂಜಯ'ಇವರ ಕಾದಂಬರಿಗಳಲ್ಲಿ ಮುಖ್ಯವಾದುದು. ಕಟ್ಟೀಮನಿಯವರು 'ಜ್ವಾಲಾಮುಖಿಮೇಲೆ' ಹಾಗೂ ಸ್ವಾತಂತ್ರ್ಯ ಚಳವಳಿಯನ್ನು ಬಿಂಬುಸುವಂತಹ 'ಮಾಡಿಮಡಿದವರು' ಕಾದಂಬರಿಗಳನ್ನು ರಚಿಸಿದರು. ಪ್ರಗತಿಶೀಲ ಸಾಹಿತ್ಯದಲ್ಲಿನ ಧೋರಣೆಗಳೆಲ್ಲವು ಮುಂದೆ ಬಂಡಾಯ ಸಾಹಿತ್ಯದಲ್ಲಿಯೂ ಕಂಡು ಬಂದವು. ಕ್ರೂರ ವ್ಯವಸ್ಥೆ ವಿರುದ್ಧ, ಯಜಮಾನ ಸಂಸ್ಕೃತಿಯ ವಿರುದ್ಧ, ಮತ್ತು ಒಳಸಂಚುಗಳ ವಿರುದ್ಧ ಬಂಡೆದ್ದ ಪ್ರಗತಿಪರ ಮನೋಧರ್ಮವೇ ಬಂಡಾಯ ಸಾಹಿತ್ಯದ ಮೂಲ ಸ್ವತ್ತಾಯಿತು.

ಹೀಗೆ ಕರ್ನಾಟಕದಲ್ಲಿ ಬಿರುಸಿನಿಂದ ಆರಂಭಗೊಂಡ ಪ್ರಗತಿಶೀಲ ಚಳವಳಿಯಲ್ಲಿ ಒಂದೆರೆಡು ವರ್ಷಗಳಲ್ಲಿಯೇ ಪರಸ್ಪರ ಬಿರುಸಾದ ಚರ್ಚೆಗಳು, ವಾಗ್ವಾದಗಳು ನಡೆದವು. ಈ ತರಹದ ಭಿನ್ನಾಭಿಪ್ರಾಯ, ಮಾತಿನ ಚಕಮಕಿ ಮುಖ್ಯವಾಗಿ ತಲೆದೋರಿದ್ದು ಪ್ರಗತಿಶೀಲ ನಾಯಕರಾದ ಅ.ನ.ಕೃ. ಮತ್ತು ನಿರಂಜನ ಅವರ ಮಧ್ಯೆ. ಜಿ.ಪಿ.ರಾಜರತ್ನಂ ಬರೆದ 'ಗಂಡುಗೊಡಲಿ' ನಾಟಕವನ್ನು ಅ.ನ.ಕೃ. ಬಹಿರಂಗವಾಗಿ ಟೀಕಿಸಿದಾಗ ನಿರಂಜನ ಅದನ್ನು ಖಂಡಿಸಿದರು. ಇದರಿಂದ ಪರಸ್ಪರ ಭಿನ್ನಾಭಿಪ್ರಾಯ ಉಂಟಾಗಿ ಚಳವಳಿಯಡಿಯಲ್ಲಿ ತಾವೆಲ್ಲ ಒಂದೇ ಎಂಬಂತೆ ಕಂಡರು. ಆಂತರಿಕವಾಗಿ ಅಸಮಾಧಾನ, ಅನಾದರಗಳು ಹೊಗೆಯಾಡತೊಡಗಿದವು. ಅತ್ಯುತ್ಸಾಹದಿಂದ ಆರಂಭಗೊಂಡ ಶೀಘ್ರ ಚಳವಳಿ ಅಷ್ಟೇ ಶೀಘ್ರ ನೀರಸವಾಗತೊಡಗಿತು. ಹಾಗಾಗಿ ೧೯೪೫ ರ ವೇಳೆಗೆ ಪ್ರಗತಿಶೀಲರಲ್ಲಿ ಒಡಕಿರುವುದು ಸ್ಪಷ್ಟವಾಗಿ ಎಲ್ಲರಿಗೂ ಕಾಣಿಸಲಾರಂಬಿಸಿತು. ಹಾಗಾಗಿ ಕಂಡುಬರುತ್ತದೆ ಈ ವೇಳೆಗೆ ಅ.ನ.ಕೃ. ಅವರ ಚಳವಳಿ ತಾತ್ಕಾಲಿಕವಾಗಿ ಸ್ಥಗಿತಗೊಳ್ಳಬೇಕಾಯಿತು. ಅನಂತರ ಪ್ರಗತಿಶೀಲ ಚಳವಳಿಯನ್ನು ಮತ್ತೆ ಬದುಕಿಸುವ ಪ್ರಯತ್ನ ಮಾಡುತ್ತಾರೆ. ೧೯೫೨ ಜೂನ್ ೪ ರಿಂದ ೭ ರ ವರೆಗೆ ಹಿರಿಯೂರಿನಲ್ಲಿ ನಡೆದ ಪ್ರಗತಿಶೀಲ ಸಮ್ಮೇಳನ ಅ.ನ.ಕೃ.ಅವರ ವಿಚಾರಧಾರೆಗಳಿಗೇ ಮೀಸಲಾಗುತ್ತದೆ. ಕಮ್ಯುನಿಸ್ಟರ ವಿರೋಧಿ ಬಣವೆಂದೇ ಗುರುತಿಸಲ್ಪಡುತ್ತದೆ. ಭಾರತೀಯ ಪ್ರಗತಿಶೀಲ ಲೇಖಕರೊಂದಿಗೆ ಕನ್ನಡದ ಪ್ರಗತಿಶೀಲ ಲೇಖಕರು ಕ್ರಿಯಾಶೀಲತೆಯನ್ನು, ಸಂಬಂಧವನ್ನು ಕಳೆದುಕೊಳ್ಳುತ್ತಾರೆ. ೧೯೫೨-೫೬ ರ ಅವಧಿಯಲ್ಲಿ ಎಲ್ಲಿಯೂ ಪ್ರಗತಿಶೀಲರ ಹೆಸರು ಕೂಡಾ ಕೇಳಿ ಬರುವುದಿಲ್ಲ.ಈ ವೇಳೆಯಲ್ಲಿ ಕರ್ನಾಟಕದಲ್ಲಿ ಸಾಂಸ್ಕೃತಿಕವಾಗಿ, ರಾಜಕೀಯವಾಗಿ ಮಹತ್ತರ ಬದಲಾವಣೆಗಳಾಗಿ ನವ್ಯ ಸಾಹಿತ್ಯದ ಹುಟ್ಟಿಗೆ ಕಾರಣವಾಗುತ್ತದೆ.

## ೨.೬. ಪ್ರಗತಿಶೀಲ ಚಳವಳಿ ಕ್ಷೀಣಿಸಲು ಕಾರಣಗಳು :

೧) ಈ ಚಳವಳಿ ಸೋಲಿಗೆ ಸೈದ್ಧಾಂತಿಕ ಬದ್ಧತೆಯ ಕೊರತೆ.

೨) ಶೋಷಿತ ವರ್ಗದ ಬಗ್ಗೆ ಪ್ರಗತಿಶೀಲರು ಕೇವಲ ಅನುಕಂಪವನ್ನಷ್ಟೇ ತೋರಿದರು.

೩) ಪ್ರಗತಿಶೀಲರು ಬರೆದೇ ಬದುಕಬೇಕಾಗಿತ್ತು ಹಾಗಾಗಿ ಗುಣಮಟ್ಟ ಕುಸಿಯಿತು.

೪) ಪ್ರಗತಿಶೀಲ ಸಂಘಟನೆ ವೈಯಕ್ತಿಕತೆಗೆ ತಿರುಗಿಕೊಂಡಿದ್ದರಿಂದ ಅದರ ತಳ ಅಲುಗಾಡಿತು.

೫) ಈ ಚಳವಳಿ ನವೋದಯದವರ ತಿರಸ್ಕಾರಕ್ಕೆ ಗುರಿಯಾಯಿತು.

೬) ಗಾಂಧೀಜಿಯವರ ಸ್ವಾತಂತ್ರ್ಯ ಹೋರಾಟದ ಅಬ್ಬರ ಮತ್ತು ಭಾರತದ ರಾಜಕೀಯ ಪಲ್ಲಟಗೊಂಡಿದ್ದು ಹಾಗೂ ಗಾಂಧೀಜಿಯ ಹತ್ಯೆಯ ಭಯ, ಗಾಂಧೀಜಿಯವರ ಆದರ್ಶ ಹಿಂದೆ ಸರಿದದ್ದು.

೭) ಸ್ವಾತಂತ್ರ್ಯ ಆಂದೋಲನದ ಜೊತೆಯಲ್ಲಿಯೇ ಕರ್ನಾಟಕದ ಕನಸು ಕಂಡದ್ದು.

## ೨.೭. ಪ್ರಗತಿಶೀಲ ಪಂಥ ಮತ್ತು ತ.ರಾ.ಸು. ಅವರ ವೈಶಿಷ್ಟ್ಯ :

ಸೃಜನಶೀಲ ಸಾಹಿತ್ಯದ ಉದ್ದೇಶ ಸಮಾಜದ ಪ್ರಗತಿಗೆ ಪೂರಕವಾಗಿರುತ್ತದೆ. ಅಂದಹಾಗೇ ಪ್ರಗತಿಶೀಲರ ಉದ್ದೇಶ ಕೂಡ ಸಮಾಜ ಬದಲಾವಣೆಯೇ. ಪ್ರಗತಿಶೀಲರು ಸಾಮಾಜಿಕ ಸಮಸ್ಯೆಗಳಾದ ಬಡತನ, ಕೂಲಿ-ಕಾರ್ಮಿಕರು, ವೇಶ್ಯಾವೃತ್ತಿ, ಭಿಕ್ಷಾಟನೆ, ಬಾಲಾಪರಾಧಿಗಳು, ಸ್ತ್ರೀಸ್ವಾತಂತ್ರ್ಯ ಮುಂತಾದವುಗಳಿಗೆ ತಮ್ಮ ಕಥೆ ಕಾದಂಬರಿಗಳಲ್ಲಿ ಹೆಚ್ಚಿನ ಒತ್ತುಕೊಟ್ಟರು. ರೋಚಕತೆ ಮತ್ತು ಆವೇಶಭರಿತ ಭಾಷೆ ಪ್ರಯೋಗವಾದರೂ ಕಲಾತ್ಮಕತೆಯೇನು ತೀರಾ ಕುಸಿಯಲಿಲ್ಲ. ಪ್ರಗತಿಶೀಲರ ಆಶಯ ಕುರಿತಂತೆ ಎಲ್.ಎಸ್. ಶೇಷಗಿರಿರಾಯರ ಮಾತಿನಲ್ಲಿ ಹೇಳುವುದಾದರೆ "ನವೋದಯ ಲೇಖಕರಂತೆ ಪ್ರಗತಿಶೀಲರು ಬದುಕು ಸ್ವೀಕಾರಾರ್ಹವೆಂದು ನಂಬಿದವರೇ. ಬದುಕನ್ನು ಇನ್ನೂ ಶುಭ್ರಗೊಳಿಸಬೇಕೆಂಬ ಕಳಕಳಿ ಇವರಲ್ಲಿ ತೀವ್ರವಾಗಿತ್ತು. ಇವರು ಕೆಲವು ಮೌಲ್ಯಗಳನ್ನು ಸ್ವೀಕರಿಸಿದರು. ಈ ಮೌಲ್ಯಗಳು ತೀರಾ ಭಿನ್ನವಾಗಿರಲಿಲ್ಲ. ತ್ಯಾಗ, ಪ್ರಾಮಾಣಿಕತೆ, ಅನುಕಂಪ, ಸ್ನೇಹ, ಪ್ರೇಮ, ದೇಶ ಪ್ರೇಮಗಳನ್ನು ಒಪ್ಪಿಕೊಂಡವರು ಪ್ರಗತಿಶೀಲರು."[೨೯] ಈ ತರಹದ ಸಾಮಾಜಿಕವಾದ ಜವಾಬ್ದಾರಿ ಪ್ರಗತಿಶೀಲರಿಗಿತ್ತು. ಇಂತಹ ಆಶಯದೊಂದಿಗೆ ತ.ರಾ.ಸು ಅವರು ಸಾಹಿತ್ಯ ಕೃಷಿಯಲ್ಲಿ ತಮ್ಮನ್ನು ತೊಡಗಿಸಕೊಂಡರು.

ಪ್ರಗತಿಶೀಲ ಚಳವಳಿಯಲ್ಲಿ ಒಡಕುಂಟಾದ ಮೇಲೆ ಅಪ್ಪಟ ಕಮ್ಯುನಿಸ್ಟರಾದ ನಿರಂಜನ ಮತ್ತು ಕಟ್ಟೀಮನಿ ಹೊರತುಪಡಿಸಿ ಅ.ನ.ಕೃ., ತ.ರಾ.ಸು., ಅರ್ಚಕ ವೆಂಕಟೇಶ್, ಕುಮಾರ ವೆಂಕಣ್ಣ, ನಾಡಿಗೇರ ಕೃಷ್ಣರಾಯ, ಎಸ್. ಅನಂತನಾರಾಯಣ ಮುಂತಾದವರು ಅ.ನ.ಕೃ., ಬಣದಲ್ಲಿ ತಮ್ಮನ್ನು ಗುರುತಿಸಿಕೊಂಡು ಬರವಣಿಗೆಯಲ್ಲಿ ತೊಡಗುತ್ತಾರೆ. ಅದರಲ್ಲಿಯೂ ತ.ರಾ.ಸು. ಮತ್ತು ಅ.ನ.ಕೃ., ಪ್ರಗತಿಶೀಲ ಸಾಹಿತ್ಯಾಕಾಶದಲ್ಲಿ ಎರಡು ಧ್ರುವಗಳಿದ್ದಂತೆ. ಅ.ನ.ಕೃ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ತಮ್ಮ ಯುಗವನ್ನು ತೆರೆದರೆ ಆ ಯುಗದಲ್ಲಿ ತ.ರಾ.ಸು ಅವರು ಪ್ರಮುಖ ಕೃತಿಕಾರರಾಗುತ್ತಾರೆಂದು ಎಲ್.ಎಸ್. ಶೇಷಗಿರರಾಯರು ಅಭಿಪ್ರಾಯಪಟ್ಟಿದ್ದಾರೆ. ಅ.ನ.ಕೃ ಅವರ ಅನುಯಾಯಿಯಾದ ತ.ರಾ.ಸು. ಅವರು ಪ್ರಗತಿಶೀಲ ಬರಹಗಾರರಲ್ಲಿಯೇ ಪ್ರಮುಖವಾದ ಕಾದಂಬರಿಕಾರರು. ಕಾದಂಬರಿಗಳನ್ನು ಬರೆದೇ ಬದುಕುತ್ತೇನೆಂದು ಹೊರಟವರು ಅ.ನ.ಕೃ., ಶಿವರಾಮಕಾರಂತ ಮತ್ತು ತ.ರಾ.ಸು. ಎಂದರೆ ತಪ್ಪಾಗಲಾರದು. ಇಂಗ್ಲಿಷ್ ವ್ಯಾಮೋಹದಿಂದ ಹುಟ್ಟಿದ ನವೋದಯ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಸಂಪ್ರದಾಯದ ಸೆರೆಯಲ್ಲಿ ಸಿಕ್ಕಿಕೊಂಡಿದ್ದಾಗ ಪ್ರಗತಿಶೀಲ ಪಂಥದ ಕಾದಂಬರಿಕಾರ ತ.ರಾ.ಸು. ಅವರು ಬಿಡುವಿಲ್ಲದೆ ಬರೆದು ಬದುಕಿದವರು. ಬರವಣಿಗೆಯನ್ನೇ ಜೀವನೋಪಾಯವಾಗಿ ತೆಗೆದುಕೊಳ್ಳುತ್ತಾರೆ. ಸ್ಥಾನಬಲವಿಲ್ಲದೆ, ಅಧಿಕಾರ ಬಲವಿಲ್ಲದೆ, ಧನಬಲವಿಲ್ಲದೆ ಕೇವಲ ವಾಚಕ ಬಲವನ್ನೇ ನಂಬಿ ಸುಮಾರು ನೂರು ಕೃತಿಗಳನ್ನು ಬರೆದ ತ.ರಾ.ಸು ಇಂದಿಗೂ ಓದುಗ ವರ್ಗದ ಮೆಚ್ಚುಗೆ ಗಳಿಸಿದ್ದಾರೆ.

ಅವರ ಸಾಮಾಜಿಕ ಕಾದಂಬರಿಗಳಲ್ಲಿ ಕಾಣುವ ಸಮಕಾಲೀನ ಅಂಶಗಳೆಂದರೆ ಪ್ರಧಾನವಾಗಿ ಸ್ತ್ರೀಸಮಸ್ಯೆಗಳು. ಏಕೆಂದರೆ ಪ್ರಧಾನವಾಗಿ ಸ್ತ್ರೀಸಂವೇದನೆಯನ್ನೆ ಗುರುತಿಸಬೇಕಾಗಿರುವುದರಿಂದ ವೇಶ್ಯಾಸಮಸ್ಯೆ, ಲೈಂಗಿಕ ಸಮಸ್ಯೆಗಳು, ಬಡತನ, ಸ್ತ್ರೀಸ್ವಾತಂತ್ರ್ಯ, ಸಾಂಸಾರಿಕ ಸಮಸ್ಯೆಗಳು (ಕೌಟಂಬಿಕ), ಸ್ಥಾನಮಾನ, ವರದಕ್ಷಿಣೆ, ಗ್ರಾಮೀಣ ಪ್ರದೇಶದ ಸ್ತ್ರೀ, ನಗರ ಪ್ರದೇಶದ ಸ್ತ್ರೀಯರು ಹೀಗೆ ಇನ್ನು ಹಲವಾರು ಸಮಸ್ಯೆಗಳನ್ನು ಇವರ ಕಾದಂಬರಿಗಳಲ್ಲಿ ಗುರುತಿಸಬಹುದಾಗಿದೆ.

ವೇಶ್ಯಾಸಮಸ್ಯೆಯನ್ನು ಚಿತ್ರಿಸುವ ಕಾದಂಬರಿಯೆಂದರೆ 'ಮಸಣದ ಹೂವು', ಕಾದಂಬರಿಯಲ್ಲಿ ಬರುವ ಪಾರ್ವತಿ ವೇಶ್ಯೆಯಾಗುವುದಕ್ಕೆ ಪುರುಷನೆ ಕಾರಣ. ಇಲ್ಲಿನ ಪಾರ್ವತಿ ಮಾತ್ರವಲ್ಲದೆ ಉಳಿದ ಸ್ತ್ರೀಯರೂ ಹೇಗೆ ಈ ಜಾಲಕ್ಕೆ ಸಿಲುಕುತ್ತಾರೆಂಬುದು ಮತ್ತು ವೇಶ್ಯಾವೃತ್ತಿ ಬೆಳೆಯಲು ಸಾಮಾಜಿಕ ವ್ಯವಸ್ಥೆಯೇ ಹೇಗೆ ಕಾರಣವಾಗುತ್ತದೆಂಬುದು. ಇಂದಿಗೂ ಈ ಕಳಂಕ ವೃತ್ತಿ ನಮ್ಮ ಸಮಾಜದಿಂದ ದೂರವಾಗಿಲ್ಲ. ಹಿಂದೆ ರಾಜ ಮಹಾರಾಜರ ಕಾಲದಲ್ಲೂ ಈ ವೇಶ್ಯಾವೃತ್ತಿ ಬೆಳೆದುಕೊಂಡು ಬಂದಿದೆ. 'ಅಕ್ಕಮ್ಮನ ಭಾಗ್ಯ' ಕಾದಂಬರಿಯಲ್ಲಿ ಬರುವ ಅಕ್ಕಮ್ಮನಿಗೆ ಶ್ರೀಮಂತ ಬದುಕಿಗಿಂತ ಬಡತನದ ನೆಮ್ಮದಿ ಬದುಕೇ ತೃಪ್ತಿ ನೀಡುತ್ತದೆ. ಪ್ರಾಮಾಣಿಕತೆಯಿಂದ ಶ್ರಮಜೀವಿಯಾಗಿ ಬದುಕುವ ಅಕ್ಕಮ್ಮನ ಬಾಳಲ್ಲಿ ಹತ್ತುಎಕರೆ ಜಮೀನನ್ನು ಕಬಳಿಸಲು ಮೋಸಮಾಡುವುದಕ್ಕೆ ಮುಂದಾಗುವ ಯಜ್ಞನಾರಾಯಣ, ಅಕ್ಕಮ್ಮನಿಗೆ ಸಹಕರಿಸುವ ಜೋಗಿಹಳ್ಳಿ ಜನತೆ (ಬಡತನವಿದ್ದಾಗ) ಹಾಗೂ ಹಿರಿಯೂರಿನಲ್ಲಿ ನಿಷ್ಠೆಯಿಂದು ಅಮಲ್ದಾರರ ಸೇವೆ ಮಾಡಿದ್ದಕ್ಕಾಗಿ ಹತ್ತುಎಕರೆ ನೀರಾವರಿ ಭೂಮಿಯನ್ನು ಕೊಡಿಸುವ ಅಮಲ್ದಾರರು. ಈ ರೀತಿ ಅಕ್ಕಮ್ಮ ಬಡತನ ಮತ್ತು ಸಿರಿತನ ಎರಡನ್ನೂ ಅನುಭವಿಸಿದ ಹೆಣ್ಣು.

'ಬಿಡುಗಡೆಯ ಬೇಡಿ' ಕಾದಂಬರಿಯಲ್ಲಿ ಪುರೂಷನ ಬಂಧನದಿಂದ ವಿಮುಕ್ತಿ ಬಯಸುವ, ಸ್ವಾತಂತ್ರ್ಯಬೇಕೆಂದು ಹಂಬಲಿಸುವ ಹೆಣ್ಣು. ಜೊತೆಗೆ ಆರ್ಥಿಕ ಸ್ವಾತಂತ್ರ್ಯವನ್ನು ಬಯಸುತ್ತಾಳೆ, ನಗರ ಪ್ರದೇಶದ ಸ್ವಚ್ಛಂದ ಬದುಕಿಗೆ ಮಾರು ಹೋಗುತ್ತಾಳೆ, ಪ್ಲೋರಾ ಮತ್ತು ಶಾಲಿನಿ ಇವಳಿಗೆ ಸಹಾಯಕರಾಗುತ್ತಾರೆ. ಆರ್ಥಿಕ ಸ್ವಾತಂತ್ರ್ಯ ಸಿಕ್ಕು ಪುರುಷನಿಂದ ಬಂಧಮುಕ್ತಳಾದರೂ ಅವಳ ಬದುಕಿನ ನೆಮ್ಮದಿ ಹಾಳಾಗುತ್ತದೆ.

'ಯಕ್ಷಪ್ರಶ್ನೆ' ಕಾದಂಬರಿ ಅತೃಪ್ತ ಲೈಂಗಿಕ ಬದುಕನ್ನು ಕುರಿತಾದದ್ದು. ಹೆಣ್ಣು ಹಠಮಾರಿ, ತಾನೆ ಗೆಲ್ಲಬೇಕೆಂದು ಹೊರಟು, ವಿಪರೀತ ಪುರುಷ ದ್ವೇಷಿಯಾದಾಗ ಅವಳ ಬದುಕು ಯಾವ ರೀತಿ ಯಾತನಗೆ ಸಿಲುಕುತ್ತದೆಂಬುದನ್ನು ತಿಳಿಸುತ್ತದೆ. ತನ್ನ ಸ್ವಯಂ ಕೃತ ಅಪರಾಧದಿಂದ ಪುರುಷ ದ್ವೇಷಿಯಾದ ಹೆಣ್ಣು ಬದುಕಲ್ಲಿ ಅನೇಕ ಸಂಕಷ್ಟಗಳಿಗೆ ಸಿಲುಕುತ್ತಾಳೆ. ಹೆಣ್ಣಾದವಳಲ್ಲಿ ದ್ವೇಷ, ಮತ್ಸರ, ಹೆಚ್ಚಾದಾಗ ಒಂದು ಹೆಣ್ಣಿನ ಭವಿಷ್ಯವೇ ಹಾಳಾಗುತ್ತದೆಂಬುದಕ್ಕೆ, 'ಗಾಳಿಮಾತು' ಕಾದಂಬರಿ ಸಾಕ್ಷಿಯಾಗುತ್ತದೆ. ಅಪರಿಚಿತ ಪತ್ರವೊಂದು ಕಾದಂಬರಿಯುದ್ದಕ್ಕೂ ಕೆಲಸ ಮಾಡುತ್ತದೆ. ಪರಸ್ಪರ ಹೆಣ್ಣಿನ ಮಧ್ಯೆ ಮತ್ಸರ ಹೇಗೆ ಬಾಳನ್ನು ಹಾಳುಗೆಡವುತ್ತದೆಂಬುದನ್ನು ಕಾದಂಬರಿಯಲ್ಲಿ ಕಾಣುತ್ತೇವೆ. ಇವಿಷ್ಟೇ ಅಲ್ಲದೆ ರಾಜಕೀಯ ಪರಿಸರ, ಧಾರ್ಮಿಕ ಪರಿಸರ, ಕಲಾಲೋಕ (ಹಂಸಗೀತೆ ಕಾದಂಬರಿ) ಮುಂತಾದ ಸಮಸ್ಯೆಗಳು ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳಲ್ಲಿ ಕಂಡು ಬರುತ್ತವೆ.

ಈ ರೀತಿ ತ.ರಾ.ಸು ಅವರ ಕಾದಂಬರಿಗಳಲ್ಲಿ ಮೇಲಿನ ಎಲ್ಲ ತರಹದ ಸ್ತ್ರೀಯರು ಬಂದು ಹೋಗುತ್ತಾರೆ. ಪ್ರಸ್ತುತ ಸಂದರ್ಭದಲ್ಲಿಯೂ ಈ ಸ್ವಭಾವದವರು ನಮ್ಮ ಸುತ್ತಮುತ್ತಲಿದ್ದಾರೆ. ಅಕ್ಕಮ್ಮನಿಗೆ ಮೋಸ ಮಾಡುವ ಯಜ್ಞನಾರಾಯಣನಂತವರು, ಸ್ತ್ರೀಯರು ಹಠಸ್ವಭಾವದ ಹೆಣ್ಣುಗಳು, ದ್ವೇಷಮತ್ಸರದ ಹೆಣ್ಣುಗಳು, ಹೀಗೆ ಇಂದಿನ ದಿನಮಾನದಲ್ಲೂ ಈ ಸ್ವಭಾವದವರೆಲ್ಲರನ್ನು ಬದುಕಲ್ಲಿ ಕಾಣುವ ಸಾಧ್ಯವಿದೆ. ಹೀಗೆ ತ.ರಾ.ಸು ಅವರ ಸ್ತ್ರೀಪರವಾದ ಸಾಮಾಜಿಕ ಕಾದಂಬರಿಗಳಲ್ಲಿ ಸಮಕಾಲೀನತೆಯನ್ನು ಗುರುತಿಸಬಹುದಾಗಿದೆ.

ತ.ರಾ.ಸು ಅವರ ಕೃತಿಗಳಲ್ಲಿ ಸಮಕಾಲೀನ ಬದುಕಿನ ಸಮಸ್ಯೆಗಳ ಚಿತ್ರಣವನ್ನು ಕಾಣುತ್ತೇವೆ. ಶಾ.ಮಂ. ಕೃಷ್ಣರಾಯರ ಮಾತಿನಲ್ಲಿ ಹೇಳುವುದಾದರೇ " ತ.ರಾ.ಸು ಅವರು ಬದುಕಿಗೆ ವಿಮುಖವಾಗಿ ನಿಂತು, ಕೇವಲ ಕಲ್ಪನೆಯ ಕಣ್ಣುಗಳಿಂದ ಬದುಕಿನ ಶೃಂಗಾರವನ್ನಷ್ಟೆ ವರ್ಣಿಸಿ ನಾಲ್ಕು ಗೋಡೆಗಳಾಚೆ ಹೋಗದೆ ಉಪದೇಶಗಳ ದೊಡ್ಡದೊಡ್ಡ ಮಾತುಗಳನ್ನು ಗಿಡಿಯುವುದಿಲ್ಲ. ಅವರು ಜೀವನವನ್ನು ಹತ್ತಿರದಿಂದ ನಿರೀಕ್ಷಿಸುತ್ತಾರೆ. ಆಗು-ಹೋಗುಗಳನ್ನು ಗುರುತಿಸುತ್ತಾರೆ. ಅವರ ಸಾಹಿತ್ಯದಲ್ಲಿ ಈ ಗುಣವನ್ನು ಕಾಣಬಹುದು."[೩೦] ಕೃಷ್ಣರಾಯರ ಈ ಮಾತು ತ.ರಾ.ಸು ಅವರ ಬರವಣಿಗೆಯಲ್ಲಿ ಬದುಕಿನ ಬಗ್ಗೆ ಅವರಿಗಿದ್ದ ಕಾಳಜಿಯನ್ನು ತಿಳಿಸುತ್ತದೆ. ಮಾರ್ಕ್ಸ್‌ವಾದಿ ಸಿದ್ಧಾಂತದಿಂದ ಪ್ರಭಾವಿತರಾದ ತ.ರಾ.ಸು. ಅವರು ತಮ್ಮ ಐತಿಹಾಸಿಕ

ಕಾದಂಬರಿಗಳಲ್ಲಿ ಮಾರ್ಕ್ಸ್‌ವಾದಿ ಇತಿಹಾಸ ಗ್ರಹಿಕೆಯನ್ನು ಚಿತ್ರಿಸಿದ್ದಾರೆ. ಐತಿಹಾಸಿಕ ಕಾದಂಬರಿಗಳನ್ನು ಬರೆಯುವುದರಲ್ಲಿ ಪ್ರಸಿದ್ಧರಾದ ತ.ರಾ.ಸು. ಅವರ ಕಾದಂಬರಿಗಳಲ್ಲಿ ಪ್ರಗತಿಶೀಲತೆಯ ಭಾವುಕತೆ, ರಂಜಕತೆ, ವ್ಯಕ್ತವಾಗಿದೆ. ಚಿತ್ರದುರ್ಗದ ಪಾಳೇಗಾರರ ಇತಿಹಾಸವನ್ನು ಹಿನ್ನೆಲೆಯಾಗಿಟ್ಟುಕೊಂಡು ರಚಿಸಿದ ಕಾದಂಬರಿಗಳೆಂದರೆ 'ಕಂಬನಿಯ ಕುಯಿಲು', 'ರಕ್ತರಾತ್ರಿ', 'ರಾಜ್ಯದಾಹ', 'ತಿರುಗುಬಾಣ', 'ದುರ್ಗಾಸ್ತಮಾನ' ಮುಂತಾದವು.

ಪ್ರಗತಿಶೀಲರು ನಾಸ್ತಿಕರೆಂಬ ಅಪವಾದಕ್ಕೂ ಗುರಿಯಾದರು ಆದರೆ ತ.ರಾ.ಸು ಅವರು ಸಂಪ್ರದಾಯವಾದಿ ಕುಟುಂಬದಲ್ಲಿ ಬೆಳೆದುಬಂದರೂ ಸಂಪ್ರದಾಯಕ್ಕೆ ಕಟ್ಟುಬಿದ್ದವರಲ್ಲ. ಪರಂಪರೆಯ ಕಟ್ಟು-ಕಟ್ಟಳೆಗಳನ್ನು ತೊರೆದು ತಮ್ಮನ್ನು ತಾವೇ ರೂಪಿಸಿಕೊಂಡು ಬೆಳೆಯುತ್ತಾರೆ. ಇವರ ಕಾದಂಬರಿಗಳಲ್ಲಿ ಬರುವ ಸ್ತ್ರೀ, ಸಂಪ್ರದಾಯದ ಚೌಕಟ್ಟಲ್ಲಿ ಬದುಕುವವಳಲ್ಲ. ಐತಿಹಾಸಿಕ ಕಾದಂಬರಿಗಳಲ್ಲಿ ಬರುವ ಓಬವ್ವನಾಗತಿ, ಗಿರಿಜೆ ಪುರುಷ ಸಮಾಜದ ವಿರುದ್ಧ ಸೇಡನ್ನು ತೀರಿಸಿಕೊಳ್ಳುವ ಪಾತ್ರಗಳು. ಬ್ರಿಟಿಷರ ಆಳ್ವಿಕೆ ಅದಾಗಿದ್ದರಿಂದ ಸಹಗಮನದಂತಹ ಸಮಸ್ಯೆ ಹಾಗೂ ದತ್ತು ತೆಗೆದುಕೊಳ್ಳುವಂತಹ ವಿಷಯ, ಉತ್ತರಾಧಿಕಾರತ್ವ ಮುಂತಾದ ವಿಷಯಗಳ ಬಗ್ಗೆ ಹೆಣ್ಣು ತೆಗೆದುಕೊಳ್ಳುವ ನಿರ್ಧಾರಗಳು ತುಂಬ ಮುಖ್ಯವಾಗುತ್ತವೆ. ಆಡಳಿತಾತ್ಮಕವಾಗಿ ಪಾಳೇಗಾರರಿಗೂ ಮತ್ತು ದಳವಾಯಿಗಳಿಗೂ ನಡೆಯುವ ಸಂಘರ್ಷದಲ್ಲಿ ಸ್ತ್ರೀಯೇ ಪ್ರಮುಖ ಪಾತ್ರ ವಹಿಸುತ್ತಾಳೆ.

ಯಾರೇ ಸಾಹಿತಿ ತಾನು ಹುಟ್ಟಿದ ಪರಿಸರದೊಂದಿಗೆ ನಿಕಟವಾದ ಸಂಬಂಧ ಮತ್ತು ಸಂಪರ್ಕವನ್ನಿಟ್ಟುಕೊಂಡಿರುತ್ತಾನೆ. ಅಲ್ಲದೇ ಆ ಸಮಾಜದ ಹಾಗೂ ಆ ತಲೆಮಾರಿನ ಬದುಕಿನ ಬಗ್ಗೆ ಬರಹಗಾರನಿಗೆ ಬಹುದೊಡ್ಡ ಜವಾಬ್ದಾರಿ ಕೂಡ ಇರುತ್ತದೆ. ಮಾಕ್ಸಿಂ ಗಾರ್ಕಿ ಹೇಳುವಂತೆ " ಸಾಹಿತಿ ತನ್ನ ನಾಡಿನ, ತನ್ನ ಸಮುದಾಯದ ಅನುಭೂತಿಯಾಗಿ, ಕಿವಿಯಾಗಿ, ಕಣ್ಣಾಗಿ, ಹೃದಯವಾಗಿ-ತನ್ನ ಯುಗದ ವಾಣಿಯಾಗಿ ಇರುತ್ತಾನೆ..."[೩೧] ಗಾರ್ಕಿಯವರ ಈ ಮಾತುಗಳನ್ನು ತ.ರಾ.ಸು ಅವರ ಬರಹದಲ್ಲಿಯೂ ಕಾಣಬಹುದು. ತ.ರಾ.ಸು ಅವರು ತಾವು ಹುಟ್ಟಿದ ನೆಲದ ಪ್ರಾದೇಶಿಕ ಪ್ರಜ್ಞೆಯ ಓಜಸ್ಸು-ತೇಜಸ್ಸುಗಳನ್ನು ಓತಪ್ರೋತವಾಗಿ ತಮ್ಮ ಸಾಮಾಜಿಕ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ. ಅಲ್ಲದೆ ಅಲ್ಲಿನ ಪ್ರಾದೇಶಿಕ ಸೊಗಡನ್ನು ಅವರ ಸಾಮಾಜಿಕ ಕಾದಂಬರಿಗಳ ಪ್ರತಿ ಪಾತ್ರದಲ್ಲಿಯೂ ಕಾಣಬಹುದಾಗಿದೆ. ಮುಂದಿನ ಅಧ್ಯಾಯದಲ್ಲಿ ಸಾಮಾಜಿಕ ಕಾದಂಬರಿಗಳ ಬಗ್ಗೆ ದೀರ್ಘವಾಗಿ ಚರ್ಚಿಸಲಾಗುತ್ತದೆ.

ಐತಿಹಾಸಿಕ ಕಾದಂಬರಿಕಾರನೊಬ್ಬ ಗತಿಸಿದ ಘಟನೆಗಳನ್ನು ದಾಖಲಿಸುವ ಕೆಸವನ್ನಷ್ಟೇ ಮಾಡುವುದಿಲ್ಲ. ಚರಿತ್ರೆಯ ಘಟನೆಗಳನ್ನು ಸಮಕಾಲೀನತೆಯೊಂದಿಗೆ ಬೆಸೆಯುವ ಕೆಲಸವನ್ನು ಮಾಡಬೇಕಾಗುತ್ತದೆ. ತ.ರಾ.ಸು ಅವರ ಐತಿಹಾಸಿಕ ಕಾದಂಬರಿಗಳಲ್ಲಿ ಹೆಚ್ಚಿನವು ಚಿತ್ರದುರ್ಗದ ಪಾಳೆಯಗಾರರ ಆಡಳಿತಕ್ಕೆ ಸಂಬಂಧಿಸಿದವು. ಪಾಳೆಯಗಾರರು ಮತ್ತು ದಳವಾಯಿಗಳ

ಸಂಘರ್ಷ, ಇಂತಹ ಸಂದರ್ಭದಲ್ಲಿ ನಾಗತಿಯರು ತೆಗೆದುಕೊಳ್ಳುವ ದಿಟ್ಟನಿರ್ಧಾರ ಮುಖ್ಯವಾಗುತ್ತದೆ. ಕಾದಂಬರಿಯಲ್ಲಿ ಬರುವ ನಾಗತಿಯರು ಸಾಂಪ್ರದಾಯವನ್ನು ಮೀರಿ ನಿಂತವರು. ಬ್ರಿಟಿಷರ ಆಡಳಿತದಿಂದ ಭಾರತೀಯರ ಬದುಕಲ್ಲಿ ಕಾಲಿರಿಸಿದ್ದ ಆಧುನಿಕತೆ, ಸಾಮಾಜಿಕ ಸುಧಾರಣೆಯಿಂದ ಸತಿಪದ್ದತಿ, ವಿಧವಾ ವಿವಾಹದಂತಹ ವಿಷಯಗಳಲ್ಲಿ ಬದಲಾವಣೆ ಹಾಗೂ ದತ್ತು ಸ್ವೀಕಾರದ ವಿಷಯ ಬಂದಾಗ ಚಿಕ್ಕ ಬಾಲಕನನ್ನು ಪಟ್ಟಕ್ಕೇರಿಸಿ ತಾನೇ ಆಡಳಿತ ನಡೆಸುವ ನಾಗತಿಯರು ಇವರ ಐತಿಹಾಸಿಕ ಕಾದಂಬರಿಗಳಲ್ಲಿ ಕಂಡುಬರುತ್ತಾರೆ. ಅಲ್ಲದೆ ಕೆಳಜಾತಿಯ ಓಬವ್ವನಂಥವರೂ (ಕೋಟೆಯ ಕಾವಲುಗಾರನ ಹೆಂಡತಿ) ಕೋಟೆ ರಕ್ಷಣೆಯಲ್ಲಿ ತಳಯುವ ದಿಟ್ಟ ನಿಲುವು ಇವಿಷ್ಟೇ ಅಲ್ಲದೆ ರಾಜಮನೆತನಗಳು ಶಾಶ್ವತವಾದ ಸಂಬಂಧ ಸ್ಥಾಪಿಸಿ ಶತೃತ್ವ ದೂರಮಾಡಿ ನೆಮ್ಮದಿ ಆಡಳಿತ ನಡೆಸುವುದಕ್ಕಾಗಿ ಏರ್ಪಡಿಸುವ ವೈವಾಹಿಕ ಸಂಬಂಧಗಳು ಇವುಗಳಲ್ಲೆಲ್ಲ ಹೆಣ್ಣು ಪ್ರಮುಖ ಪಾತ್ರವಹಿಸುತ್ತಾಳೆ. ಈ ರೀತಿ ಕಾದಂಬರಿಗಳಲ್ಲಿನ ಸ್ತ್ರೀಯರು ಚರಿತ್ರೆಯನ್ನು ನೆನಪಿಸುವವರಾದರೂ ಅವರಲ್ಲಿನ ತ್ಯಾಗ, ಸೇಡು, ರಾಜ್ಯಾಡಳಿತ, ಚಾಣಕ್ಷತೆ, ಅರ್ಪಣಾ ಭಾವನೆ ಎಲ್ಲ ಕಾಲಕ್ಕೂ ಅನಿವಾರ್ಯವೆನಿಸುತ್ತದೆ. ಇವಿಷ್ಟೇ ಅಲ್ಲದೆ ಯುದ್ಧ ಸಂದರ್ಭದಲ್ಲಿ ದುರ್ಗದ ಮತ್ತು ಸುತ್ತಮುತ್ತಲ ಜನತೆ ತಳಯುವ ದಿಟ್ಟ ನಿರ್ಧಾರಗಳು ಸಹಾಯ ಮುಖ್ಯವೆನಿಸುತ್ತದೆ. ಈ ರೀತಿ ಸಂಪ್ರದಾಯದ ಭಾವನೆಗಳನ್ನು ಕಾದಂಬರಿಯಳಲ್ಲಿ ಬಿತ್ತರಿಸಿದ್ದಾರೆ.

ತ.ರಾ.ಸು. ಅವರ ಕೃತಿಗಳಲ್ಲಿ ಅದರಲ್ಲೂ ಕಾದಂಬರಿಗಳಲ್ಲಿ ಗ್ರಾಮೀಣ ಬದುಕಿನ ಜೀವನ ದರ್ಶನ ಮಾಡಿಸುವುದರೊಂದಿಗೆ ಪ್ರೇಮ-ಕಾಮಗಳು ಓದುಗರನ್ನು ಆಕರ್ಷಿಸುತ್ತವೆ. "ತ.ರಾ.ಸು. ಅವರ ಕಾದಂಬರಿಗಳಲ್ಲಿ ಹೆಣ್ಣು ಹೇಗೆ ಚಿತ್ರಿತವಾಗಿದ್ದಾಳೆ? ಎಂದು ಒಮ್ಮೆ ಗಮನ ಹರಿಸಿದರೆ ಹೆಣ್ಣಿನ ಬದುಕಿನ ಸೂಕ್ಷ್ಮ ಸಂವೇದನೆ, ಹೆಣ್ಣು ಪರಂಪರಾನುಗತವಾಗಿ ಹಲವು ಹತ್ತು ಮುಖಗಳ ನೋವು, ಅಸಹಾಯಕತೆ, ದಲಿತತ್ವ, ದೌರ್ಜನ್ಯ, ಅತ್ಯಾಚಾರ, ವಂಚನೆ, ಹಿಂಸೆ, ದುಃಖ, ದಾರುಣ ಹೋರಾಟ, ತ್ಯಾಗ, ಆದರ್ಶ, ಪ್ರತಿಕ್ರಿಯೆ, ಬಂಡಾಯ, ಸೋಲು-ಗೆಲುವು, ಹಳ್ಳಿಯ ಮುಗ್ಧ ಹೆಣ್ಣುಗಳು, ನಗರದ ಹೆಣ್ಣುಗಳು-ಒಟ್ಟು ಸಮಸ್ಯೆಯ ಚಿತ್ರಣವಾಗಿದ್ದಾಳೆ."[೩] ಟಿ.ಗಿರಜ ಅವರ ಈ ಅಭಿಪ್ರಾಯ ತ.ರಾ.ಸು. ಅವರ ಕಾದಂಬರಿಗಳಲ್ಲಿನ ಸ್ತ್ರೀಲೋಕ ತಿಳಿಯಲು ಸಹಕಾರಿಯಾಗುತ್ತದೆ. ಹೀಗೆ ತ.ರಾ.ಸು. ತಮ್ಮ ಕಾದಂಬರಿಗಳಲ್ಲಿ ಸ್ತ್ರೀ ಸಮಸ್ಯೆಗಳನ್ನು ಚಿತ್ರಿಸಿದ್ದಾರೆ. ಪ್ರಗತಿಶೀಲ ಲೇಖಕರಲ್ಲಿ ತುಂಬಾ ಭಿನ್ನವಾಗಿ ಕಾಣುವ ತ.ರಾ.ಸು ಅವರು, ತಮ್ಮ ಬರಹದಲ್ಲಿ ಸಮಾಜದ ನೊಂದ ಜನತೆಯ ಬದುಕಿನ ಚಿತ್ರಣವನ್ನು ತಂದಿದ್ದಾರೆ. ಪ್ರಗತಿಶೀಲ ಬರಹಗಾರರಲ್ಲಿ ಕಂಡುಬರುವ ಆಶಯವೇ ಇದಾಗಿದೆ. ಮುಖ್ಯ ಪ್ರಗತಿಶೀಲ ಕಾದಂಬರಿಕಾರರಾದ ಪ್ರೇಮಚಂದ್ ಹೇಳುವಂತೆ "ಆತನಲ್ಲಿ (ಸಾಹಿತಿಯಲ್ಲಿ) ಮಾನವತೆ, ದಿವ್ಯತೆ ಮತ್ತು ಸಭ್ಯತೆ ಹಾಸುಹೊಕ್ಕಾಗಿಯೇ ಇರುತ್ತವೆ. ದಲಿತರನ್ನು ನೊಂದವರನ್ನು ಮತ್ತು ವಂಚಿತರನ್ನು ಅವರು ವ್ಯಕ್ತಿಯಾಗಿರಲಿ ಅಥವಾ ಸಮುದಾಯವಾಗಿರಲಿ-ಬೆಂಬಲಿಸುವುದು ಮತ್ತು ಅವರ ಪರವಾಗಿ ವಾದಿಸುವುದು ಆತನ

ಕರ್ತವ್ಯವಾಗಿರುತ್ತದೆ."[೩೨] ಒಬ್ಬ ಲೇಖಕ ಮಾನವತಾವಾದಿಯಾಗಿರುತ್ತಾನೆಂಬುದಕ್ಕೆ ಈ ಮಾತು ಪುಷ್ಟಿಕೊಡುತ್ತದೆ.

ತ.ರಾ.ಸು ಅವರು ಬರೆದ ಪೌರಾಣಿಕ ಕಾದಂಬರಿಗಳು ಎರಡು ಮಾತ್ರ, 'ಬೆಳಕುತಂದ ಬಾಲಕ' ಮತ್ತು 'ನಾಲ್ಕು × ನಾಲ್ಕು = ಒಂದು'. 'ಬೆಳಕುತಂದ ಬಾಲಕ' ನಚಿಕೇತನನ್ನು ಕುರಿತಾದ ಕಲಾತ್ಮಕವಾದ ಕಾದಂಬರಿ. ಮತ್ತೊಂದು ಸತ್ಯಕಾಮಜಾಬಾಲಿಯ ಸಾಧನೆ, ಸಿದ್ಧಿಗಳನ್ನು ಕುರಿತದ್ದು. ಈ ಕಾದಂಬರಿಗಳು ಪೌರಾಣಿಕ ವಾತಾವರಣವನ್ನು ಜೀವಂತವಾಗಿ ಚಿತ್ರಿಸುತ್ತವೆ. ಅಲ್ಲದೆ ಪರಂಪರಾ ಪ್ರತಿತವಾದ ಪ್ರಾಚೀನ ಭಾರತವನ್ನು ನಮ್ಮ ಕಣ್ಮುಂದೆ ತಂದು ನಿಲ್ಲಿಸುತ್ತವೆ.

ಪ್ರಗತಿಶೀಲ ಬರಹಗಾರರಲ್ಲಿ ತ.ರಾ.ಸು ಅವರು ಉಳಿದ ಬರಹಗಾರರಿಗಿಂತ ಭಿನ್ನವಾಗಿ ಕಂಡುಬರುತ್ತಾರೆ. ಅ.ನ.ಕೃ. ಮಾರ್ಗವನ್ನನುಸರಿಸಿದ ತ.ರಾ.ಸು. ಅವರು ನಿರಂಜನ, ಕಟ್ಟೀಮನಿ, ಚದುರಂಗರಂತಹ ಕಾದಂಬರಿಗಳನ್ನು ಕೊಡಲು ಸಾಧ್ಯವಾಗಲಿಲ್ಲ. ಬೇರೆ ಕಾದಂಬರಿಕಾರರಂತೆ ತಮ್ಮ ಕಾದಂಬರಿಗಳಿಗೆ ಹೆಣ್ಣಿನ ಬದುಕನ್ನೆ ಪ್ರಧಾನವಾಗಿ ತೆಗೆದುಕೊಂಡರೂ ತ.ರಾ.ಸು ಅವರಿಗಿದ್ದ ಕೆಲವು ಮಿತಿಗಳು ಅವರಿಂದ ಪೇಲವ ಕಾದಂಬರಿಗಳು ಮತ್ತು ಅಂತಹ ಪಾತ್ರಗಳು ರೂಪುಗೊಳ್ಳುವುದಕ್ಕೆ ಕಾರಣವಾಗಿರಬಹುದು. ತ.ರಾ.ಸು ಅವರ ಕಾದಂಬರಿಗಳ ಸಂಖ್ಯೆ ಹೆಚ್ಚಾದಂತೆಲ್ಲಾ ಪಾತ್ರಸೃಷ್ಟಿ ಮತ್ತು ವಸ್ತುವಿನ ಬಳಕೆಯಲ್ಲಿ ರೋಚಕತೆ ಹೆಚ್ಚುತ್ತಾ ಹೋಯಿತು.

ಪ್ರಗತಿಶೀಲ ಬರಹಗಾರರು ತಮ್ಮ ಕಥೆ ಕಾದಂಬರಿಗಳಿಗೆ ಸ್ತ್ರೀಸಮಸ್ಯೆಗಳನ್ನೆ ವಸ್ತುವಾಗಿ ಸ್ವೀಕರಿಸುತ್ತಾರೆ. ಆನಂದರ 'ನಾನುಕೊಂದ ಹುಡುಗಿ' ಕಥೆ ಮತ್ತು ತ.ರಾ.ಸು ಅವರ 'ಮಸಣದ ಹೂ' ಕಾದಂಬರಿ ಎರಡರ ವಸ್ತು ಒಂದೇ. ಇಲ್ಲಿ ವೇಶ್ಯಾಸಮಸ್ಯೆ ಪಿತೃಪ್ರಧಾನ ವ್ಯವಸ್ಥೆಯಲ್ಲಿ ಸ್ತ್ರೀಗಿರುವ ಮೀಸಲು ಶಾಪಗಳಲ್ಲಿ ದೇವದಾಸಿ ಪದ್ದತಿಯು ಮಹಿಳೆಗೆ ಎರಡನೇ ದರ್ಜೆ ವ್ಯಕ್ತಿಯ ಸ್ಥಾನ ನೀಡಿದೆ. "ಗ್ರಾಮೀಣ ಪ್ರದೇಶದಲ್ಲಿ ಬೇರೂರಿರುವ ಮೌಢ್ಯತೆಯ ದೈತ್ಯರೂಪಿಯಾದ ದೇವದಾಸಿ ಪದ್ದತಿ ನಿರ್ಬಾಧಿತವಾಗಿ ನೆರವೇರಲು ದೈವಸಂಬಂಧ ಹೆಣೆದಿರುವ ಆಚರಣೆಯನ್ನು ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಮೇಲಿನ ಸ್ತರದಲ್ಲಿರುವ ಕಥೆಯ ನಿರೂಪಕ ನಿರಾಕರಣೆ ಮಾಡುವುದರ ಮೂಲಕ ಪುರುಷಪ್ರಧಾನ ಸಮಾಜದ ಶೋಷಣೆಯನ್ನು ಬಯಲು ಮಾಡುತ್ತಾನೆ."[೩೩] ಕಥೆಗಾರರ ಆಶಯ ಧರ್ಮದ ಹೆಸರಲ್ಲಿ ದೇವದಾಸಿ ಪದ್ಧತಿ ಸಮಾಜದಲ್ಲಿ ಪರಂಪರಾನುಗತವಾಗಿ ಬೆಳೆದು ಬಂದಿರುವುದು, ಮುಗ್ಧತೆಯಿಂದ ಮೌಢ್ಯವನ್ನು ಒಪ್ಪಿರುವ ಹೆಣ್ಣುಮಕ್ಕಳನ್ನ ಅದರಿಂದ ಬಿಡುಗಡೆಗೊಳಿಸಬೇಕೆಂಬುದು. ನಿರೂಪಕನ ಮಾತನ್ನು ಆಲಿಸಿ ಚೆನ್ನಿ ಆತ್ಮಹತ್ಯೆಗೆ ಶರಣಾಗಿ ಸ್ತ್ರೀಅಸ್ತಿತ್ವಕ್ಕೆ ಕಳಂಕಪ್ರಾಯವಾದ ಈ ಪದ್ಧತಿಯನ್ನು ಪ್ರತಿಭಟಿಸುತ್ತಾಳೆ. ಇಲ್ಲಿ ಕಥೆಗಾರ (ನಿರೂಪಕ) ನಿಗೆ ವ್ಯಷ್ಟಿಗಿಂತ ಸಮಷ್ಟಿ ಮುಖ್ಯವಾಗುತ್ತದೆ. ನಿರೂಪಕ ಇಲ್ಲಿ ಸದಾ ಜಾಗ್ರತೆಯಿಂದಿದ್ದು ಚೆನ್ನಿ ಜೊತೆ ಮಧ್ಯರಾತ್ರಿಯಲ್ಲಿ ತಾನೊಬ್ಬನೇ ಇದ್ದರೂ ಅವನ ಉದ್ದೇಶ ಲೈಂಗಿಕ ತೃಪ್ತಿ ಪಡೆಯುವುದಲ್ಲ. ದೇವದಾಸಿಯಂತಹ ಅನಿಷ್ಟಪದ್ದತಿ ಹೋಗಲಾಡಿಸುವ

ಆಶಾಭಾವನೆ. ಆದರೆ ತ.ರಾ.ಸು. ಅವರ ಮಸಣದ ಹೂ ಕಾದಂಬರಿಯಲ್ಲಿನ ಸ್ತ್ರೀ ಕಾಮತೃಪ್ತಿಗಾಗಿ, ಸದಾ ಹಣಕ್ಕಾಗಿ ಹಾತೊರೆಯುವವಳು. ಪುರುಷ ಸಮಾಜದ ಕೈಗೆ ಸಿಕ್ಕಿ ಹಣ ಸಂಪಾದಿಸುವ ಮೈ ಮಾರಾಟಮಾಡುವ ಗಿರಾಕಿಗಳಾಗಿ (ವಸ್ತುಗಳು) ಕಂಡುಬರುತ್ತವೆ. ಸ್ತ್ರೀ ಅಷ್ಟೇ ಅಲ್ಲ ಇದನ್ನು ಪ್ರೋತ್ಸಾಹಿಸುವ ಪುರುಷ ಸಮಾಜ ಕೂಡ ಇದರಲ್ಲಿ ಪಾಲು ಪಡೆಯುತ್ತದೆ. ವಿದ್ಯಾವಂತ, ಮುಗ್ಧ ಹೆಣ್ಣುಮಕ್ಕಳು, ವೇಶ್ಯಾಗೃಹ ಮಾಲೀಕರಾದ ಮಹಿಳೆಯರು, ಶಿಕ್ಷಕ ವೃತ್ತಿಯ ಸ್ತ್ರೀ ಕೂಡ, ಕಾಲೇಜು ಯುವಕ-ಯುವತಿಯರು, ಶ್ರೀಮಂತ ಕುಟುಂಬದ ಹೆಣ್ಣುಮಕ್ಕಳು ಇಷ್ಟೇ ಅಲ್ಲದೆ ನಿರುದ್ಯೋಗಿ ಪುರುಷರಿಗೆ ಇದು ದುಡಿಮೆಗೆ ದಾರಿ. ಅಸಹಾಯಕರಿಗೆ, ಅಂಗವಿಕಲರಿಗೆ (ಸಿರ್‌ಪಕಡು ಸಿಂಗಾರುವಿನಂತಹವರು) ಇದು ಹಣ ಸಂಪಾದಿಸುವ ವೃತ್ತಿ. ಯುದ್ಧ ಸಂದರ್ಭದಲ್ಲಿ ಹೆಣ್ಣುಮಕ್ಕಳನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ಮಾರಾಟ ಮಾಡುವುದು. ಮುಂಬಯಿಯಂತಹ ನಗರಗಳಿಗೆ ಹೋಗಿ ಹೆಣ್ಣಾದಂತಹವಳು ಹಣ ಸಂಪಾದಿಸುವ ಈ ದಂಧೆಗೆ ತೊಡಗುತ್ತಾಳೆ. ಕಾದಂಬರಿಯಲ್ಲಿ ಸಮಸ್ಯೆ ಕಂಡು ಬರುವುದು.

೧) ವೇಶ್ಯಾವಾಟಿಕೆಗೆ ಬರುವ ಹೆಣ್ಣುಗಳು

೨) ಅದಕ್ಕೆ ಕಾರಣವಾಗುವ ಸ್ತ್ರೀಯರು ಹಾಗೂ ಪುರುಷರು

೩) ವೇಶ್ಯಾವಾಟಿಕೆಯಲ್ಲಿನ ಅವರ ಬದುಕು

ಹೀಗೆ ತ.ರಾ.ಸು ಅವರ ಕಾದಂಬರಿಯಲ್ಲಿ ವ್ಯಷ್ಟಿ ಮುಖ್ಯವಾಗುತ್ತದೆ. ಆನಂದರ ಕಥೆಯಲ್ಲಿನ ಹಾಗೆ ಸಮಷ್ಟಿ ಮುಖ್ಯವಾಗುವುದಿಲ್ಲ. ವೇಶ್ಯಾವಾಟಿಕೆ ನಡೆಯುವುದು ಮೈಸೂರುನಗರ ಮತ್ತು ಮುಂಬಯಿಯಂತಹ ನಗರಗಳಲ್ಲಿ. ಮೂಲತಃ ಕಾದಂಬರಿಕಾರರು ಚಿತ್ರದುರ್ಗದವರಾದರೂ ಪ್ರಾದೇಶಿಕವಾದ ಬದುಕಾಗಲೀ ಇಲ್ಲಿನ ಜನತೆಯ ಕಸುಬಾಗಲಿ ಕಾದಂಬರಿಯಲ್ಲಿ ಕಂಡುಬರುವುದಿಲ್ಲ. ಹಾಗಾಗಿ ಪ್ರಾದೇಶಿಕವಾದ ಬದುಕಿನ ಸೊಗಡು ತ.ರಾ.ಸು ಅವರ ಕಾದಂಬರಿಗಳಲ್ಲಿ ವಿರಳವೆಂದೇ ಹೇಳಬಹುದಾಗಿದೆ. ಆದರೆ ಇವರು ಕಾದಂಬರಿಗಳಲ್ಲಿ ಕಥನಕೌಶಲ್ಯಕ್ಕಿಂತಲೂ ಹೆಚ್ಚಾಗಿ ಪಾತ್ರಜೋಡಣೆಗೆ (ಸೃಷ್ಟಿ) ಹೆಚ್ಚು ಒತ್ತು ಕೊಟ್ಟಿದ್ದಾರೆ. ಇವರ ಐತಿಹಾಸಿಕ ಕಾದಂಬರಿಗಳಲ್ಲಿ ಇಲ್ಲಿನ ನಾಯಕರ ಆಡಳಿತ, ದಳವಾಯಿಗಳ ಆಳ್ವಿಕೆ ಹಾಗೂ ಈ ಹೊತ್ತಿನಲ್ಲಿ ಸ್ತ್ರೀಯಾದಂತಹವಳು ತಳೆಯುವ ನಿಲುವು ಎಂತಹದೆಂದು ಚಿತ್ರಿಸಿದ್ದಾರೆ. ಇಲ್ಲಿನ ಪ್ರಾದೇಶಿಕವಾದ ಸೊಗಡು ಕಾದಂಬರಿ ಕಟ್ಟುವ ಕಲೆಯಲ್ಲಿ ಕ್ಷೀಣಿಸಿದ್ದರೂ ಕೂಡ ಯಥೇಚ್ಚವಾದ ಗಾದೆ ಮಾತುಗಳ ಬಳಕೆ ಕಂಡು ಬರುತ್ತದೆ. ಹೀಗೆ ತ.ರಾ.ಸು ಅವರ ಕಾದಂಬರಿಗಳ ವಸ್ತು ಮತ್ತು ಪ್ರಾದೇಶಿಕತೆಗೂ ಅಂತಹ ನಿಕಟವಾದ ಸಂಬಂಧವಿರುವಂತೆ ಕಂಡುಬರುವುದಿಲ್ಲ.

## ೨.೮. ತ.ರಾ.ಸು ಮತ್ತು ಸಮಕಾಲೀನ ಲೇಖಕರು :

**ಅ.ನ.ಕೃ :** ಪ್ರಗತಿಶೀಲ ಸಂದರ್ಭದಲ್ಲಿ ತ.ರಾ.ಸು ಅವರನ್ನು ಕುರಿತಂತೆ ಅವಲೋಕನ ಮಾಡುವ ಸಂದರ್ಭದಲ್ಲಿ ಅವರ ಸಮಕಾಲೀನ ಲೇಖಕರನ್ನು ಕುರಿತಂತೆ ಅವಲೋಕಿಸುವುದು ಅವಶ್ಯವೆನಿಸುತ್ತದೆ. ಒಬ್ಬ ಲೇಖಕನ ಸ್ಥಾನವನ್ನು ಇಷ್ಟೇ ಎಂದು ಹೇಳಲು ಸಾಧ್ಯವಿಲ್ಲ. ಪ್ರತಿಯೊಬ್ಬ ಲೇಖಕರಿಗೂ ಅವರದೇ ಆದ ಇತಿಮಿತಿಗಳು ಇರುತ್ತವೆ. ಈ ನಿಟ್ಟಿನಲ್ಲಿ ಬರಹವನ್ನೇ ಬದುಕಾಗಿಸಿಕೊಂಡ ಪ್ರಗತಿಶೀಲ ಬರಹಗಾರರಲ್ಲಿ ಅ.ನ.ಕೃ., ಕಟ್ಟೀಮನಿ, ನಿರಂಜನ ಮುಂತಾದವರ ಕೃತಿಗಳನ್ನು ಸ್ಥೂಲವಾಗಿ ವಿಶ್ಲೇಷಿಸುವುದರ ಮೂಲಕ ಅವರಿಗೆ ಸಮಕಾಲೀನರಾದ ತ.ರಾ.ಸು ಅವರ ಸ್ಥಾನವನ್ನು ನಿರ್ಧರಿಸಬಹುದು.

ಕನ್ನಡ ಸಾಂಸ್ಕೃತಿಕ ಚರಿತ್ರೆಯನ್ನು ರೂಪಿಸಿದ ಪ್ರಮುಖ ಶಿಲ್ಪಿಗಳಲ್ಲಿ ಅ.ನ.ಕೃ ಒಬ್ಬರು. ಇವರ ಜೀವಿತಾವಧಿಯಲ್ಲಿ ಭಾರತೀಯರ ಬದುಕಲ್ಲಿ ಅನೇಕ ಮಹತ್ವದ ಘಟನೆಗಳು, ಪಲ್ಲಟಗಳು ಘಟಿಸುತ್ತವೆ. ಅವರೇ ಹೇಳುವಂತೆ " ನನ್ನ ಆರು ದಶಕಗಳ ಬಾಳು ನಮ್ಮ ನಾಡಿನ ಮಹತ್ವದ ಕಾಲದೊಂದಿಗೆ ಹಾಸುಹೊಕ್ಕಾಗಿ ಹೊಂದಿಕೊಂಡಿದೆ. ಭಾರತ ಸ್ವಾತಂತ್ರ್ಯ ಸಂಗ್ರಾಮ, ಕನ್ನಡ ಚೇತನ ವಿಕಾಸ, ಭಾರತದ ಬಿಡುಗಡೆ, ಕನ್ನಡ ರಾಜ್ಯೋದಯಗಳೆಲ್ಲ ಈ ಕಾಲಾವಧಿಯಲ್ಲಿ ನಡೆದಿರುವ ಘಟನೆಗಳು"[೩೪] ಹೀಗೆ ಅ.ನ.ಕೃ  ಇಂತಹ ಬದಲಾವಣೆಗಳನ್ನು ಗಮನಿಸುತ್ತಲೇ ಬೆಳದವರು. ಅ.ನ.ಕೃ ಸಾಹಿತ್ಯ ಜೀವನವನ್ನು ಆರಂಭಿಸಿದ್ದು ನಾಟಕ ರಚನೆಯಿಂದ ಆದರೆ ಅವರಿಗೆ ಒಂದು ಸ್ಥಾನವನ್ನ ತಂದುಕೊಟ್ಟಿದ್ದು ಕಾದಂಬರಿ ಮಾಧ್ಯಮ. ಒಂದಾದ ಮೇಲೊಂದರಂತೆ ಸುಮಾರು ನೂರಕ್ಕು ಹೆಚ್ಚು ಕಾದಂಬರಿಗಳನ್ನು ರಚಿಸಿದ್ದಾರೆ. ಬರವಣಿಗೆಯನ್ನೆ ವೃತ್ತಿಯನ್ನಾಗಿ ಸ್ವೀಕರಿಸಿದ ಅವರು ಬದುಕಿನ ನೂರಾರು ಸಮಸ್ಯೆಗಳನ್ನು ಕಾದಂಬರಿಯ ಕಕ್ಷೆಯಲ್ಲಿ ತರುತ್ತಾರೆ. ಸುಶಿಕ್ಷಿತರಿಗೆ ಮೀಸಲಾಗಿದ್ದ ಸಾಹಿತ್ಯವನ್ನು ಜನಸಾಮಾನ್ಯರ ಬಳಿಗೆ ತರುತ್ತಾರೆ. ಜನಸಾಮಾನ್ಯರ ಬದುಕಿನ ಹಲವಾರು ಗಂಭೀರ ಸಮಸ್ಯೆಗಳನ್ನು ತಮ್ಮ ಕಾದಂಬರಿಗಳಲ್ಲಿ ಚಿತ್ರಿಸುತ್ತಾರೆ. ಉದಾ: ವೇಶ್ಯಾಸಮಸ್ಯೆ, ಲೈಂಗಿಕ ಸಮಸ್ಯೆ ಮುಂತಾದವು. ಹೊಸ ಆಚಾರ-ವಿಚಾರಗಳು ವಿಷಮ-ವಿವಾಹಪದ್ದತಿಗಳು, ಪಾಶ್ಚಾತ್ಯ ಸಾಹಿತ್ಯದ ವಿಚಾರಗಳು ಇವರ ಕಾದಂಬರಿಗೆ ಹೊಸ ವಸ್ತುವನ್ನು ಒದಗಿಸುತ್ತವೆ. ಓದುಗರ ಹಾಗು ಲೇಖಕರ ಸಂಖ್ಯೆಯನ್ನು ಅಪರಿಮಿತವಾಗಿ ಹೆಚ್ಚಿಸುತ್ತಾರೆ. (ಸುಮಾರು ನೂರಕ್ಕು ಹೆಚ್ಚು ಕಾದಂಬರಿಗಳನ್ನು ರಚಿಸಿದ್ದಾರೆ.) ಅವರ ಕಾದಂಬರಿಗಳ ವಸ್ತು ವೈವಿಧ್ಯಮಯವಾದುದು. ಸಮಾಜದ ಸುತ್ತಮುತ್ತಲ ಸಮಕಾಲೀನ ಜೀವನದ ಹಲವು ಮುಖಗಳನ್ನು ತಮ್ಮ ಕೃತಿಗಳಿಗೆ ವಸ್ತುವಾಗಿ ಸ್ವೀಕರಿಸಿದ್ದಾರೆ. "ಪಾನನಿರೋಧ, ಅವಿಭಕ್ತಕುಟುಂಬ,  ಆಧುನಿಕ ವಿದ್ಯಾಭ್ಯಾಸ, ಸ್ತ್ರೀ ಸ್ವಾತಂತ್ರ್ಯ, ದಾಂಪತ್ಯವಿಚ್ಛೇದನ, ಜೈಲುಗಳ ದುರವಸ್ಥೆ, ಆಸ್ಪತ್ರೆಗಳ ಅವ್ಯವಸ್ಥೆ, ಬಣ್ಣದ ಚಿಟ್ಟೆಯಾದ ಹೆಣ್ಣು, ತಾಯಿಯಾದ ಹೆಣ್ಣು, ಸೂಳೆಯಾದ ಹೆಣ್ಣು, ಹಾದಿ ತಪ್ಪಿದ ಶ್ರೀಮಂತ ಗೃಹಿಣಿ, ಪ್ರೇಮದ ಪವಿತ್ರತೆ, ಕಾಮದ ಕೊಳೆ,

ಕಿಚ್ಚು, ರಾಜಕೀಯದ ಸಮಸ್ಯೆಗಳು, ಗ್ರಾಮಜೀವನದ ಅವನತಿ, ಜಾತಿಯತೆಯ ಭೂತ–ಒಂದೇ? ಎರಡೇ? ಇವೆಲ್ಲವನ್ನು ಕುರಿತು ಅ.ನ.ಕೃ ವಿಚಾರ ಮಾಡಿದ್ದಾರೆ."[೩೫] ಈ ರೀತಿ ವಸ್ತು ವೈವಿಧ್ಯವಾಗಿದ್ದರೂ ಪಾತ್ರಗಳಲ್ಲಿ ಮಾತ್ರ ವೈವಿಧ್ಯತೆ ಇರುವುದಿಲ್ಲ. ಕುತೂಹಲಕರವಾದ ರೀತಿಯಲ್ಲಿ ಕಥೆ ಹೇಳುವ ಕಲೆ ಸಿದ್ಧಿಸಿದ್ದರೂ ಚರ್ವಿತಚರ್ವಣದಿಂದಾಗಿ ಓದುಗ ವರ್ಗವನ್ನು ನಿರಾಶೆಗೊಳಿಸುತ್ತಾರೆ. ಬಹುಶಃ ಪ್ರಗತಿಶೀಲರ ದುರ್ಬಲತೆ ಕಂಡುಬರುವುದು ಇಲ್ಲೇ. ಈ ಹಿನ್ನೆಲೆಯಲ್ಲಿ ಅ.ನ.ಕೃ ಅವರ ಕೃತಿಗಳು ಯಶಸ್ಸು ಗಳಿಸುವುದಕ್ಕಿಂತ ಹೆಚ್ಚಾಗಿ ಸಂಖ್ಯೆಯಲ್ಲಿ ಹೆಚ್ಚಾದವಷ್ಟೆ.

ಅ.ನ.ಕೃ ಅವರ ಕಾದಂಬರಿಗಳ ಪ್ರಧಾನ ವಸ್ತು ಹೆಣ್ಣಿನ ಬದುಕನ್ನು ಕುರಿತದ್ದೆ. ಪುರುಷನ ಬದುಕಿನ ದುರಂತಕ್ಕೆ ಕಾರಣವಾಗುವ ಹೆಣ್ಣೇ ಅ.ನ.ಕೃ ಕಾದಂಬರಿಗಳ ಕೇಂದ್ರ ಪಾತ್ರ.

'ಜೀವನಯಾತ್ರೆ' ಕಾದಂಬರಿಯಲ್ಲಿ ವೇಶ್ಯಾಸಮಸ್ಯೆ ಸ್ಥೂಲ ಚಿತ್ರಣ ಬರುತ್ತದೆ. ಅ.ನ.ಕೃ ತಮ್ಮ ಆರಂಭದ ಕೃತಿಯಲ್ಲಿಯೇ ಸಮಾಜದ ದುಷ್ಟಪದ್ಧತಿಯೊಂದರ ಕಡೆ ಗಮನ ಸೆಳೆಯುವ ಪ್ರಯತ್ನ ಮಾಡಿದ್ದಾರೆ. ಈ ಕಾದಂಬರಿಯಲ್ಲಿ ಬರುವ ಮೂವರು ಸ್ತ್ರೀಯರು ಶೋಷಣೆಗೆ ಒಳಗಾದವರು ರಾಮಕ್ಕ, ಲಲಿತಮ್ಮ, ಸುಂದರಿ ಮೂವರ ಬದುಕು ಅಸಹನೀಯಗೊಳ್ಳುವುದಕ್ಕೆ ಪುರುಷ ಸಮಾಜವೇ ಕಾರಣವೆಂಬುದನ್ನು ಈ ಕೃತಿ ನಿರೂಪಿಸುತ್ತದೆ. ಮುಂದುವರಿದು ಗಂಡು ಹೆಣ್ಣುಗಳ ಅನೈತಿಕ ಸಂಬಂಧದ ಸುತ್ತ ಉಳಿದ ಪಾತ್ರಗಳು ಕೆಲಸಮಾಡುತ್ತವೆ. ಆದರೂ ಉಳಿದ ಪಾತ್ರಗಳು ಗೌಣವೆನಿಸಿಕೊಳ್ಳುತ್ತವೆ. ಕಾದಂಬರಿಕಾರರ ಉದ್ದೇಶವೇನೆಂದರೆ ಹೆಣ್ಣಿನ ಬದುಕಿನ ಅಧಃಪತನಕ್ಕೆ ಗಂಡೇ ಕಾರಣವೆಂಬುದು. ಈ ಕಾದಂಬರಿ ಅ.ನ.ಕೃ. ಬರೆದ ಮೊದಲ ಕಾದಂಬರಿ, ಅಷ್ಟೇನು ಹೆಸರು ತಂದು ಕೊಡಲಿಲ್ಲ. ಅನಂತರ ೧೯೩೪ರಲ್ಲಿ ರಚಿತವಾದ 'ಉದಯರಾಗ' ೧೯೩೮ ರಲ್ಲಿ ರಚಿತವಾದ 'ಸಂಧ್ಯರಾಗ' ಇವುಗಳು ಅ.ನ.ಕೃ. ಅವರಿಗೆ ಉತ್ತಮ ಕಾದಂಬರಿಕಾರರೆಂಬ ಹೆಸರನ್ನು ತಂದುಕೊಟ್ಟವು.

ಕಲಾಸಾಧಕನಾದ ವ್ಯಕ್ತಿಯ ಏಳು ಬೀಳುಗಳನ್ನು ಚಿತ್ರಿಸುವುದೇ ಉದಯರಾಗ ಕಾದಂಬರಿಯ ವಸ್ತು. ಆರಂಭದ ಕೃತಿ 'ಜೀವನಯಾತ್ರೆ'ಯಲ್ಲಿ ಕಂಡು ಬರುವ ವೇಶ್ಯೆಯರ ಚಿತ್ರಣ ಇಲ್ಲಿ ಕಂಡುಬರುತ್ತದೆ. ಆದರೆ ಅದು ಸಮಸ್ಯೆಯಾಗಿಯೂ ಚಿತ್ರಿಸಲ್ಪಡುವುದಿಲ್ಲ. ಕಲಾಕಾರನೊಬ್ಬ ವೇಶ್ಯೆಯರ ಸಹವಾಸ ಮಾಡಿದಾಗ ಹೇಗೆ ತನ್ನ ಬದುಕಿನ ಗುರಿಯನ್ನು ಮರೆಯುತ್ತಾನೆಂಬುದರ ಕಡೆ ಗಮನ ಹರಿಸಲಾಗಿದೆ. ಕಾದಂಬರಿಯಲ್ಲಿ ಬರುವ ಮಾಣಿಯ ಬದುಕನ್ನು ೧. ಕಲಾಸಕ್ತನಾದ ಮಾಣಿ ಕಲಾಭ್ಯಾಸಿಯಾಗುವುದು. ೨. ಕಲಾವಿದ ಮಾಣಿ ಭೋಗಲಾಲಸೆಯಲ್ಲಿ ಮಗ್ನನಾಗಿ ಕಲೆಯನ್ನು ಕೀಳುಮಟ್ಟಕ್ಕಿಳಿಸುವುದು. ೩. ಕೊನೆಯಲ್ಲಿ ಕಲೆ ಮತ್ತು ಬದುಕು ಎರಡರಲ್ಲಿಯೂ ವ್ಯವಸ್ಥಿತ ಜೀವನವನ್ನು ಸಾಧಿಸುವುದು–ಹೀಗೆ ಮೂರು ಹಂತದಲ್ಲಿ ಗುರುತಿಸಲಾಗಿದೆ. ಇದರಿಂದ ಆತನೊಬ್ಬ ಉತ್ತಮ ಕಲಾವಿದನೆಂಬುದು ತಿಳಿದು ಬರುತ್ತದೆ. ೧೯೩೮ ರಲ್ಲಿ 'ಸಂಧ್ಯಾರಾಗ'

ಕಾದಂಬರಿ ರಚಿಸುತ್ತಾರೆ. 'ಉದಯರಾಗ' ಕಾದಂಬರಿ ಕಲಾಸಕ್ತನ ಬದುಕನ್ನು ನಿರೂಪಿಸಿದರೆ ಸಂಧ್ಯಾರಾಗ ಸಂಗೀತಗಾರನ ಬದುಕಿನ ಏರಿಳಿತಗಳನ್ನು ಚಿತ್ರಿಸುತ್ತದೆ.

ಕಲೋಪಾಸಕನಾದ ಲಕ್ಷ್ಮಣ 'ಸಂಧ್ಯರಾಗ' ಕಾದಂಬರಿಯ ಕೇಂದ್ರ ವ್ಯಕ್ತಿ. ಕಾದಂಬರಿಯಲ್ಲಿನ ಬಹುತೇಕ ಪಾತ್ರಗಳು ಸಾತ್ವಿಕ ಪಾತ್ರಗಳೇ. ಜೊತೆಗೆ ಆದರ್ಶ ಪಾತ್ರಗಳೂ ಕೂಡ. ರಾಮಚಂದ್ರ ಮತ್ತು ಆತನ ಹೆಂಡತಿಯನ್ನುಳಿದು ಮಿಕ್ಕೆಲ್ಲಾ ಪಾತ್ರಗಳು ಆದರ್ಶದ ಉತ್ತುಂಗಕ್ಕೆ ಏರುತ್ತವೆ. ತನ್ನ ಸವತಿಯನ್ನು ತಂಗಿಯಂತೆ ಕಾಣುವ ಮೀನಾಕ್ಷಮ್ಮ ತನ್ನ ಅಣ್ಣನಿಂದಾಗಿ ಮಡದಿ ಮಡಿದ ಸಂದರ್ಭದಲ್ಲಿ ಪರಿಸ್ಥಿತಿಯ ಅರಿವಿದ್ದೂ ಚಕಾರವೆತ್ತದೆ ಸುಮ್ಮನಿರುವ ಲಕ್ಷ್ಮಣ, ಮನೆಯಲ್ಲಿರುವ ಶಾಮಣ್ಣರಾಯರ ಸ್ನೇಹಿತರೂ, ವೆಂಕಟೇಶ ಎಲ್ಲರೂ ಸಾತ್ವಿಕ ಪಾತ್ರಗಳೆ. ರಾಮಚಂದ್ರನೊಬ್ಬನಿಂದ ಕುಟುಂಬದಲ್ಲಿ ಸಾಮರಸ್ಯ ಹಾಳಾಗುತ್ತದೆ. ಲಕ್ಷ್ಮಣನ ಜೀವನ ಚಿತ್ರಣದಲ್ಲಿ ಅತಿಯಾದ ಭಾವುಕ ಅಂಶಗಳು ವ್ಯಕ್ತವಾಗಿವೆ. ಆದರ್ಶ ಮತ್ತು ಭಾವುಕತೆ ಎರಡೂ ಮೇಳೈಸಿರುವ ಕೃತಿ ಇದಾಗಿದೆ. ರಾಮಚಂದ್ರ ಮತ್ತು ಲಕ್ಷ್ಮಣನ ಜೀವನ ವೈದೃಶ್ಯದ ಚಿತ್ರಣದಿಂದಾಗಿ ಒಬ್ಬ ತಿರಸ್ಕಾರಕ್ಕೆ ಯೋಗ್ಯನಾದರೆ ಮತ್ತೊಬ್ಬ ಗೌರವಕ್ಕೆ ಅರ್ಹನಾಗುತ್ತಾನೆ. ವಕೀಲಿವೃತ್ತಿ ಕೈಗೊಳ್ಳುವ ರಾಮಚಂದ್ರ ತನ್ನ ದುಷ್ಟತನ ಮತ್ತು ದುಡುಕು ಸ್ವಭಾವದಿಂದ ಕುಟುಂಬದಲ್ಲಿ ಶಾಂತಿ ಸಮಾಧಾನಗಳನ್ನು ಹಾಳುಮಾಡುತ್ತಾನೆ. ಹುಟ್ಟು ಕಲಾವಿದನಾದ ಲಕ್ಷ್ಮಣ ತಂದೆ,ತಾಯಿ, ಪತ್ನಿಯರ ಸಾವಿನಿಂದ ವೈರಾಗ್ಯ ತಾಳಿ ಕುಟುಂಬವನ್ನೆ ತೊರೆದು ಹೊರಟು ಹೋಗುತ್ತಾನೆ. ಅನಂತರ ಸಂಗೀತದಲ್ಲಿ ಸಿದ್ಧಿಯನ್ನು ಪಡೆಯುತ್ತಾನೆ. ಇದರಿಂದ ಧನ ಮತ್ತು ಕೀರ್ತಿ ಎರಡನ್ನು ಸಂಪಾದಿಸುತ್ತಾನೆ. ೧೭೪ ಪುಟಗಳ ಕಾದಂಬರಿಯಲ್ಲಿ ಎರಡು ತಲೆಮಾರುಗಳ ಜೀವನದ ಚಿತ್ರಣ ಮೂಡಿ ಬರುತ್ತದೆ. ಇಲ್ಲಿ ಕಲಾವಿದನೊಬ್ಬನ ಬದುಕನ್ನು ಚಿತ್ರಿಸಿವುದು ಕಾದಂಬರಿಕಾರರ ಉದ್ದೇಶವಾದರೂ ಲಕ್ಷ್ಮಣ ಒಬ್ಬ ಕಲಾವಿದನಾಗಿ ಚಿತ್ರಣಗೊಳ್ಳುವುದಕ್ಕಿಂತ ಒಬ್ಬ ವ್ಯಕ್ತಿಯಾಗಿಯೇ ರೂಪುಗೊಳ್ಳುತ್ತಾನೆ. ಆತನ ಸಾಧನೆ ಕಲಾಭ್ಯಾಸ, ಕಲಾಸಿದ್ಧಿಗಳತ್ತ ಕಾದಂಬರಿ ಗಮನಹರಿಸುವುದಿಲ್ಲ. ಮಾಸ್ತಿಯವರ ಸುಬ್ಬಣ್ಣನಂತವರಾಗಲಿ, ತ.ರಾ.ಸು ಅವರ 'ಹಂಸಗೀತೆ'ಯ ಭೈರವಿ ವೆಂಕಟಸುಬ್ಬಯ್ಯನ ಸಾಧನೆಯಾಗಲಿ ಲಕ್ಷ್ಮಣನಿಗೆ ನಿಲುಕಲಾರವು. ಆತನೊಬ್ಬ ಹುಟ್ಟು ಕಲಾವಿದನೆಂದು ಹೇಳುವುದರ ಮೂಲಕ ಆತನ ಎಲ್ಲಾ ಸಂಗೀತ ಕಛೇರಿಗಳು ಯಶಸ್ವಿಯಾಗುವುದರ ಮೂಲಕ ಕಲಾವಿದನ ಚಿತ್ರಣವನ್ನು ಕೊಡುವುದರಿಂದ ಅದು ವ್ಯಕ್ತಿಯ ಚಿತ್ರಣವೇ ಆಗಿಬಿಡುತ್ತದೆ. ಆದರೂ ಸಂವಿಧಾನ ಮತ್ತು ಪಾತ್ರ ನಿರ್ಮಿತಿಯಲ್ಲಿ 'ಸಂಧ್ಯಾರಾಗ' ಹೊಸಹಾದಿಯನ್ನು ಹಾಕಿಕೊಟ್ಟಿತ್ತು. ಚುರುಕಾದ ಕ್ರಿಯೆ, ಹಿತಮಿತವಾದ ಸಂಭಾಷಣೆ, ಸುಲಲಿತವಾದ ಶೈಲಿಯಿಂದ ಕಾದಂಬರಿ ಆಕರ್ಷಕವೆನಿಸುತ್ತದೆ. ಪ್ರಗತಿಶೀಲ ಚಳವಳಿಯ ಅನಂತರ ಬಂದ ಅ.ನ.ಕೃ. ಅವರ ಎಲ್ಲಾ ಕಾದಂಬರಿಗಳಿಗಿಂತ 'ಸಂಧ್ಯಾರಾಗ' ಅವರ ಮಿತಿಗಳ ನಡುವೆಯು ಯಶಸ್ವಿ ಕೃತಿಯಾಗಿದೆ.

ಕೃಷ್ಣರಾಯರ ಕಾದಂಬರಿಗಳ ಕೇಂದ್ರ ವ್ಯಕ್ತಿ ಹೆಣ್ಣು. ಇದಕ್ಕೆ ಕಾರಣ ಕೂಡ ಇದೆ. ಹೆಣ್ಣು ಜೀವನದ ಕೇಂದ್ರಶಕ್ತಿ "ಮಾನವನ ಜೀವನದಲ್ಲಿ ಆಕೆಯೇ ಪ್ರಬಲಶಕ್ತಿ ಅವನ ಭಾವಜೀವನದಲ್ಲಿ ಆಕೆಯೇ ಪ್ರಥಮ ಪ್ರಭಾತ ಪ್ರಕೃತಿ. ಜೀವನದಲ್ಲಿ ಹೆಣ್ಣಿಗೆ ಈ ಸ್ಥಾನವಿದೆ" ಎನ್ನುವ ತ.ರಾ.ಸು ಅವರ ಮಾತು ಅ.ನ.ಕೃ. ಅವರ ಕಾದಂಬರಿಗಳಲ್ಲಿ ಸ್ತ್ರೀ ಕುರಿತಾದದ್ದಕ್ಕೆ ಪೂರಕವಾಗುತ್ತದೆ. ಈ ರೀತಿ ಅ.ನ.ಕೃ. ಅವರು ಸುಮಾರು ನೂರಕ್ಕೂ ಹೆಚ್ಚಿನ ಕಾದಂಬರಿಗಳನ್ನು ರಚಿಸಿದರು. ಇವಿಷ್ಟೇ ಅಲ್ಲದೆ ನಾಟಕಗಳು, ಸಣ್ಣ ಕಥೆಗಳು, ವಿಮರ್ಶೆ ಕೃತಿಗಳು, ಅನುವಾದಗಳನ್ನು ಕೂಡ ಮಾಡಿದ್ದಾರೆ.

ಪ್ರಗತಿಶೀಲ ಚಳವಳಿ ಆರಂಭವಾಗುವುದಕ್ಕಿಂತಲೂ ಮುನ್ನವೆ ಕೃತಿ ರಚಿಸಿದ ಅ.ನ.ಕೃ. ಅವರ ಕಾದಂಬರಿಗಳು ನವೋದಯದ ಜಾಡಿನಲ್ಲೆ ಸಾಗುತ್ತವೆ. ಇವರ ಕಾದಂಬರಿಗಳಲ್ಲಿ ಸ್ವಲ್ಪ ಮಟ್ಟಿನ ವೇಶ್ಯಾಸಮಸ್ಯೆಗಳನ್ನು ಬಿಟ್ಟರೆ ಅಂತಹ ವಿಶಿಷ್ಟವಾದ ಸ್ತ್ರೀಯರ ಬಗೆಗಿನ ಅಂಶಗಳೇನು ಕಂಡು ಬರುವುದಿಲ್ಲ. ಒಂದು ವೈಶಿಷ್ಟ್ಯವೆಂದರೆ ಸುಧೀರ್ಘವಾದ ಮುನ್ನುಡಿಗಳನ್ನು ಬರೆದದ್ದು. ಪ್ರಗತಿಶೀಲ ಚಳವಳಿ ಆರಂಭವಾಗುವುದಕ್ಕಿಂತ ಮುಂಚೆ ಬರೆದ ಮೂರು ಕಾದಂಬರಿಗಳು 'ಉದಯರಾಗ', 'ಸಂಧ್ಯಾರಾಗ', 'ಜೀವನಯಾತ್ರೆ' ಪ್ರಗತಿಶೀಲಚಳವಳಿ ಆರಂಭವಾದ ಮೇಲೆ ಬಂದ ಕೃತಿಗಳಿಗಿಂತ ಭಿನ್ನವಾಗಿ ನಿಲ್ಲುತ್ತವೆ. ೧೯೪೪ ರ ವೇಳೆಗೆ ಪ್ರಗತಿಶೀಲ ನಾಯಕರೆನಿಸಿಕೊಂಡ ಅ.ನ.ಕೃ. ತಮ್ಮ ಕೃತಿಗಳ ಮೂಲಕ ಹೊಸ ದೃಷ್ಟಿಕೋನ, ಹೊಸ ಧೋರಣೆಯನ್ನು, ಹೊಸ ಕ್ರಮವೊಂದನ್ನು ಜಾರಿಗೊಳಿಸುವ ಪ್ರಯತ್ನ ಮಾಡಿದರು. ಆಶಯ ಉತ್ತಮವಾಗಿದ್ದರೂ ಕಾದಂಬರಿಗಳಲ್ಲಿ ಯಶಸ್ವಿಯಾಗಲಿಲ್ಲ.

**ಬಸವರಾಜ ಕಟ್ಟೀಮನಿ :**

ಪ್ರಗತಿಶೀಲ ಚಳವಳಿಯಲ್ಲಿ ಪ್ರಧಾನವಾಗಿ ಕಥೆಗಾರರಾಗಿ ಮತ್ತು ಕಾದಂಬರಿಕಾರರಾಗಿ ಗುರುತಿಸಲ್ಪಟ್ಟ ಕಟ್ಟೀಮನಿಯವರು ಅಪ್ಪಟ ಸಮಾಜವಾದಿ ಮತ್ತು ಕ್ರಾಂತಿಕಾರಿಯೂ ಹೌದು. ಕೃಶಿಕರಾಗಿದ್ದ ಕಟ್ಟೀಮನಿಯವರು ಚಿಕ್ಕವಯಸ್ಸಿನಲ್ಲೇ ಓದುವ ಮತ್ತು ಬರೆಯುವ ಕ್ರಿಯೆಗೆ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಅ.ನ.ಕೃ. ಅವರ ಪ್ರಗತಿಶೀಲ ಚಳವಳಿಯಲ್ಲಿ ಭಾಗಿಗಳಾಗುತ್ತಾರೆ. ಪ್ರಗತಿಶೀಲ ಧೋರಣೆಯನ್ನು ಒಪ್ಪಿಕೊಂಡ ಕಟ್ಟೀಮನಿಯವರು ಅ.ನ.ಕೃ. ಬಣದಿಂದ ದೂರ ಸರಿಯುತ್ತಾರೆ. ಪ್ರಗತಿಶೀಲರಿಂದ ದೂರಸರಿದರೂ ಪ್ರಗತಿಶೀಲ ಧೋರಣೆಗೆ ಬದ್ದರಾಗಿ ಕೃತಿ ರಚಿಸುತ್ತಾರೆ.

ಪ್ರತಿಯೊಬ್ಬ ಬರಹಗಾರನಿಗೂ ಅವನದೇ ಆದ ದೃಷ್ಟಿಕೋನ ವೈಯಕ್ತಿಕ ನಿಲುವುಗಳಿರುತ್ತವೆ. ಒಂದೇ ಪರಂಪರೆ ಮತ್ತು ಒಂದೇ ಅಶಯದಡಿಯಲ್ಲಿ ಬಂದ ಲೇಖಕರಲ್ಲಿಯೂ ವಿಭಿನ್ನ ದೃಷ್ಟಿಕೋನಗಳು ಕೆಲಸ ಮಾಡುತ್ತವೆ. ಇಂತಹ ನಿಲುವುಗಳು ಅವರ ಕೃತಿಯ ವ್ಯಾಪ್ತಿಯನ್ನು ನಿಯಂತ್ರಿಸುತ್ತವೆ. ಸಾಮೂಹಿಕ ಸಮಸ್ಯೆಗಳು ಸ್ವಾನುಭವವಾದಾಗ ಬರವಣಿಗೆಯ ಮೇಲೆ ದಟ್ಟವಾದ ಪ್ರಭಾವವನ್ನು ಬೀರುತ್ತವೆ. ವೈಯಕ್ತಿಕವಾಗಿ ಕೆಲವು

ಸಮಸ್ಯೆಗಳನ್ನೆದುರಿಸಿದ ಕಟ್ಟೀಮನಿಯವರನ್ನು ಸಮಾಜದಲ್ಲಿರುವ ಶೋಷಣೆ, ಅನ್ಯಾಯ, ದಬ್ಬಾಳಿಕೆಗಳು ರೊಚ್ಚಿಗೆಬ್ಬಿಸುತ್ತಿದ್ದವು. ಅವರ ಆರಂಭದ ಕಾದಂಬರಿಗಳಲ್ಲಿ ಇಂತಹ ಸಮಸ್ಯೆಗಳನ್ನು ಸ್ಪಷ್ಟವಾಗಿ ಗುರುತಿಸಬಹುದಾಗಿದೆ.

ಕಟ್ಟೀಮನಿಯವರ ಕೃತಿಗಳಲ್ಲಿ ಸ್ತ್ರೀಸಮಸ್ಯೆಗಳು: ವೇಶ್ಯಾವೃತ್ತಿ, ಬಡತನ, ಭಿಕ್ಷಾಟನೆ, ಸ್ತ್ರೀಸ್ವಾತಂತ್ರ್ಯ ಅಲ್ಲದೆ ಸ್ವಾತಂತ್ರ್ಯಚಳವಳಿ, ಪೊಲೀಸ್ ದೌರ್ಜನ್ಯ ಮುಂತಾದ ಸಮಸ್ಯೆಗಳನ್ನು ಕಾದಂಬರಿಗಳಲ್ಲಿ ಕಾಣಬಹುದು. ಈ ಹಿನ್ನೆಲೆಯಲ್ಲಿ ಕಟ್ಟೀಮನಿಯವರ ಕೆಲವು ಕಾದಂಬರಿಗಳನ್ನು ಮಾತ್ರ ವಿಶ್ಲೇಷಿಸಿದ್ದೇನೆ.

ಅ.ನ.ಕೃ. ಅವರ ಕಾದಂಬರಿಗಳಂತೆಯೇ ವೇಶ್ಯಾ ಸಮಸ್ಯೆಯನ್ನು ಚಿತ್ರಿಸುವ ಕಾದಂಬರಿ **'ಬೀದಿಯಲ್ಲಿ ಬಿದ್ದವಳು'** (೧೯೫೩). ವೇಶ್ಯೆಸಮಸ್ಯೆ ಚಿತ್ರಿಸಲು ಅ.ನ.ಕೃ. ಮೂರು ಕಾದಂಬರಿಗಳನ್ನು ಬರೆದರೆ ಕಟ್ಟೀಮನಿಯವರು ಒಂದೇ ಒಂದು ಕಾದಂಬರಿಯನ್ನು ರಚಿಸುತ್ತಾರೆ. ಅದರಲ್ಲಿಯೇ ಸಮಗ್ರ ಮುಖಗಳನ್ನು ಚಿತ್ರಿಸಿದ್ದಾರೆ. ಕೇವಲ ೫೦ ಪುಟಗಳಲ್ಲಿ ವೇಶ್ಯಾಜೀವನದ ಪರಿಚಯ ಮಾಡಿಸಿದ್ದಾರೆ. ಅವರ ಕೊಳಕುತನ, ಅಶ್ಲೀಲ ನಡತೆ, ರೋಗರುಜಿನಗಳು ಇತ್ಯಾದಿ ವಿವರಗಳನ್ನು ಸಂಕ್ಷಿಪ್ತವಾಗಿ ಸ್ಪಷ್ಟವಾಗಿ ನಿರೂಪಿಸಿದ್ದಾರೆ. ಭಾವೋದ್ವೇಗದ ಬರವಣಿಗೆಯಾದರೂ ನಿರೂಪಣೆಯಲ್ಲಿ ಸಂಯಮವಿದೆ. ಇಂತಹ ಸಮಸ್ಯೆಗಳನೊಳಗೊಂಡ ಅ.ನ.ಕೃ. ಅವರ ಕಾದಂಬರಿಗಳನ್ನು 'ಬೀದಿಯಲ್ಲಿ ಬಿದ್ದವಳು' ಕಾದಂಬರಿಯೊಂದಿಗೆ ಹೋಲಿಸಿದಾಗ ಸಂಯಮ ಅಸಂಯಮಗಳ ಅಂತರ ಸ್ಪಷ್ಟವಾಗುತ್ತದೆ.

ತನ್ನ ಹೊಲವನ್ನು ಉಳಿಸಿಕೊಳ್ಳುವ ಆಸೆಯಿಂದ ಭೀಮಣ್ಣ ತನ್ನ ಮನೆಯಲ್ಲಿದ್ದ ಮುದುಕಿಯನ್ನು ಕೊಲೆ ಮಾಡುವುದಲ್ಲದೆ, ಕುಡಿಯುವುದನ್ನು ಕಲಿಯುತ್ತಾನೆ , ಮುದುಕಿಯ ಒಡವೆಗಳನ್ನು ಮಾರಿ ಹಣವನ್ನು ದುರುಪಯೋಗ ಮಾಡಿಕೊಳ್ಳುತ್ತಾನೆ. ಇದು ಈ ಕಾದಂಬರಿಯ ಮಣ್ಣಿನ ಸಮಸ್ಯೆ. ಇಲ್ಲಿ ಬರುವ ಬಾಲಿ ತನ್ನ ಪತಿಯನ್ನು ತೊರೆದು ತಾಯಿ ಮನೆ ಸೇರಿದರೂ ಯಮುನೆಯಂತೆ ಸೋಲೊಪ್ಪಿಕೊಳ್ಳುವುದಿಲ್ಲ. ಯಮುನೆ ಸಾಯಲು ಹೊರಟರೆ ಬಾಲಿ ಬದುಕುವುದಕ್ಕಾಗಿ, ಹೊರಡುತ್ತಾಳೆ. ಯಮುನೆ ವೇಶ್ಯಾವೃತ್ತಿಗೆ ಅಂಟಿಕೊಂಡರೆ ಬಾಲಿ ಅದನ್ನು ತಿರಸ್ಕರಿಸುತ್ತಾಳೆ . ಇವೆರಡು ಕಾದಂಬರಿಗಳನ್ನು ಹೋಲಿಸಿ ನೋಡಿದಾಗ ವಾಸ್ತವಪ್ರಜ್ಞೆ **'ಬೀದಿಯಲ್ಲಿ ಬಿದ್ದವಳು'** ಕಾದಂಬರಿಗಿಂತ, 'ಮಣ್ಣು ಮತ್ತು ಹೆಣ್ಣು', ಕಾದಂಬರಿಯಲ್ಲಿ ನಿಚ್ಚಳವಾಗಿ ಮೂಡಿಬಂದಿದೆ. ಈ ಕಾರಣದಿಂದ ಅದೊಂದು ವಾಸ್ತವಿಕ ಧೋರಣೆಯ ಉತ್ತಮ ಕೃತಿಯೆಂದು ಹೇಳಬಹುದು.

ವೇಶ್ಯಾಸಮಸ್ಯೆಯನ್ನೊಳಗೊಂಡು ಭಾವ ಪರವಶತೆಗೆ ತುಯ್ಯುವ ಮತ್ತೊಂದು ಕಾದಂಬರಿಯೆಂದರೆ **'ಖಾನಾವಳಿಯ ನೀಲಾ'**. ಭಿಕ್ಷುಕರ ಧಾರುಣವಾದ ಬದುಕಿಗೆ ಸಮಾಜವೆ ಕಾರಣ ಎಂದು ಚಿತ್ರಿಸುವಲ್ಲಿ ಲೇಖಕರ ರೋಷ ವ್ಯಕ್ತವಾಗುತ್ತದೆ . ಆರಂಭದಲ್ಲಿ ಕಾಣುವ ರೋಷ

ಕಾದಂಬರಿ ಬೆಳೆದಂತೆ ಸ್ವಲ್ಪಮಟ್ಟಿಗೆ ತಣ್ಣಗಾಗುತ್ತದೆ. ವೇಶ್ಯಾಸಮಸ್ಯೆ ಚಿತ್ರಿಸುವಲ್ಲಿ ಅತಿರೇಕವಾಗಲಿ ಆಶ್ಲೀಲ ನಿರೂಪಣೆಯಾಗಲಿ ಎಲ್ಲಿಯೂ ಕಂಡುಬರುವುದಿಲ್ಲ . ಹಾಗಾಗಿಯೇ ಅ.ನ.ಕೃ. ಅವರ ಇಂತಹ ಸಮಸ್ಯೆಗಳನ್ನೊಳಗೊಂಡ ಕಾದಂಬರಿಗಳಿಗಿಂತ ಕಟ್ಟೀಮನಿಯವರ ಕಾದಂಬರಿಗಳು ಭಿನ್ನವಾಗಿ ನಿಲ್ಲುತ್ತವೆ. ಕಟ್ಟೀಮನಿಯವರ ಮತ್ತೊಂದು ಕಾದಂಬರಿ 'ಮೋಹದ ಬಲೆಯಲ್ಲಿ (೧೯೫೧),ಕಾದಂಬರಿಯ ಶೀರ್ಷಿಕೆಯೇ ಕೃತಿಯ ಅಶಯವನ್ನು ತಿಳಿಸುತ್ತದೆ ಮೋಹದ ಸುಳಿಯಲ್ಲಿ ಸಿಲುಕಿದ ಅರಸು ಮತ್ತು ಶಿವಸ್ವಾಮಿಯವರ ಪ್ರೇಮ ಕಥೆಯೊಂದಿಗೆ ಉಳಿದ ಪಾತ್ರಗಳ ಕಾಮಾಸಕ್ತಿಯು ಇಲ್ಲಿ ವ್ಯಕ್ತವಾಗುತ್ತದೆ.

ಮಠದ ಅವ್ಯವಹಾರವನ್ನು ನಿರೂಪಿಸುವ ಮತ್ತೊಂದು ಕೃತಿಯಂದರೆ **'ಜರತಾರಿ ಜಗದ್ಗುರು'** (೧೯೫೨). ಹೆಸರಿಗೆ ಜಗದ್ಗುರು ಆತನ ನಡೆತೆ ಮಾತ್ರ ತದ್ವಿರುದ್ಧವಾದುದು ಎಂಬುದನ್ನು ಈ ಕಾದಂಬರಿ ನಿರೂಪಿಸುತ್ತದೆ. 

ಕಟ್ಟೀಮನಿಯವರ ಮತ್ತೊಂದು ಕಾದಂಬರಿ 'ಜ್ವಾಲಾಮುಖಿಯ ಮೇಲೆ'. ರಾಜಕೀಯ ಚಿತ್ರಣ ಕಾದಂಬರಿಯಲ್ಲಿದ್ದರೂ ಸಾಮಜಿಕ ಜೀವನವೇ ಕಾದಂಬರಿಯ ವಸ್ತು. ಕಾದಂಬರಿಕಾರರೇ ಮುನ್ನುಡಿಯಲ್ಲಿ ಈ ರೀತಿ ಹೇಳಿದ್ದಾರೆ. "ರಾಜಕೀಯದಲ್ಲಿ ಜೀವಿಗಳಾದ ಮಾನವರ ಸಾಮಾಜಿಕ ಜೀವನವೇ ಈ ಕಾದಂಬರಿಯ ವಸ್ತು. ಇಲ್ಲಿ ಕಾಂಗ್ರೇಸಿಗರುಂಟು, ಬಂಡವಾಳಗಾರರುಂಟು, ಸೋಶಲಿಷ್ಟರುಂಟು, ಕಮ್ಯುನಿಸ್ಟರುಂಟು, ಇವರಲ್ಲಿ ಯಾರ ಬಗೆಗೂ ಕಾದಂಬರಿಕಾರರಿಗೆ ಪಕ್ಷಪಾತ ದೃಷ್ಟಿಯಿಲ್ಲ." ೩೬ ಇಲ್ಲಿ ವಿವಾಹ ಸಂಭಂಧದ ಚಿತ್ರಣವೂ ಉಂಟು. ಹಿಗೆ ಕದಂಬರಿಯಲ್ಲಿ ಜೀವನದ ಸಹಸ್ರರು ಮುಖಗಳನ್ನು ಚಿತ್ರಿಸಿದ್ದಾರೆ.

ಪ್ರಗತಿಶೀಲ ಚಳವಳಿ ಸಂಧರ್ಭದಲ್ಲಿ ಸ್ವಾತಂತ್ರ್ಯ ಚಳವಳಿ ಉಚ್ಛಾಯ ಸ್ತಿತಿಯನ್ನು ತಲುಪಿತ್ತು. ಸ್ವಾತಂತ್ರಕ್ಕಾಗಿ ತಮ್ಮ ಪ್ರಾಣವನ್ನು ಬಲಿಕೊಟ್ಟಂತಹ,ಅನೇಕ ತ್ಯಾಗಮಯಿಗಳನ್ನು ಕಟ್ಟೀಮನಿಯವರು ತಮ್ಮ ಕತೆ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ . ತಮ್ಮ ಅಜ್ಞಾತವಾಸಿ ಕತೆಯಲ್ಲಿ ಭೂಗತನಾಗಿದ್ದುಕೊಂಡೇ ಬ್ರಿಟಿಷರ (ಪೋಲೀಸರ) ವಿರುದ್ದ ಹೋರಾಡುವ ಬಸವರಾಜ ಮತ್ತು ಪೋಲೀಸರ ದೌರ್ಜನ್ಯಕ್ಕೆ ಬಲಿಯಾಗುವ ನಾಗಮ್ಮ.ಆ ಏಟು, ಆ ಅತ್ಯಾಚಾರ ಆ ರಕ್ತಪಾತ ಅದನ್ನು ತಾಳಲಾರದೆ ಆ ತರುಣಿ ವಿಲಿವಿಲಿ ಒದ್ದಾಡಿಕೊಂಡಿದ್ದಳು. ಯಾವುದರಿಂದಲು ಆ ಪೊಲೀಸರ ಕಲ್ಲು ಹೃದಯ ಕರಗಲಿಲ್ಲ. ದಿನವು ಹೊಡೆದದ್ದೆ ಹೊಡೆದದ್ದು! ಅತ್ಯಾಚಾರ ನಡೆಸಿದ್ದೇ ನಡೆಸಿದ್ದು!

ಇನ್ನು ತೃಪ್ತಿಯಾಗಿರಲಿಲ್ಲ ಅವರಿಗೆ. ಮತ್ತೆ ಬರುತಿದ್ದರು".(ಹೊಸಗನ್ನಡ ಕಥಾಸಾಹಿತ್ಯ_೧ ಪುಟ.೧೭).ಈ ರೀತಿ ಕಟ್ಟೀಮನಿಯವರು ಪೊಲೀಸರ ದೌರ್ಜನ್ಯವನ್ನು ಅಜ್ಞಾತವಾಸಿ ಕತೆಯಲ್ಲಿ ಚಿತ್ರಿಸಿದ್ದಾರೆ. ಹಾಗೆಯೇ ಸ್ವಾತಂತ್ರ್ಯ ಚಳವಳಿಯನ್ನು ಕುರಿತಾದಂತಹ ತುಂಬಾ ಪ್ರಮುಖವಾದ

ಕಾದಂಬರಿಯೆಂದರೆ **'ಮಾಡಿಮಡಿದವರು'**. ಈ ಕಾದಂಬರಿಯಲ್ಲಿ ಸ್ವಾತಂತ್ರ್ಯಕ್ಕಾಗಿ ಮಡಿದ ಅನೇಕ ಮಹನೀಯರ ಬದುಕಿನ ದಾರುಣ ಚಿತ್ರಣವಿದೆ.

**ನಿರಂಜನ :**

ಪ್ರಗತಿಶೀಲ ಪಂಥದವರಿಂದ ದೂರ ಸರಿದರೂ ನಿರಂಜನ ಅವರು ಪ್ರಗತಿಶೀಲ ಧೋರಣೆಗೆ ಬದ್ಧರಾಗಿಯೇ ಕೃತಿ ರಚಿಸತೊಡಗಿದರು. ಅಪ್ಪಟ ಕಮ್ಯುನಿಸ್ಟರಾಗಿದ್ದ ನಿರಂಜನ ಅವರಲ್ಲಿ ಶಿಸ್ತು, ಸಂಯಮ, ನೇರ ನಡೆನುಡಿಗಳು ಮನೆಮಾಡಿದ್ದವು. ದಾರಿತಪ್ಪುತ್ತಿದ್ದ ಪ್ರಗತಿಶೀಲತೆಯನ್ನು ನಿರಂಜನ ಅವರು ಉಳಿಸುವ ಪ್ರಯತ್ನ ಮಾಡಿದರು. ವೈಚಾರಿಕತೆಯ ಭಿನ್ನತೆಯಿಂದಾಗಿ ಅ.ನ.ಕೃ. ಅವರಿಂದ ದೂರಸರಿದ ನಿರಂಜನರು ಸಾಮಾಜಿಕ ಶೋಷಣೆಯನ್ನು ತಮ್ಮ ಕೃತಿಗಳ ವಸ್ತುವಾಗಿಸಿಕೊಂಡರು. ಅ.ನ.ಕೃ., ಕಟ್ಟೀಮನಿಯವರ ಬರಹದಲ್ಲಿ ಕಂಡು ಬರುವಂತಹ ರೋಚಕತೆಯಾಗಲಿ, ರೊಚ್ಚು, ಕೆಚ್ಚು, ಆಕ್ರೋಶಗಳಾಗಲಿ, ಪ್ರಚೋದಕ ಅಂಶಗಳಾಗಲಿ ನಿರಂಜನ ಅವರಲ್ಲಿ ಕಂಡುಬರುವುದಿಲ್ಲ. ವೈಚಾರಿಕತೆಯನ್ನು ರೂಢಿಸಿಕೊಂಡು ಮಾನವೀಯ ಮೌಲ್ಯಗಳನ್ನೊಳಗೊಂಡ ಅಂಶಗಳನ್ನು ಇವರ ಕಾದಂಬರಿಗಳಲ್ಲಿ ಕಾಣುತ್ತೇವೆ. ಉಳಿದ ಕಾದಂಬರಿಕಾರರಲ್ಲಿ ಕಾಣದ ಸಂಯಮವನ್ನು ಇವರಲ್ಲಿ ಕಾಣುತ್ತೇವೆ. ಇವರ ಕಾದಂಬರಿಗಳು ಪ್ರಗತಿಶೀಲ ಲೇಖಕರಲ್ಲಿಯೆ ವಿಶಿಷ್ಟ ಸ್ಥಾನವನ್ನು ಪಡೆಯುತ್ತವೆ. ಹೀಗಿದ್ದೂ ಕೂಡ ಆರಂಭದ ಇವರ ಕಾದಂಬರಿಗಳು 'ರಂಗಮ್ಮನ ವಠಾರ', 'ಕಲ್ಯಾಣಸ್ವಾಮಿ' ಮುಂತಾದವು ವಿಮರ್ಶಕರ ಟೀಕೆಗಳಿಗೆ ಗುರಿಯಾದವು. ಆದರೂ ಕಾದಂಬರಿ ರಚನೆಯಲ್ಲಿ ತಮ್ಮ ಸ್ವಂತಿಕೆ ಹಾಗೂ ಗಟ್ಟಿತನವನ್ನು ಅಭಿವ್ಯಕ್ತಪಡಿಸಿದವರಲ್ಲಿ ನಿರಂಜನರ ಹೆಸರು ಮೊದಲನೆ ಸ್ಥಾನದಲ್ಲಿ ನಿಲ್ಲುತ್ತದೆ. ಪ್ರಗತಿಶೀಲ ಲೇಖಕರಲ್ಲಿಯೇ ಒಂದು ವಿಶಿಷ್ಟವಾದ ಶಿಸ್ತುಬದ್ಧತೆಯನ್ನು ರೂಢಿಸಿಕೊಂಡವರಲ್ಲಿ ನಿರಂಜನ ಅವರು ಪ್ರಮುಖರಾಗುತ್ತಾರೆ.

೧೯೭೦ರಲ್ಲಿ ನಿರಂಜನರು "ಪ್ರಗತಿಪಂಥ" ವನ್ನು ಸ್ಥಾಪಿಸಿ ಅದರ ಸೂತ್ರದಾರರಾದರು. ಇದರ ಫಲದಿಂದ ಹಲವಾರು ಲೇಖಕರು ಪ್ರಗತಿಶೀಲ ಸಾಹಿತ್ಯದತ್ತ ತಮ್ಮ ಗಮನವನ್ನು ಹರಿಸಿದರು. ದಾವಣಗೆರೆಯಲ್ಲಿ ನಡೆದ ಮೊದಲ ಪ್ರಗತಿ ಪಂಥದ ಸಮ್ಮೇಳನದ ಅಧ್ಯಕ್ಷೀಯ ಭಾಷಣದಲ್ಲಿ "ಅನಾಗರಿಕ ಮಾನವ ತನ್ನ ರಟ್ಟೆಯ ಕೊರಡಿನ ಅಧಿಕ ಬಲವನ್ನು ಪ್ರಯೋಗಿಸಿ ಇನ್ನೊಬ್ಬ ಬೇಟೆಯಾಡಿದುದನ್ನು ಕಸಿದುಕೊಂಡಾಗಿನಿಂದ ಬೆಳೆದು ಬಂದಿರುವ ದುಷ್ಟತನಕ್ಕೆ ನಾವು ಜಯ ಹಾರೈಸೋಣವೇ? ಮಾನವೀಯತೆಯ ಅರ್ಚಕರು ಮಾಡುವ ಕೆಲಸ ಇದಲ್ಲ. ಹಾಗಾದರೆ ತಟಸ್ಥರಾಗೋಣವೇ? ಸಜ್ಜನರ ತಾಟಸ್ಥ್ಯ ದುರ್ಜನರ ಬಂಡವಾಳವಾಗಬಹುದು. ಈ ಎರಡು ಸರಿಯಲ್ಲವೆಂದಾದರೆ ಉಳಿದಿರುವ ದಾರಿಯೊಂದೆ ಅಂಗಾತ ಸ್ಥಿತಿಯಿಂದ ಎದ್ದುನಿಲ್ಲಲು ಚಡಪಡಿಸುತ್ತಿರುವ ಮಾನವನಿಗೆ ಆಸರೆಯಾಗುವುದು. ಅವನ ಊರುಗೋಲಾಗುವುದು"[೩೭] ಎಂಬುದಾಗಿ ಹೇಳಿದ್ದಾರೆ. ನಿರಂಜನರು ಪ್ರಗತಿಶೀಲ ಚಳವಳಿಯ ಕಾವು ಇಳಿದು ಮೂರು

ದಶಕಗಳೇ ಕಳೆದಿದ್ದರೂ ನಾಸ್ತಿಕವಾದಿಯಾಗಿ ಉಳಿದಿದ್ದಲ್ಲದೆ ಮಾನವೀಯ ಸಂಬಂಧಗಳಿಗೆ ಬೆಲೆಕೊಡುವ ಪ್ರಗತಿಶೀಲ ಧೋರಣೆಯನ್ನು ಉಳಿಸಿಕೊಂಡು ಬಂದರು ಎಂಬುದಕ್ಕೆ ಅವರ ಪ್ರಗತಿಪಂಥ ಒಂದು ಉದಾಹರಣೆಯಾಗಿದೆ.

೧೯೫೪ರಲ್ಲಿ ರಚಿತವಾದ 'ಬನಶಂಕರಿ' ಬಾಲವಿಧವೆಯ ಬದುಕಿನ ದಾರುಣ ಚಿತ್ರಣವನ್ನು ನೀಡುವ ಸಾಮಾಜಿಕ ಕಾದಂಬರಿ. ವೈದಿಕ ಮನೆತನದ ಹೆಣ್ಣಿನ ಬದುಕು ಹಾಗೂ ವೈಧಿಕ ಸಮಾಜದ ಚಿತ್ರಣ ಎರಡು ಕೃತಿಯಲ್ಲಿ ಮೇಳೈಸಿವೆ. ಕಾದಂಬರಿಯನ್ನು ಓದಿದಾಗ ವೈದಿಕ ಸಮಾಜದ ದಟ್ಟ ಅನುಭವ ನಮಗಾಗುತ್ತದೆ. ವೈದಿಕ ಬದುಕಿನ ವಾಸ್ತವ ಚಿತ್ರಣವನ್ನು ನಿಚ್ಚಳವಾಗಿ ಮೂಡಿಸಿದ್ದಾರೆ. ಭಾವುಕ ಸನ್ನಿವೇಶವಾಗಲಿ, ಅಸಂಯಮ ನಡತೆಯಾಗಲಿ ಕಾದಂಬರಿಯಲ್ಲಿಯೂ ತಲೆ ಹಾಕುವುದಿಲ್ಲ.

ಸಮಾಜದಲ್ಲಿ ವೈದಿಕ ಮತದ ವಿಧವೆಯೊಬ್ಬಳು ಎದುರಿಸುವ ಸಮಸ್ಯೆಗಳು, ಕಂಡುಕೊಳ್ಳುವ ಪರಿಹಾರಗಳು, ಮಕ್ಕಳನ್ನು ಬೆಳೆಸಲು ಪಡುವ ಕಷ್ಟ, ತಾತ್ತ್ವಿಕ ವ್ಯಕ್ತಿಗಳ ಸಹಕಾರ ಮುಂತಾದ ಅಂಶಗಳನ್ನು ಬನಶಂಕರಿ ಕಾದಂಬರಿಯಲ್ಲಿ ಚಿತ್ರಿಸಲಾಗಿದೆ. ಬನಶಂಕರಿ ಎದುರಿಸುವ ಸಮಸ್ಯೆಗಳಿಗೆ ಆಕೆಯೊಬ್ಬಳೇ ಕಾರಣಳಲ್ಲ ಸಮಾಜವು ಕಾರಣವಾಗುತ್ತದೆ. ಈ ಕಾದಂಬರಿಯಲ್ಲಿ ಸಮಾಜ ಮತ್ತು ಅಲ್ಲಿನ ಪರಿಸರ ಮುಖ್ಯವಾಗುತ್ತದೆ. ಕಾದಂಬರಿಕಾರರು ಆಯ್ದುಕೊಳ್ಳುವ ಸಮಯ ಪಾತ್ರಗಳ ಮೇಲೂ ಪ್ರಭಾವ ಬೀರಿ ನೈಜ ಘಟನೆಯೊಂದು ನಮ್ಮ ಕಣ್ಮುಂದೆ ನಡೆದು ಹೋದಂತೆ ಭಾಸವಾಗುತ್ತದೆ. ಪ್ರಗತಿಶೀಲ ಸಂದರ್ಭದಲ್ಲಿ ಮೂಡಿಬಂದ ಕಾದಂಬರಿಗಳಲ್ಲಿ ಇದೊಂದು ಉತ್ತಮ ಕಾದಂಬರಿ.

೧೯೫೪ ರಲ್ಲಿ ರಚಿತವಾದ 'ರಂಗಮ್ಮನ ವಠಾರ' ಸಾಮಾಜಿಕ ಸಮಸ್ಯೆಯನ್ನು ಚಿತ್ರಿಸುವ ಕಾದಂಬರಿ. ಒಂದು ವಠಾರದ ಹದಿನಾಲ್ಕು ಕುಟುಂಬಗಳ ಆಗುಹೋಗುಗಳನ್ನು, ಹುಟ್ಟು ಮತ್ತು ಸಾವಿನ ನಡುವಿನ ಬದುಕನ್ನು ಚಿತ್ರಿಸುತ್ತದೆ. ಆದರೆ ಈ ಕಾದಂಬರಿಯ ಮಿತಿ ಎಂದರೆ ಒಂದು ವಠಾರದ ಆಂತರಿಕ ಬದುಕಿಗೆ ಮಹತ್ವ ನೀಡುತ್ತದೆಯೇ ಹೊರತು ಬಾಹ್ಯಪ್ರಪಂಚದ ಚಿತ್ರಣ ಬರುವುದೇ ಇಲ್ಲ.

೧೯೫೫ ರಲ್ಲಿ ರಚಿತವಾದ 'ಚಿರಸ್ಮರಣೆ' ಹೋರಾಟದ ಕಥೆಯೊಂದನ್ನು ನಿರೂಪಿಸುತ್ತದೆ. ವರ್ಗ ಸಮಾಜದ ಹೋರಾಟವನ್ನು ಚಿತ್ರಿಸುವ ಕಾದಂಬರಿ. ಕೇರಳದ ಕೈಯ್ಯೂರಿನಲ್ಲಿ ನಡೆಯುವ ಬಂಡವಾಳಶಾಹಿ, ಸಾಮ್ರಾಜ್ಯಶಾಹಿ, ಜಮೀನ್ದಾರಿ ಪಟ್ಟಭದ್ರ ಹಿತಾಸಕ್ತಿಗಳ ವಿರುದ್ಧ ದನಿಎತ್ತುವ ರೈತರ ಸಂಘಟನಾತ್ಮಕ ಪ್ರತಿಭಟನೆಯೆ ಕಾದಂಬರಿಯ ಕೇಂದ್ರಬಿಂದು.

ಜಮೀನ್ದಾರರ ದಬ್ಬಾಳಿಕೆ, ರೈತರ ಶೋಷಣೆ, ಶ್ರಮಜೀವಿಗಳ ಹೋರಾಟದ ಹಿಂದೆ ಕಮ್ಯುನಿಸ್ಟ್ ಧೋರಣೆ ಇದೆ. ಕೈಯ್ಯೂರಿನಲ್ಲಿ ನಡೆಯುವ ಹೋರಾಟಕ್ಕೆ ಭದ್ರವಾದ ಅಡಿಪಾಯ ಹಾಕುವವರು ಮಾಸ್ತರು. ಕಾದಂಬರಿಯಲ್ಲಿ ಘಟಿಸುವ ಪ್ರತಿಯೊಂದು ಘಟನೆಯ ಹಿಂದೆ

ಮಾಸ್ತರು ನಿಂತಿದ್ದಾರೆ. ಅಪ್ಪುವಿನಂತಹ ಧೈರ್ಯಶಾಲಿ, ಚಿರುಕುಂಡನಂತಹ ಮುಂದಾಲೋಚನೆಯುಳ್ಳ ಯುವಕರಲ್ಲಿ ಕ್ರಾಂತಿಕಾರಕ ಮನೋಭಾವವನ್ನು ಬಿತ್ತುವವರೇ ಮಾಸ್ತರು. ಕಾದಂಬರಿಯಲ್ಲಿ ಆರಂಭದಿಂದ ಅಂತ್ಯದವರೆಗೆ ನಂಬಿಯಾರನನ್ನು ಬಿಟ್ಟರೆ ಉಳಿದವರೆಲ್ಲರೂ ಗೌರವ ಆದರಗಳನ್ನು ತೋರುವವರೇ. ಅಪ್ಪು ಮತ್ತು ಚಿರಕುಂಡ ತೇಜಸ್ವಿನಿ ನದಿಯನ್ನು ದಾಟುವಾಗ ತೋರಿಸುವ ಧೈರ್ಯ, ಬುದ್ಧಿವಂತಿಕೆಯೆ ಅವರ ಮುಂದಿನ ಕಾರ್ಯಕ್ರಮಗಳಿಗೆ ಅಡಿಪಾಯವಾಗುತ್ತದೆ. ಪಂಡಿತರ ಭಾಷಣ ಮತ್ತು ಮಾಸ್ತರ ಸಲಹೆಗಳಿಂದ ಇಡೀ ವ್ಯವಸ್ಥೆಯನ್ನು ಅರ್ಥ ಮಾಡಿಕೊಂಡ ಅಪ್ಪು ಮತ್ತು ಚಿರಕುಂಡ ಶೋಷಣೆ ವಿರುದ್ಧ ಪತ್ರಿಕೆ ಓದುವ ನೆಪದಲ್ಲಿ ಸಂಘಟನೆ ಮಾಡುತ್ತಾರೆ. ಜಮೀನ್ದಾರರ ಶೋಷಣೆ ಹಾಗೂ ಆಡಳಿತಶಾಹಿಯನ್ನು ವಿರೋಧಿಸುವ ಇವರು ಒಂದುಕಡೆ, ಪತ್ರಿಕೆ ಓದುವುದರ ಮೂಲಕ ರೈತರಲ್ಲಿ ತಿಳುವಳಿಕೆ ಹೆಚ್ಚುವುದಲ್ಲದೆ ರೈತ ಸಂಘಟನೆಯಿಂದ ಬಂಡವಾಳಶಾಹಿ ವ್ಯವಸ್ಥೆಯನ್ನು ನಿರ್ನಾಮ ಮಾಡಬಹುದೆಂದು ಮನಗಾಣಿಸುತ್ತಾರೆ.

ರೈತ ಹೋರಾಟವನ್ನು ಹತ್ತಿಕ್ಕುವುದಕ್ಕೆ ಪ್ರಯತ್ನಿಸುವ ನಾಯರ್ ಮತ್ತು ಆಡಳಿತ ವ್ಯವಸ್ಥೆ ಆದರೂ ಗುಪ್ತವಾಗಿ ಮಾಸ್ತರು, ಅಪ್ಪು ಮತ್ತು ಚಿರಕುಂಡ ಕೈಯ್ಯೂರ ರೈತ ಸಮ್ಮೇಳನದ ಸಿದ್ಧತೆ ಮಾಡುವುದು, ಕ್ರಾಂತಿಕಾರಿ ಯುವಕ ಅಬೂಬಕ್ಕರ್ ನಡೆಸುವ ಪ್ರಭಾತಫೇರಿ, ಅದರಲ್ಲಿನ ಉಳುವವನೇ ಹೊಲದೊಡೆಯ, ಕ್ರಾಂತಿಗೆ ಜಯವಾಗಲಿ, ಜಮೀನ್ದಾರಿ ಪದ್ಧತಿ ಅಳಿಯಲಿ, ಸಾಮ್ರಾಜ್ಯಶಾಹಿ ನಾಶವಾಗಲಿ ಎಂಬ ಘೋಷಣೆಗಳು ನಂಬಿಯಾರರನ್ನು ಇನ್ನೂ ಕೆರಳಿಸುತ್ತವೆ. ಅನಂತರ ಸೆರೆಮನೆವಾಸ ಕೊನೆಗೂ ನಾಲ್ಕು ಜನರಿಗೆ ಮರಣದಂಡನೆ ಶಿಕ್ಷೆ ಉಳಿದವರಿಗೆ ಎರಡು ವರ್ಷಗಳ ಕಠಿಣಶಿಕ್ಷೆ (ಸಜೆ). ಉಳಿದ ೨೨ ಜನರಿಗೆ ಬಿಡುಗಡೆಯ ತೀರ್ಪು ಹೊರಬಿದ್ದಾಗ ಯಾರಿಗೂ ಸಂತಸವಿಲ್ಲ. ಬಂಡವಾಳಶಾಹಿ ಹಾಗೂ ಸಾಮ್ರಾಜ್ಯಶಾಹಿಯ ವಿರುದ್ಧ ಹೋರಾಡಿದ ಕೈಯ್ಯೂರು ಕೊನೆಗೂ ನಾಲ್ಕು ಜನರನ್ನು ಬಲಿಕೊಡಬೇಕಾಗುತ್ತದೆ. ಹುತ್ಮಾತರಿಗಾಗಿ ವೀರಗಾಥೆಯನ್ನು ಹಾಡಿ ತನ್ನ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.

ಪ್ರಗತಿಶೀಲ ಪರಂಪರೆ ಕ್ಷೀಣಿಸಿದ ಸಂದರ್ಭದಲ್ಲಿ ಮೂಡಿಬಂದ ಕೃತಿಯಾದರೂ ಪ್ರಗತಿಶೀಲ ಪರಂಪರೆಯಲ್ಲಿಯೇ ಗುರುತಿಸಲಾಗುವ ಒಂದು ಅತ್ಯುತ್ತಮ ಕೃತಿಯಾಗಿದೆ. ನಿರಂಜನ ಅವರು ವರ್ಗ ಸಂಘರ್ಷದ ಹಿನ್ನಲೆಯ ಹಾಗೂ ಸಾಮಾಜಿಕ ಕಾದಂಬರಿಗಳ ಜೊತೆಗೆ ಐತಿಹಾಸಿಕ ಕಾದಂಬರಿ 'ಮೃತ್ಯುಂಜಯ'ವನ್ನು ರಚಿಸಿದರು. 'ಚಿರಸ್ಮರಣ'ಯನ್ನು ಬಿಟ್ಟರೆ ಅತ್ಯುತ್ತಮ ಕಾದಂಬರಿ 'ಮೃತ್ಯುಂಜಯ'.

ನಿರಂಜನ ಅವರು ಕಾದಂಬರಿಕಾರಷ್ಟೇ ಅಲ್ಲದೆ ಕಥೆಗಾರರು, ನಾಟಕಕಾರರು, ಬಾನುಲಿ ನಾಟಕಗಳು, ರೂಪಕಗಳು, ಬಿಡಿಬರಹಗಳು, ವೈಚಾರಿಕ ಲೇಖನಗಳು, ಭಾಷಣಗಳು, ಪತ್ರಿಕೆಗಳಲ್ಲಿ

ಅಂಕಣಗಳು, ವ್ಯಕ್ತಿಚಿತ್ರಣಗಳನ್ನು ರಚಿಸಿದ್ದಲ್ಲದೆ, ಸಂದರ್ಶನಗಳನ್ನು ಮಾಡಿದ್ದಾರೆ ಹಾಗೂ ರಾಜ್ಯಕೀಯ ಕ್ಷೇತ್ರಕ್ಕೂ ಕಾಲಿಟ್ಟಂತಹವರು.

ನಿರಂಜನ ಅವರ ಕಾದಂಬರಿಗಳು ಪ್ರಗತಿಶೀಲ ಚಳವಳಿ ಕ್ಷೀಣಿಸಿದ ಸಂದರ್ಭದಲ್ಲಿ ಬಂದಂತಹವುಗಳೆ. ತಮ್ಮ ಅನುಭವ ಮತ್ತು ಧೋರಣೆಗಳನ್ನು ಕೃತಿಯಲ್ಲಿ ತರುವಾಗ ಬರವಣಿಗೆ ಎಲ್ಲಿಯೂ ತೂಕ ತಪ್ಪುವುದಿಲ್ಲ. ಪಾತ್ರಗಳು ಸಂಯಮ ಕಳೆದುಕೊಳ್ಳುವುದಿಲ್ಲ. ಅಶ್ಲೀಲತೆ ಪ್ರಯೋಗ ತುಂಬಾ ಕಡಿಮೆ. ಅ.ನ.ಕೃ. ಅವರಲ್ಲಿನ ಅಸಹಜ ಬೆಳವಣಿಗೆಯಾಗಲಿ, ಕಟ್ಟೀಮನಿಯವರಲ್ಲಿ ಕಾಣುವ ರೊಚ್ಚುಗಳಾಗಲಿ ನಿರಂಜನ ಅವರ ಕಾದಂಬರಿಗಳಲ್ಲಿ ಕಾಣುವುದಿಲ್ಲ. ಶಕ್ತಿಯುತವಾದ ಸಂಭಾಷಣೆ, ಕುತೂಹಲಕಾರವು ಸಹಜ ಸುಂದರವೂ ಆದ ನಿರೂಪಣೆ ಮತ್ತು ಪ್ರಧಾನವಾಗಿ ನೆಲದಿಂದ ಮೇಲೆದ್ದಂತಹ ಸದೃಢ ಪಾತ್ರ ಸೃಷ್ಟಿ ಅವರ ವೈಶಿಷ್ಟ್ಯಗಳಾಗಿವೆ ಎನ್ನುವ ಹೆಚ್.ಜೆ.ಲಕ್ಕಪ್ಪಗೌಡರ ಮಾತು ನಿರಂಜನ ಅವರ ಕಾದಂಬರಿಗಳು ಶಕ್ತಿಯುತವಾದವುಗಳೆಂಬುದನ್ನು ತಿಳಿಸುತ್ತದೆ. ಈ ಕಾರಣದಿಂದಲೆ ನಿರಂಜನ ಅವರು ಪ್ರಗತಿಶೀಲ ಸಂದರ್ಭದಲ್ಲಿ ಉಳಿದ ಕಾದಂಬರಿಕಾರರಿಗಿಂತ ವಿಶಿಷ್ಟವಾಗಿ ಕಂಡು ಬರುತ್ತಾರೆ.

ಪ್ರಗತಿಶೀಲ ಸಂದರ್ಭದಲ್ಲಿ ಕಾದಂಬರಿಕಾರರೇ ಹೆಚ್ಚಾಗಿ ಬರವಣಿಗೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ನನ್ನ ಸಂಶೋಧನೆಯ ಮಿತಿಯಲ್ಲಿ ಪ್ರಗತಿಶೀಲ ಸಂದರ್ಭದ ಕೆಲ ಪ್ರಮುಖ ಕಾದಂಬರಿಕಾರರ ಬಗ್ಗೆ ಇಲ್ಲಿ ಅವಲೋಕಿಸಿದ್ದೇನೆ. ಇವರಷ್ಟೆ ಅಲ್ಲದೆ ಚದುರಂಗ, ಶ್ರೀರಂಗ, ದೇವುಡು ನರಸಿಂಹಶಾಸ್ತ್ರಿ, ಅರ್ಚಕ ವೆಂಕಟೇಶ್, ಕುಮಾರ ವೆಂಕಣ್ಣ, ಅನುಪಮ ನಿರಂಜನ ಮುಂತಾದ ಕಾದಂಬರಿಕಾರರು ಪ್ರಗತಿಶೀಲ ಚಳವಳಿ ಸಂದರ್ಭದಲ್ಲಿ ಬರವಣಿಗೆಯಲ್ಲಿ ತೊಡಗುತ್ತಾರೆ.

### ೨.೯.ಪ್ರಗತಿಶೀಲ ಲೇಖಕರಲ್ಲಿ ತ.ರಾ.ಸು ಅವರ ವೈಶಿಷ್ಟ್ಯ :

ಸಾಹಿತ್ಯ ಕ್ಷೇತ್ರದಲ್ಲಿ ಬರಹಗಾರನೊಬ್ಬನ ಸ್ಥಾನ ಮತ್ತು ಅವನ ವೈಶಿಷ್ಟ್ಯತೆಯನ್ನು ಗುರುತಿಸುವ ಸಂದರ್ಭದಲ್ಲಿ ಆಯಾ ಕಾಲದ ಸಮಕಾಲೀನ ಲೇಖಕರ ಕೃತಿಗಳನ್ನು ಅವಲೋಕಿಸುವುದು ತುಂಬಾ ಔಚಿತ್ಯಪೂರ್ಣವಾದುದು. ಲೇಖಕನೊಬ್ಬನ ಸ್ಥಾನ ಮಾನವನ್ನು ಇಂತಿಷ್ಟೇ ಎಂದು ಗೆರೆ ಎಳೆದು ಹೇಳುವುದು ತುಂಬಾ ಕಷ್ಟದ ವಿಷಯವೇ. ಆತನಿಗೂ ಅವನದೇ ಆದ ಇತಿ, ಮಿತಿಗಳು, ಬಲ–ದೌರ್ಬಲ್ಯಗಳಿರುತ್ತವೆ. ಬರಹಗಾರನ ಪರಿಶ್ರಮ ಮತ್ತು ಆಳವಾದ ಜೀವನಾನುಭವ ಕೃತಿಯಲ್ಲಿ ಒಡಮೂಡಿದಾಗ ಆ ಕೃತಿಯ ಸತ್ಯ ಮತ್ತು ಲೇಖಕನ ಸ್ಥಾನವನ್ನು ನಿರ್ದೇಶಿಸಲು ಸಾಧ್ಯವಾಗುತ್ತದೆ. ಇಂತಹ ಹೊತ್ತಲ್ಲಿ ಸಮಕಾಲೀನ ಲೇಖಕರು ಮತ್ತು ಅವರ ಕೃತಿಗಳ ಬಗ್ಗೆ ತಿಳಿದು ಕೊಳ್ಳುವುದೂ ಸೂಕ್ತವೆನಿಸುತ್ತದೆ.

ಪ್ರಗತಿಶೀಲ ಸಂದರ್ಭದಲ್ಲಿ ಓದುವ ವರ್ಗವನ್ನು ಹುಟ್ಟುಹಾಕಿದವರೆಂದರೆ ಅ.ನ.ಕೃ. ಸಾಹಿತ್ಯವನ್ನು ಜನಸಾಮಾನ್ಯರ ಹತ್ತಿರಕ್ಕೆ ತಂದ ಕೀರ್ತಿ ಇವರಿಗೆ ಸಲ್ಲುತ್ತದೆ. ಸಾಮಾನ್ಯ ಜನರ ಬದುಕಿನ ಸಮಸ್ಯೆಗಳಾದ ವೇಶ್ಯಾಸಮಸ್ಯೆ, ಲೈಂಗಿಕಸಮಸ್ಯೆ, ಅಲ್ಲದೆ ಅವರ ಕಷ್ಟ ಕಾರ್ಪಣ್ಯಗಳನ್ನು ತಮ್ಮ ಕಾದಂಬರಿಗಳಿಗೆ ವಸ್ತುವಾಗಿಸಿಕೊಂಡರು. ವಿಷಮವಿವಾಹ, ಜಾತೀಯತೆ, ಅನ್ಯಾಯ, ಹೊಸ ಹೊಸ ಆಚಾರ, ವಿಚಾರಗಳು, ಪಾಶ್ಚಾತ್ಯ ಸಂಸ್ಕೃತಿ ಪ್ರಭಾವ ಮುಂತಾದವುಗಳೆಲ್ಲಾ ಇವರ ಕಾದಂಬರಿಗಳಿಗೆ ವಸ್ತುವಾದವು. ಅ.ನ.ಕೃ ಕಾದಂಬರಿಗಳ ಕೇಂದ್ರ ಪಾತ್ರಗಳೆಲ್ಲ ಸ್ತ್ರೀಯರೆ. ಮಾನವ ಬದುಕಿನ ದುರಂತಗಳಿಗೆ ಕಾರಣವಾಗುವ ಹೆಣ್ಣು ಇವರ ಹೆಚ್ಚಿನ ಕಾದಂಬರಿಗಳಲ್ಲಿ ಕಂಡುಬರುತ್ತಾಳೆ. ಇಂತಹ ಕಥೆಗಳಲ್ಲಿ ಅತಿಯಾದ ರಂಜನೆ ಕಂಡುಬರುತ್ತದೆ.

ಪ್ರಗತಿಶೀಲ ಚಳವಳಿ ಆರಂಭವಾಗುವುದಕ್ಕೆ ಮುಂಚೆಯೇ ಸಾಹಿತ್ಯ ರಚನೆಯಲ್ಲಿ ತೊಡಗಿಸಿಕೊಂಡಿದ್ದ ಅ.ನ.ಕೃ ೧೯೪೩ರಲ್ಲಿ 'ಜೀವನಯಾತ್ರೆ' ಮೊದಲ ಕಾದಂಬರಿಯನ್ನು ಪ್ರಕಟಿಸುತ್ತಾರೆ. "ಮೂಗಿಗಿಂತ ಮೂಗುತಿ ಭಾರ" ಎನ್ನುವ ಹಾಗೆ ಕೃತಿಯ ಮುನ್ನುಡಿಯೇ ತುಂಬಾ ವಿಚಾರ ಪ್ರಚೋದಕವಾಗಿದೆ. ನಮ್ಮ ಸಂಸ್ಕೃತಿಯ ಅನೇಕ ಮಜಲುಗಳನ್ನು ಪಾಶ್ಚಾತ್ಯ ಸಂಸ್ಕೃತಿಗೆ ಹೋಲಿಸುತ್ತಾ ಭಾರತೀಯ ಸಮಾಜದ ಸ್ತ್ರೀಯರ ಸ್ಥಾನಮಾನವನ್ನು, ಅವಳು ಎದುರಿಸುವ ಸಮಸ್ಯೆಗಳನ್ನು ಅವಳಿಗೆ ಸಲ್ಲಬೇಕಾದ ಘನತೆ, ಗೌರವಗಳನ್ನು ಮುನ್ನುಡಿಯಲ್ಲಿಯೇ ವಿಶ್ಲೇಷಿಸುತ್ತದೆ. ಈ ರೀತಿ ತುಂಬಾ ಧೀರ್ಘವಾದ ಮುನ್ನುಡಿ ಕಾದಂಬರಿಯ ವಸ್ತು ಮತ್ತು ಧ್ಯೇಯವನ್ನು ಕುರಿತು ನಿರೂಪಿಸುತ್ತದೆ. ನವೋದಯದವರಲ್ಲಿ ಕಾಣದ ಇಂತಹ ಕ್ರಮ ಅ.ನ.ಕೃ ಅವರಿಂದ ಆರಂಭವಾಗುತ್ತದೆ. ಬಾಲ್ಯವಿವಾಹದ ಬಗ್ಗೆ ಕಟುಟೀಕೆ, ವೇಶ್ಯಾಸಮಸ್ಯೆಯ ಬಗೆಗೂ ಮುನ್ನುಡಿಯಲ್ಲಿ ಚರ್ಚಿಸಲಾಗಿದೆ.

ಕಾದಂಬರಿಯಲ್ಲಿ ಬಹಳ ಮುಖ್ಯವಾಗಿ ಕಂಡುಬರುವುದು ವೇಶ್ಯಾಸಮಸ್ಯೆಯ ಸ್ಥೂಲವಾದ ಚಿತ್ರಣ. ಇಲ್ಲಿನ ಮೂವರು ಸ್ತ್ರೀಯರು ಶೋಷಣೆಗೊಳಗಾದವರೇ. ಮೂವರೂ ಸ್ತ್ರೀಯರು ಶೋಷಣೆಗೊಳಗಾಗಲು ಪುರುಷ ಸಮಾಜವೇ ಕಾರಣ. ಗಣೇಶರಾಯ ಮತ್ತು ರಂಗಸ್ವಾಮಿ ತಮ್ಮ ಸುಖಕ್ಕಾಗಿ ಹೆಣ್ಣನ್ನು ಶೋಷಿಸಿದರೆ, ರಾಮಕೃಷ್ಣಯ್ಯ ತನ್ನ ಹೆಂಡತಿಯನ್ನೇ ಇನ್ನೊಬ್ಬರಿಗೆ ಒಪ್ಪಿಸುವ ನಿರ್ಭಾವುಕ ವ್ಯಕ್ತಿ. ಗಂಡು ಹೆಣ್ಣಿನ ಅನೈತಿಕ ಸಂಬಂಧವನ್ನು ಚಿತ್ರಿಸುವ, ಗಂಡಿನಿಂದಲೇ ಹೆಣ್ಣಿನ ಬದುಕು ಅಧಃಪತನದ ಹಾದಿಯನ್ನು ಹಿಡಿಯುತ್ತದೆಂಬುದನ್ನು ನಿರೂಪಿಸುವುದೇ ಕಾದಂಬರಿಕಾರರ ಉದ್ದೇಶ.

ಅ.ನ.ಕೃ ಅವರು 'ಜೀವನಯಾತ್ರೆ' ಅನಂತರ ರಚಿಸಿದ 'ಸಂಧ್ಯಾರಾಗ' ಮತ್ತು 'ಉದಯರಾಗ' ಕಾದಂಬರಿಗಳು ಉತ್ತಮ ಕಾದಂಬರಿಕಾರರೆಂಬ ಹೆಸರನ್ನು ತಂದು ಕೊಟ್ಟವು. ಕಲಾಸಾಧಕನಾದ ವ್ಯಕ್ತಿಯೋರ್ವನ ಏಳು ಬೀಳುಗಳನ್ನು ಕುರಿತದ್ದು 'ಉದಯರಾಗ'. ಅಲ್ಲದೆ ಇಲ್ಲಿಯೂ ವೇಶ್ಯಾ ಚಿತ್ರಣ ಕಂಡು ಬರುತ್ತದೆ. ಆದರೆ ಅದು ಸಮಸ್ಯೆಯಾಗಿ ಚಿತ್ರಣಗೊಳ್ಳುವುದಿಲ್ಲ.

ಕಲಾವಿದನೊಬ್ಬ ವೇಶ್ಯೆ ಸಹವಾಸ ಮಾಡಿದಾಗ ಯಾವ ರೀತಿ ತನ್ನ ಕರ್ತವ್ಯದಿಂದ ಹಿಂದೆ ಸರಿಯುತ್ತಾನೆಂಬುದರ ಮೇಲೆ ಬೆಳಕನ್ನು ಚೆಲ್ಲುತ್ತದೆ. ಇಲ್ಲಿ ಬರುವ ಮಾಣಿ (೧) ಕಲಾಸಾಕ್ತನಾಗಿದ್ದು, ಕಲಾಭ್ಯಾಸಿಯಾಗುವುದು (೨) ಭೋಗಲಾಲಸೆಯಲ್ಲಿ ಮುಳುಗಿ ಕಲೆಯನ್ನು ಮರೆಯುವುದು (೩) ಕೊನೆಗೆ ಕಲೆ ಮತ್ತು ಬದುಕು ಎರಡರಲ್ಲಿಯೂ ವ್ಯವಸ್ಥಿತವಾದ ಬದುಕು ಸಾಗಿಸುವುದು ಈ ರೀತಿ ಮೂರು ಹಂತದಲ್ಲಿ ಅವನ ಬದುಕನ್ನು ಗುರುತಿಸಬಹುದು. ಇಲ್ಲಿ ಬರುವ ಹಲವು ಪಾತ್ರಗಳ ಸಹಕಾರ, ಸಹಾನುಭೂತಿಯಿಂದ, ಆದರ್ಶ ಗುಣಗಳಿಂದ ಮಾಣಿಯ ಬದುಕು ಹಸನಾಗುತ್ತದೆ. ಆತನೊಬ್ಬ ಉತ್ತಮ ಕಲಾವಿದ ಆದರೆ ಚಿತ್ರದಲ್ಲಿಯ ತಾಂತ್ರಿಕ ಹಾಗೂ ತಾತ್ವಿಕ ಸ್ವರೂಪದ ಪರಿಚಯವಿದ್ದಂತೆ ಕಂಡುಬರುವುದಿಲ್ಲ. ಈ ಕೃತಿಯ ಮುನ್ನುಡಿಯಲ್ಲಿ ಕಾದಂಬರಿಕಾರರು ಕಲೆಯ ಬಗ್ಗೆ, ಸಮಾಜ, ವ್ಯಕ್ತಿ ಜೀವನದ ಬಗ್ಗೆ, ಕಾದಂಬರಿಯಲ್ಲಿನ ಪಾತ್ರಗಳ ಬಗ್ಗೆ ಸುಧೀರ್ಘವಾಗಿ ಬರೆದಿದ್ದಾರೆ. ಈ ರೀತಿ ಸ್ವ ವಿಮರ್ಶೆ ಪ್ರಗತಿಶೀಲ ಬರಹಗಾರರಲ್ಲಿ ತುಂಬಾ ವಿರಳವೇ. ಆದರೆ ಮುನ್ನುಡಿಯ ಇವರ ಹೇಳಿಕೆಗೂ, ಕಾದಂಬರಿ ರಚನೆಗೂ ಸ್ಪಷ್ಟವಾದ ವ್ಯತ್ಯಾಸ ಕಂಡುಬರುತ್ತದೆ. ಇಲ್ಲಿ ಬರುವ ಕಲೆಯ ವಿಚಾರಗಳು ಕಾದಂಬರಿ ಪಾತ್ರಗಳಾಗದೇ ಕಾದಂಬರಿಕಾರರವೇ ಆಗುತ್ತವೆ.

ಇವರ ಮತ್ತೊಂದು ಕಾದಂಬರಿ 'ಸಂಧ್ಯಾರಾಗ'. ಸಂಗೀತರಾರನ ಬದುಕಿನ ಚಿತ್ರಣವನ್ನು ಒಳಗೊಂಡಿರುವ ಕಾದಂಬರಿ. ಕಲೋಪಾಸಕನಾದ ಲಕ್ಷ್ಮಣ ಇಲ್ಲಿನ ಕೇಂದ್ರ ವ್ಯಕ್ತಿ ಲಕ್ಷ್ಮಣನ ಬದುಕಿನೊಳಗೆ ಉಳಿದ ಪಾತ್ರಗಳ ವ್ಯಕ್ತಿತ್ವ, ಮನೋಭಾವಗಳು ಪದರ ಬಿಚ್ಚಿಕೊಳ್ಳುತ್ತವೆ. ತನಗೆ ಮಕ್ಕಳಾಗದ ಕಾರಣ ಗಂಡನಿಗೆ ಮತ್ತೊಂದು ಮದುವೆಯನ್ನು ಮಾಡಿಸಿ, ಸವತಿಯನ್ನು ತಂಗಿಯಂತೆ ಕಾಣುವ ಮೀನಾಕ್ಷಮ್ಮ, ಲಕ್ಷ್ಮಣ, ಶಾಮಣ್ಣ, ವೆಂಕಟೇಶ ಮುಂತಾದುವೆಲ್ಲ ಸಾತ್ವಿಕ ಪಾತ್ರಗಳೇ. ರಾಮಚಂದ್ರನೊಬ್ಬ ದುಡಿಕಿನ ಸ್ವಭಾವದ ಸ್ವಾರ್ಥಬುದ್ದಿಯವ ಇಡೀ ಕುಟುಂಬದ ಭಾವುಕಸಂಬಂಧ, ನೆಮ್ಮದಿ ಹಾಳಾಗುವುದೇ ರಾಮಚಂದ್ರನಿಂದ. ರಾಮಚಂದ್ರ ಮತ್ತು ಲಕ್ಷ್ಮಣರಿಬ್ಬರ ಬದುಕು ವೈದೃಶ್ಯದಿಂದ ಚಿತ್ರಿಸಲ್ಪಟ್ಟಿದೆ. ಒಬ್ಬ ತಿರಸ್ಕಾರಕ್ಕೆ ಯೋಗ್ಯನಾದರೆ ಮತ್ತೊಬ್ಬ ಗೌರವಕ್ಕೆ ಪಾತ್ರನಾಗುತ್ತಾನೆ. ವಕೀಲಿ ವೃತ್ತಿ ಕೈಗೊಳ್ಳುವ ರಾಮಚಂದ್ರ ದುಷ್ಟನಾದರೆ, ಹುಟ್ಟು ಕಲಾವಿದನಾದ ಲಕ್ಷ್ಮಣ ತಂದೆ, ತಾಯಿ, ಪತ್ನಿಯರ ಸಾವಿನಿಂದ ವೈರಾಗ್ಯ ತಾಳಿ ಕುಟುಂಬವನ್ನೇ ತ್ಯಜಿಸಿ ಹೊರಟುಹೋಗುತ್ತಾನೆ. ಗುರುವೊಬ್ಬನ ದರ್ಶನದಿಂದ ಸಂಗೀತಗಾರನಾಗುತ್ತಾನೆ. ಇಲ್ಲಿ ಕಲಾವಿದನೊಬ್ಬನ ಬದುಕನ್ನು ಚಿತ್ರಿಸುವುದು ಕಾದಂಬರಿಕಾರರ ಉದ್ದೇಶವಾಗಿದ್ದರೂ ಲಕ್ಷ್ಮಣ ಒಬ್ಬ ಕಲಾವಿದನಾಗಿ ಚಿತ್ರಿಸಲ್ಪಡದೆ ಒಬ್ಬ ವ್ಯಕ್ತಿಯಾಗಿಯೇ ಚಿತ್ರಿಸಲ್ಪಟ್ಟಿದ್ದಾನೆ. ಚುರುಕಾದ ಕ್ರಿಯೆ, ಹಿತಮಿತವಾದ ಸಂಭಾಷಣೆ, ಸುಲಲಿತವಾದ ಶೈಲಿಯಿಂದಾಗಿ ಕಾದಂಬರಿ ಆಕರ್ಷಕವೆನಿಸುತ್ತದೆ. ಪ್ರಗತಿಶೀಲ ಚಳವಳಿ ಆರಂಭವಾಗುವುದಕ್ಕೆ ಮುಂಚೆ ಕಾದಂಬರಿ ರಚಿಸಿದ ಅ.ನ.ಕೃ ಅವರ ಕೃತಿಗಳು ನವೋದಯದ ಜಾಡಿನಲ್ಲೇ ಸಾಗುತ್ತವೆ. ಸ್ವಲ್ಪ ಮಟ್ಟಿನ ವೇಶ್ಯಾಸಮಸ್ಯೆ ಬಿಟ್ಟರೆ ಉಳಿದಂತೆ ಅಂತಹ ವಿಶಿಷ್ಟ ಅಂಶಗಳೇನೂ ಕಂಡುಬರುವುದಿಲ್ಲ. ಇವರ ವೈಶಿಷ್ಟ್ಯವೆಂದರೆ ಸುಧೀರ್ಘವಾದ

ಮುನ್ನುಡಿ ಬರೆದು ತಮ್ಮ ವೈಚಾರಿಕತೆಯನ್ನು ಮೆರೆದದ್ದು ಅಲ್ಲದೆ, ವಸ್ತುವೊಂದನ್ನು ಕಾದಂಬರಿಗೆ ಆಯ್ದುಕೊಂಡಿದ್ದರ ಹಿಂದಿನ ಉದ್ದೇಶ, ಅದು ಕಾದಂಬರಿಯಲ್ಲಿ ಅಭಿವ್ಯಕ್ತಿಗೊಳ್ಳುವ ರೀತಿಯನ್ನು ತಮ್ಮ ಕಾದಂಬರಿಗಳ ಮುನ್ನುಡಿಯಲ್ಲಿ ವಿವರಿಸುತ್ತಾರೆ. ಅ.ನ.ಕೃ ಅವರ ಈ ಮೂರು ಕಾದಂಬರಿಗಳು ಪ್ರಗತಿಶೀಲ ಚಳವಳಿ ಅನಂತರ ಬಂದ ಕೃತಿಗಳಿಗಿಂತ ಹೇಗೆ ಭಿನ್ನ ಎಂಬುದನ್ನು ಗುರುತಿಸುವ ಉದ್ದೇಶದಿಂದ ಅವುಗಳನ್ನು ಸೂಕ್ಷ್ಮವಾಗಿ ವಿವರಿಸಿದ್ದೇನೆ.

೧೯೪೪ರ ವೇಳೆಗೆ ಪ್ರಗತಿಶೀಲ ಚಳವಳಿಯ ಮುಂದಾಳತ್ವ ವಹಿಸಿಕೊಂಡ ಅ.ನ.ಕೃ ತಮ್ಮ ಕೃತಿಗಳ ಮೂಲಕ ಹೊಸ ದೃಷ್ಟಿಕೋನ, ಧೋರಣೆ, ಹೊಸ ಕ್ರಮವನ್ನು ತರುವ ಪ್ರಯತ್ನ ಮಾಡಿದರು. ಆಶಯವೇನೋ ಉತ್ತಮವಾದದ್ದೆ, ಆದರೆ ಅದು ಅ.ನ.ಕೃ ಕಾದಂಬರಿಗಳಲ್ಲಿ ಯಶಸ್ಸು ಕಾಣಲಿಲ್ಲ. ೧೯೪೭ರಲ್ಲಿ ರಚಿತವಾದ 'ಕಣ್ಣೀರು', ೧೯೫೮ರಲ್ಲಿ ರಚಿತವಾದ 'ಭೂಮಿತಾಯಿ' ಕಾದಂಬರಿಗಳನ್ನು ಉದಾಹರಿಸಬಹುದು. 'ಕಣ್ಣೀರು', ಕಾದಂಬರಿಯಲ್ಲಿ ಹೆಣ್ಣು ಹೆಣ್ಣನ್ನು ಶೋಷಿಸಿದರೆ 'ಭೂಮಿತಾಯಿ'ಯಲ್ಲಿ ಗ್ರಾಮಜೀವನದ ಚಿತ್ರಣವಿದೆ.

ಪ್ರಗತಿಶೀಲ ಚಳವಳಿಯಲ್ಲಿ ಅ.ನ.ಕೃ ಜೊತೆಗೂಡಿದ ಬಸವರಾಜ ಕಟ್ಟೀಮನಿಯವರು ಅಪ್ಪಟ ಸಮಾಜವಾದಿ ಮತ್ತು ಕ್ರಾಂತಿಕಾರಿಯೂ ಆಗಿದ್ದಂತಹವರು. ಸ್ವಾತಂತ್ರ್ಯ ಚಳವಳಿಯಲ್ಲಿ ಸಕ್ರಿಯ ಪಾತ್ರವಹಿಸಿದ್ದವರು. ಚಿಕ್ಕ ವಯಸ್ಸಿನಿಂದಲೇ ಓದುವ ಬರೆಯುವ ಕ್ರಿಯೆಗೆ ತಮ್ಮನ್ನು ತೊಡಗಿಸಿಕೊಂಡವರು. ಪ್ರಗತಿಶೀಲ ಧೋರಣೆಗಳನ್ನು ಒಪ್ಪಿಕೊಂಡ ಕಟ್ಟೀಮನಿಯವರು ಪ್ರಗತಿಶೀಲರ ನಿಲುವಿನಿಂದ ಬೇಸತ್ತು ದೂರ ಸರಿಯುತ್ತಾರೆ. ಪ್ರಗತಿಶೀಲರಿಂದ ದೂರ ಸರಿದರೂ ಪ್ರಗತಿಶೀಲ ಧೋರಣೆಗೆ ಬದ್ಧರಾಗಿಯೇ ಕೃತಿಗಳನ್ನು ರಚಿಸುತ್ತಾರೆ.

ಪ್ರತಿಯೊಬ್ಬ ಸಾಹಿತಿಗೂ ಅವರದೇ ಆದ ದೃಷ್ಟಿಕೋನಗಳು, ವೈಯಕ್ತಿಕ ನಿಲುವುಗಳಿರುತ್ತವೆ. ಒಂದೇ ಪರಂಪರೆಯಲ್ಲಿ ಒಂದೇ ಆಶಯದಡಿಯಲ್ಲಿ ಬೆಳೆದುಬಂದ ಲೇಖಕರಲ್ಲಿಯೂ ವಿಭಿನ್ನ ದೃಷ್ಟಿಕೋನಗಳಿರುತ್ತವೆ. ಇಂತಹ ನಿಲುವುಗಳು ಅವರ ಕೃತಿಗಳ ವ್ಯಾಪ್ತಿಯನ್ನೂ ನಿಯಂತ್ರಿಸುತ್ತವೆ. ಸಾಮಾಜಿಕ ಸಮಸ್ಯೆಗಳು ಸ್ವಾನುಭವವಾದಾಗ ಅವು ಕೃತಿ ರಚನೆ ಮೇಲೆ ದಟ್ಟವಾದ ಪ್ರಭಾವವನ್ನು ಬೀರುತ್ತವೆ. ಕಟ್ಟೀಮನಿಯವರು ವೈಯಕ್ತಿಕವಾಗಿಯೂ ಈ ತರಹದ ಸಮಸ್ಯೆಗಳನ್ನೆದುರಿಸಿದ್ದರಿಂದ ಅವರ ಕೃತಿಗಳಲ್ಲಿ ಇಂತಹ ಸಮಸ್ಯೆಗಳ ಮೇಲೆ ಬೆಳಕು ಹರಿಸಿದ್ದಾರೆ. ಸಮಾಜದಲ್ಲಿನ ಶೋಷಣೆ, ಅನ್ಯಾಯ, ದಬ್ಬಾಳಿಕೆಗಳು ಇವರನ್ನು ರೊಚ್ಚಿಗೆಬ್ಬಿಸುತ್ತಿದ್ದವು. ಇವರ ಆರಂಭದ ಕಾದಂಬರಿಗಳಲ್ಲಿ ಈ ರೊಷವನ್ನು ಗುರುತಿಸಬಹುದು. ಈ ರೀತಿಯ ವೈಯಕ್ತಿಕವಾದ ಭಾವೋದ್ವೇಗಗಳು ಕೃತಿಯಲ್ಲಿ ಮೂಡಿದಾಗ ಅದೇ ಕೃತಿಯ ಮಿತಿ ಮತ್ತು ದೌರ್ಬಲ್ಯವೂ ಆಗುತ್ತದೆ.

ಅ.ನ.ಕೃ ಅವರ ಕಾದಂಬರಿಗಳಲ್ಲಿಯಂತೆ ವೇಶ್ಯಾಸಮಸ್ಯೆ ಚಿತ್ರಿಸುವ ಇವರ ಕಾದಂಬರಿ 'ಬೀದಿಯಲ್ಲಿ ಬಿದ್ದವಳು' ಇಬ್ಬರೂ ಕೃತಿಗಳ ವಸ್ತು ಒಂದೇ ಆದರೂ ನಿರೂಪಣಾ ವಿಧಾನದಲ್ಲಿ ಬಹಳಷ್ಟು ಅಂತರವಿದೆ. ವೇಶ್ಯಾಸಮಸ್ಯೆ ಚಿತ್ರಿಸಲು ಅ.ನ.ಕೃ ಅವರು ಮೂರು ಕಾದಂಬರಿಗಳನ್ನು

ಬರೆದರೆ ಕಟ್ಟೀಮನಿಯವರು ಒಂದೇ ಒಂದು ಚಿಕ್ಕ ಕಾದಂಬರಿ ರಚಿಸಿ ಅದರಲ್ಲಿಯೇ ಎಲ್ಲ ಮುಖಗಳನ್ನು ಚಿತ್ರಿಸಿದ್ದಾರೆ. ಕೇವಲ ಐವತ್ತು ಪುಟಗಳಲ್ಲಿಯೇ ವೇಶ್ಯಾ ಜೀವನದ ಪರಿಚಯ ಮಾಡಿಸಿದ್ದಾರೆ. ಅವರ ಕೊಳಕುತನ, ಅಶ್ಲೀಲ ನಡತೆ, ರೋಗ ರುಜಿನಗಳು ಮುಂತಾದ ವಿವರಗಳನ್ನೆಲ್ಲ ಸಂಕ್ಷಿಪ್ತವಾಗಿ ಪರಿಚಯಿಸಿದ್ದಾರೆ. ಈ ಕೃತಿಯನ್ನು ವಿಮರ್ಶಿಸುತ್ತಾ ಕೃಷ್ಣ ಆಲನ ಹಳ್ಳಿಯವರು' "ಆವೇಶಪೂರ್ಣ ಭಾವೋದ್ವೇಗ, ಅಸಂಯಮ ಈ ಕಾದಂಬರಿಯ ಬರವಣಿಗೆಯಲ್ಲಿ ಉದ್ದಕ್ಕೂ ಕಾಣಿಸುತ್ತದೆ" ಎನ್ನುವ ಮಾತು ಪೂರ್ಣ ಸತ್ಯವಾದುದಲ್ಲ. ಬರವಣಿಗೆಯಲ್ಲಿ ಭಾವೋದ್ವೇಗವಿದ್ದರೂ ನಿರೂಪಣೆಯಲ್ಲಿ ಸಂಯಮವಿದೆ. ಇಂತಹ ಸಮಸ್ಯೆ ಚಿತ್ರಿಸಿರುವ ಅ.ನ.ಕೃ ಅವರ ಕಾದಂಬರಿಗಳೊಂದಿಗೆ 'ಬೀದಿಯಲ್ಲಿ ಬಿದ್ದವಳು' ಕಾದಂಬರಿ ಹೋಲಿಸಿದಾಗ ಈ ಸಂಯಮ ಅಸಂಯಮಗಳ ಅರಿವು ಸ್ಪಷ್ಟವಾಗುತ್ತದೆ.

'ಬೀದಿಯಲ್ಲಿ ಬಿದ್ದವಳು' ಕಾದಂಬರಿಯ ಯಮುನೆಯ ಚಿತ್ರಣದಲ್ಲಿ ಭಾವಪರವಶತೆ ಇದೆ. ಯಮುನ, ಫಾತಿಮಳ ಮಾತು ಕೇಳಿ ಸಿದ್ಧರಾಮಪ್ಪನ ಸೂಳೆಯಾಗಿ ಬದುಕುವುದು, ಯಮುನೆ ಸಾಯಲು ನಿರ್ಧರಿಸುವುದು, ಅವಳಿಗೆ ಹುಚ್ಚು ಹಿಡಿಯುವುದು ಇವೆಲ್ಲಾ ಭಾವೋದ್ವೇಗ ಕಲ್ಪನೆಗಳೇ. 'ಬೀದಿಯಲ್ಲಿ ಬಿದ್ದವಳು' ಕಾದಂಬರಿಯಲ್ಲಿ ಯಮುನೆಯ ಬದುಕಿನ ಸಂಧಿಗ್ಧ ಪರಿಸ್ಥಿತಿ ಮುಖ್ಯವಾದರೆ 'ಮಣ್ಣು ಮತ್ತು ಹೆಣ್ಣು' ಕಾದಂಬರಿಯಲ್ಲಿ ಎರಡೂ ಮುಖ್ಯ ಸಮಸ್ಯೆಯಾಗುತ್ತದೆ. 'ಬೀದಿಯಲ್ಲಿ ಬಿದ್ದವ ಳು' ಕಾದಂಬರಿಯಲ್ಲಿನ ಭಾವಪರವಶತೆ 'ಹೆಣ್ಣು ಮತ್ತು ಮಣ್ಣು' ಕಾದಂಬರಿಯಲ್ಲಿ ಕಂಡು ಬರುವುದಿಲ್ಲ.

ತನ್ನ ಹೊಲವನ್ನು ಉಳಿಸಿಕೊಳ್ಳಲು ಮನೆಯಲ್ಲಿದ್ದ ಮುದುಕಿಯನ್ನು ಕೊಲೆ ಮಾಡುವ ಭೀಮಣ್ಣ ಕುಡಿತದ ಚಟಕ್ಕೆ ಅಂಟಿಕೊಳ್ಳುತ್ತಾನೆ. ಗಿಡ್ಡನ ಹೆಂಡತಿ ಬಾಲಿ ತನ್ನ ಗಂಡನ ಷಂಡತನದಿಂದಾಗಿ ಗಂಡನನ್ನು ತೊರೆದು ತಾಯಿಯ ಮನೆಗೆ ಬರುತ್ತಾಳೆ, ಯಮುನೆಯ ಸಮಸ್ಯೆಯೇ ಬಾಲಿಯದಾಗಿದ್ದರೂ ಯಮುನೆಯಂತೆ ಸೋಲೊಪ್ಪಿಕೊಳ್ಳದೆ ಸಮಸ್ಯೆಯನ್ನು ಎದುರಿಸಿ ನಿಲ್ಲುವ ಗಟ್ಟಿತನ ಬಾಲಿಯಲ್ಲಿದೆ. ತಾಯಿಯ ಒತ್ತಾಯಕ್ಕೆ ಮಣಿದ ಬಾಲಿ ತನಗರಿವಿಲ್ಲದೆ ಕೆಲವು ದಿನ ಸೂಳೆಯಾಗಿ ಬದುಕು ನಡೆಸಿ ಅನಂತರ ಕೂಡಿಕೆ ಮಾಡಿಕೊಳ್ಳಲು ಒಪ್ಪದೇ ತನ್ನ ತಾಯಿಯನ್ನು ಪ್ರತಿಭಟಿಸುತ್ತಾಳೆ. ಒಮ್ಮೆ ಕೈಗೊಂಡ ನಿರ್ಧಾರವನ್ನು ಬಾಲಿ ಎದುರಿಸಿದಂತೆ ಎದುರಿಸುವ ದಿಟ್ಟ ನಿರ್ಧಾರ ಯಮುನೆಗಿಲ್ಲ. ಯಮುನೆಯು ಸಾಯಲು ಹೊರಟರೆ ಬಾಲಿ ಬದುಕುವುದಕ್ಕಾಗಿ ದುಡಿಯಲು ಹೊರಡುತ್ತಾಳೆ. ಯಮುನೆ ವೇಶ್ಯಾವೃತ್ತಿಗಂಟಿಕೊಂಡರೆ ಬಾಲಿ ಆ ವೃತ್ತಿಯನ್ನು ತಿರಸ್ಕರಿಸಿ ನಿಲ್ಲುತ್ತಾಳೆ. ಈ ಎರಡೂ ಕಾದಂಬರಿಗಳನ್ನು ಹೋಲಿಕೆ ಮಾಡಿ ನೋಡಿದಾಗ ವಾಸ್ತವ ಪ್ರಜ್ಞೆ 'ಬೀದಿಯಲ್ಲಿ ಬಿದ್ದವಳು' ಕಾದಂಬರಿಗಿಂತ 'ಮಣ್ಣು ಮತ್ತು ಹೆಣ್ಣು' ಕಾದಂಬರಿಯಲ್ಲಿ ಸ್ಪಷ್ಟವಾಗಿ ಮೂಡಿ ಬಂದಿದೆ. ವೇಶ್ಯಾಸಮಸ್ಯೆಯನ್ನೊಳಗೊಂಡ ಭಾವಪರವಶತೆಯಿಂದ ಕೂಡಿರುವ ಮತ್ತೊಂದು ಕಾದಂಬರಿಯೆಂದರೆ' 'ಖಾನಾವಳಿಯ ನೀಲಾ'.

ಕಾದಂಬರಿಕಾರರ ರೋಷ ಇಲ್ಲಿ ಕಂಡುಬರುತ್ತದೆ. ಭಿಕ್ಷುಕನ ಧಾರುಣ ಬದುಕಿಗೆ ಸಮಾಜವೇ ಕಾರಣವೆಂದು ರೋಷ ವ್ಯಕ್ತಪಡಿಸಿದ ಕಾದಂಬರಿಕಾರರು, ಕಾದಂಬರಿ ಬೆಳೆದಂತೆಲ್ಲಾ ಸ್ವಲ್ಪ ಮಟ್ಟಿಗೆ ತಣ್ಣಗಾಗುತ್ತದೆ. ಇಲ್ಲಿಯೂ ನೀಲಳ ಪಾತ್ರವೇ ಪ್ರಧಾನವಾದುದು. ನೀಲ ವೇಶ್ಯೆಯಾಗುವುದಕ್ಕೆ ಅನೇಕ ಕಾರಣಗಳಿವೆ. ಕಾದಂಬರಿಯಲ್ಲಿ ಭಾವತೀವ್ರತೆ, ರೋಷ, ವಾಸ್ತವಿಕ ಸಮಸ್ಯೆಗಳು ಚಿತ್ರಿಸಲ್ಪಟ್ಟಿವೆ. ಆವೇಶ ಹೆಚ್ಚಿ ಪಾತ್ರ ನಿರೂಪಣೆಯಲ್ಲಿ ಸಂಯಮ ಮತ್ತು ವಾಸ್ತವಿಕತೆಯ ಬಿಗಿತನ ಕಾಣಿಸುವುದಿಲ್ಲ. ಆದರೆ ಸುತ್ತಮುತ್ತಲ ಸಮಾಜದ ಭೀಕರ ಸಮಸ್ಯೆಯೊಂದನ್ನು ಚಿತ್ರಿಸುವ ಕಾಳಜಿಯಿದೆ. ವೇಶ್ಯಾ ಸಮಸ್ಯೆ ಚಿತ್ರಿಸುವಲ್ಲಿ ಅತಿರೋಚಕವಾಗಲಿ, ಅಶ್ಲೀಲ ನಿರೂಪಣೆಯಾಗಲಿ ಕಂಡುಬರುವುದಿಲ್ಲ. ಹಾಗಾಗಿಯೇ ವೇಶ್ಯಾ ಸಮಸ್ಯೆ ಚಿತ್ರಿಸುವ ಅ.ನ.ಕೃ ಅವರ ರಂಜನೆಗಿಂತ ಇವರ ಕೃತಿಗಳು ಮುಖ್ಯವೆನಿಸುತ್ತವೆ. ಅ.ನ.ಕೃ ಅವರಂತೆಯೇ ಕಟ್ಟೀಮನಿಯವರು ಪಾತ್ರಗಳ ಮಾನಸಿಕ ನೋವು, ಸಂಘರ್ಷ, ಯಾತನೆ, ಹೊಯ್ದಾಟ, ನಿರ್ಧಾರಗಳತ್ತ, ಗಮನ ಹರಿಸದೆ, ಆ ಪಾತ್ರಗಳು ಸಿದ್ದ ಪಾತ್ರಗಳಾಗಿ ಲೇಖಕರ ಅಣತಿಯಂತೆ ನಡೆಯುವ ರೀತಿಯಲ್ಲಿ ಭಾಸವಾಗುತ್ತದೆ. ಮೋಹದ ಬಲೆಯಲ್ಲಿ ಕಾದಂಬರಿಯಲ್ಲಿಯೂ ಪ್ರೇಮ ಮತ್ತು ಕಾಮಾಸಕ್ತಿ ಚಿತ್ರಣವಿದೆ.

ಮಠದ ಅವ್ಯವಹಾರವನ್ನು ನಿರೂಪಿಸುವ ಮತ್ತೊಂದು ಕಾದಂಬರಿ 'ಜರತಾರಿ ಜಗದ್ಗುರು'. ಹೆಸರಿಗೆ ಮಾತ್ರ ಜಗದ್ಗುರು, ನಡತೆ ಮಾತ್ರ ಅದಕ್ಕೆ ತದ್ವಿರುದ್ಧವಾದುದೆಂಬುದನ್ನು ಚಿತ್ರಿಸಲಾಗಿದೆ. ಮಠಕ್ಕೆ ಸ್ವಾಮಿಯಾಗಿ ಬಂದ ಸಿದ್ಧವೀರಸ್ವಾಮಿಯ ಲಂಪಟತನವನ್ನು ಚಿತ್ರಿಸುವುದೇ ಕಾದಂಬರಿಯ ಮೂಲ ಉದ್ದೇಶ. ವೇಶ್ಯಾಸಮಸ್ಯೆ ಬೆಳೆಯಲು ಮಠದ ಸ್ವಾಮಿಗಳೇ ನೈತಿಕವಾಗಿ ಹೊಣೆಗಾರು.

ಪ್ರಗತಿಶೀಲ ಬರಹಗಾರರಲ್ಲಿ ಕಟ್ಟೀಮನಿಯವರು ವೈಶಿಷ್ಟ್ಯ ಪೂರ್ಣವಾದ ನಿಲುವನ್ನು ಹೊಂದಿದ್ದಂತಹವರು. ತಮ್ಮ ಕಾದಂಬರಿಗಳಲ್ಲಿ ಸಾಮಾಜಿಕ ಸಮಸ್ಯೆಗಳಿಗೆ ಹೆಚ್ಚು ಒತ್ತು ಕೊಟ್ಟಿದ್ದಾರೆ. ಸಾಮಾಜಿಕವಾಗಿ ಪರಿವರ್ತನೆಯಾಗಬೇಕೆಂಬ ಆಶಯ ಹೊಂದಿದ್ದರು. ಪ್ರಸ್ತುತವಾದ ಸಾಮಾಜಿಕ ಸಮಸ್ಯೆಗಳಿಗೆ ತಮ್ಮ ಪ್ರಾಮುಖ್ಯತೆ ನೀಡಿ ಅವನ್ನು ನಿರೂಪಿಸುವ ಕಲೆಗಾರಿಕೆ ಇವರಿಗೆ ಸಿದ್ಧಿಸಿತ್ತು. ಜನಸಾಮಾನ್ಯರ ಇರುವಿಕೆ, ರೀತಿ-ನೀತಿಗಳನ್ನು ಹೃದಯಂಗಮವಾಗಿ ಬಣ್ಣಿಸಿ ಬಲ್ಲವರಾಗಿದ್ದರು. ವ್ಯಾವಹಾರಿಕವಾದ ಭಾಷೆಯ ಕಸುವನ್ನು ತಮ್ಮ ಬರಹದಲ್ಲಿ ಪ್ರಯೋಗಿಸಿದ್ದಾರೆ. ಆದರೆ ಅವರ ಬರವಣಿಗೆಯ ಕೊರತೆಯೆಂದರೆ ವಿಚಾರಶೀಲತೆಯಿಲ್ಲದಿರುವುದು. ವಿಚಾರಕ್ಕೆ ಬದಲಾಗಿ ಭಾವನೆಗಳಿಗೆ ಒತ್ತು ಕೊಟ್ಟಿರುವುದರಿಂದ ಅವರ ವಾದಗಳೆಲ್ಲ ಅಪೂರ್ಣವೆನಿಸುತ್ತವೆ. ಕಥಾಹಂದರದಲ್ಲಿ ತೂಕ ತಪ್ಪಿ ಬರಹದಲ್ಲಿ ಪಾತ್ರಗಳು ಸಾಹಿತ್ಯ ಗೌರವವನ್ನು ಕಳೆದುಕೊಳ್ಳುತ್ತವೆ. ಆದರೂ ಇವರ ಆರಂಭದ ಕಾದಂಬರಿಗಳಲ್ಲಿ ಅಸಾಮಾನ್ಯವಾದ ಶಕ್ತಿ ಬಳಕೆ ಕಂಡು ಬರುತ್ತದೆ. "ಇವರಲ್ಲಿ ತ.ರಾ.ಸು ಅವರ ಚಿತ್ರಗಾರಿಕೆ ಇಲ್ಲ, ಸೂಕ್ಷ್ಮತೆ ಇಲ್ಲ. ಆದರೆ ಸಿಡಿಲಿನ ಶಕ್ತಿ ಇವರ ಬರಹದ್ದು ಎನ್ನುವ ಎಲ್.ಎಸ್. ಶೇಷಗಿರಾಯರ ಮಾತು ಕಟ್ಟೀಮನಿಯವರ ಕಾದಂಬರಿಯ

ವೈಶಿಷ್ಟ್ಯತೆ ತಿಳಿಯಲು ಸಹಕರಿಯಾಗುತ್ತದೆ. ಈ ಕಾರಣದಿಂದಾಗಿಯೇ ಇವರು ಕ್ರಾಂತಿಕಾರಿ ಕಾದಂಬರಿಕಾರರಾದರು.

ಪ್ರಗತಿ ಶೀಲರಲ್ಲಿ ತುಂಬಾ ಪ್ರಸಿದ್ಧರಾದ ಬೌದ್ಧಿಕ ಬರಹಗಾರಂದರೆ ನಿರಂಜನ ಅವರು. ೧೯೪೩ ರಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲಿ ಅ.ನ.ಕೃ ಅವರೊಂದಿಗೆ ಪ್ರಗತಿಶೀಲತೆಯ ತುತ್ತೂರಿ ಊದಿದವರು. ಆದರೆ ೧೯೪೪ರಲ್ಲಿಯೇ ಪ್ರಗತಿಶೀಲ ಸಾಹಿತ್ಯಾಸಕ್ತರ ಸಭೆಯಲ್ಲಿ ಅವರ ಕಾರ್ಯವಿಧಾನವನ್ನು ಟೀಕಿಸಿ ಅವರಿಂದ ದೂರ ಸರಿಯುತ್ತಾರೆ. ಅ.ನ.ಕೃ ತ.ರಾ.ಸು ಅವರಿಗಿಂತ ಭಿನ್ನವಾದ ಧೋರಣೆ ತಳೆದು ಪ್ರತ್ಯೇಕವಾಗಿ ಉಳಿಯುತ್ತಾರೆ. ಬರವಣಿಗೆಯಲ್ಲಿ ವಾದ, ವೈಚಾರಿಕವಾದ ಮನೋಧರ್ಮಗಳು ಮುಖ್ಯವೆಂದು ಭಾವಿಸಿದವರು. ತಮ್ಮದೇ ಆದ ಬಣವನ್ನು ಹುಟ್ಟುಹಾಕುತ್ತಾರೆ. ಪ್ರಗತಿಶೀಲ ಚಳವಳಿ ಅ.ನ.ಕೃ ಬಣ ಮತ್ತು ನಿರಂಜನ ಬಣವೆಂದು ಗುರುತಿಸಿಕೊಂಡು ಎರಡು ರಾಜಕೀಯ ಪಕ್ಷಗಳ ಬೆಂಬಲಿಗರಾಗುತ್ತಾರೆ. ತ.ರಾ.ಸು ಅವರು ಅ.ನ.ಕೃ ಬಣದಲ್ಲಿ ಗುರುತಿಸಿಕೊಳ್ಳುತ್ತಾರೆ.

ನಿರಂಜನ ಅವರು ಪ್ರಗತಿಶೀಲರಿಂದ ದೂರವಾದರೂ ಪ್ರಗತಿಶೀಲ ಧೋರಣೆಗೆ ಬದ್ಧರಾಗಿಯೇ ಕೃತಿಗಳನ್ನು ರಚಿಸುತ್ತಾರೆ. ಕಮ್ಯೂನಿಷ್ಟರಾಗಿದ್ದ ನಿರಂಜನ ಶಿಸ್ತು, ನೇರ ನಡೆ, ನುಡಿಗಳಿಗೆ ಹೆಸರಾದವರು. ಅ.ನ.ಕೃ ನೇತೃತ್ವದಲ್ಲಿ ಅಡ್ಡದಾರಿ ಹಿಡಿಯುತ್ತಿದ್ದ ಪ್ರಗತಿಶೀಲತೆಯನ್ನು ಸರಿದಾರಿಗೆ ತರುವಲ್ಲಿ ಶ್ರಮಿಸಿದರು. ಸಾಮಾಜಿಕ ಶೋಷಣೆ ಮತ್ತು ವೈಚಾರಿಕತೆಗೆ ಒತ್ತು ಕೊಟ್ಟರು. ವೈಚಾರಿಕತೆಯಲ್ಲಿ ಮಾನವೀಯ ಮೌಲ್ಯಗಳನ್ನು ಗುರುತಿಸುವ ಬರಹವನ್ನು ತಮ್ಮ ಕಾದಂಬರಿಗಳಲ್ಲಿ ಪ್ರಯೋಗಿಸಿದರು. ಭಾವುಕತೆ, ರೋಚಕತೆ, ಇವರ ಬರಹದಲ್ಲಿ ವಿರಳ. ಈ ಕಾರಣದಿಂದಾಗಿ ಇವರ ಕಾದಂಬರಿಗಳು ಪ್ರಗತಿಶೀಲರಲ್ಲಿ ವೈಶಿಷ್ಟ್ಯತೆಯನ್ನು ಪಡೆಯುತ್ತವೆ. ಆರಂಭದ ಕಾದಂಬರಿಗಳಾದ 'ರಂಗಮ್ಮನ ವಠಾರ', 'ಕಲ್ಯಾಣಸ್ವಾಮಿ' ಮುಂತಾದವು ವಿಮರ್ಶಕರ ಟೀಕೆಗೆ ಒಳಗಾದರೂ ತಮ್ಮ ಬರಹದಲ್ಲಿ ಗಟ್ಟಿತನ ಮತ್ತು ವೈಚಾರಿಕತೆಯನ್ನು ಮೆರೆದರು.

೧೯೭೪ರಲ್ಲಿ ನಿರಂಜನ ಅವರು 'ಪ್ರಗತಿಪಂಥ" ವನ್ನು ಸ್ಥಾಪಿಸಿ ಅದರ ಸೂತ್ರಧಾರರಾಗುತ್ತಾರೆ. ಇದರ ಫಲವಾಗಿ ಪ್ರಗತಿಶೀಲ ಚಳವಳಿಯಿಂದ ದೂರ ಸರಿದ ಅನೇಕ ಲೇಖಕರು ಪ್ರಗತಿಶೀಲ ಸಾಹಿತ್ಯದತ್ತ ತಮ್ಮ ಗಮನ ಹರಿಸುತ್ತಾರೆ. ಇವರ ಸಾಮಾಜಿಕ ಕಾದಂಬರಿಗಳ ಕೇಂದ್ರ ಪಾತ್ರಗಳು ಸ್ತ್ರೀಯರೇ. ಸ್ತ್ರೀಸಮಸ್ಯೆಗಳೇ ಪ್ರಧಾನವಾಗುತ್ತವೆ. ಬಾಲವಿಧವೆಯ ದಾರುಣ ಬದುಕಿನ ಚಿತ್ರಣವೇ 'ಬನಶಂಕರಿ' (೧೯೫೪) ಕಾದಂಬರಿಯದು. ವೈದಿಕ ಮನೆತನದ ಹೆಣ್ಣಿನ ಜೀವನ ಹಾಗೂ ವೈದಿಕ ಸಮಾಜದ ಚಿತ್ರಣ ಈ ಕೃತಿಯಲ್ಲಿ ಮೂಡಿದೆ. ಭಾವುಕ ಸನ್ನಿವೇಶಗಳಾಗಲಿ, ಅಸಂಯಮ ನಡತೆ ಕಾದಂಬರಿಯಲ್ಲಿ ವಿರಳವೇ. ಹುಟ್ಟುತ್ತಲೆ ತಂದೆ ಅನಂತರ ತಾಯಿಯನ್ನು ಕಳೆದು ಕೊಂಡ ಅಮ್ಮಿ (ಬನಶಂಕರಿ) ಅಜ್ಜಿಯ ಆಸರೆಯಲ್ಲಿ ಬೆಳೆದು ಹನ್ನೊಂದನೆ ವಯಸ್ಸಿಗೆ ವಿವಾಹವಾಗಿ, ಪತಿಯು ಮರಣ ಹೊಂದಿದಾಗ

ಹದಿಮೂರನೆ ವಯಸ್ಸಿಗೆ ವಿಧವೆಯಾಗುತ್ತಾಳೆ. ಗಂಡ ಸತ್ತ ಆರು ತಿಂಗಳಿಗೆ ಮೈನೆರೆಯುತ್ತಾಳೆ. ತನ್ನ ಅಜ್ಜಿಯೊಂದಿಗೆ ಬದುಕು ನಡೆಸುವಾಗ ವಿಷಯಲಂಪಟರಾದ ದೇವಸ್ಥಾನದವರು, ಮಠದವರು, ಮಂಡಿ, ಮಳಿಗೆಯವರು ಹೀಗೆ ಬನಶಂಕರಿ ಬಯಸುವವರು ಹಲವರು ಇಂತಹ ಕಡೆ ಲೇಖಕರು ಎಚ್ಚರ ತಪ್ಪಿಲ್ಲ. ಬನಶಂಕರಿ ದಕ್ಕದ ಯುವಸ್ವಾಮಿ ನಿರಾಶನಾಗಿ ಬನಶಂಕರಿಗೆ ಬಹಿಷ್ಕಾರ ಹಾಕಿ ಜಾತಿಬಾಹಿರಳೆಂದು ಘೋಷಿಸಿದಾಗಲೂ ಕಾದಂಬರಿಕಾರರು ಸಂಯಮ ಮೀರುವುದಿಲ್ಲ. ಇವಳ ಬದುಕಲ್ಲಿ ಇನ್ನು ಅನೇಕ ಘಟನೆಗಳು ಘಟಿಸುತ್ತವೆ. ಸಾಮಾಜಿಕ ಸ್ತರದಲ್ಲಿ ವೈದಿಕ ಮತದ ವಿಧವೆಯೊಬ್ಬಳು ಎದುರಿಸುವ ಸಮಸ್ಯೆಗಳು, ಕಂಡುಕೊಂಡ ಪರಿಹಾರ, ಪಡುವ ಕಷ್ಟ, ಸಾತ್ವಿಕ ವ್ಯಕ್ತಿಗಳ ಸಹಕಾರ ಮುಂತಾದ ಅಂಶಗಳನ್ನು ಬನಶಂಕರಿ ಚಿತ್ರಿಸುತ್ತದೆ.

೧೯೫೪ರಲ್ಲಿ ರಚಿತವಾದ 'ರಂಗಮ್ಮನ ವಠಾರ' ಕೂಡ ಸಾಮಾಜಿಕ ಸಮಸ್ಯೆಯನ್ನು ಚಿತ್ರಿಸುವ ಕಾದಂಬರಿ. ಒಂದೇ ವಠಾರದಲ್ಲಿನ ಹದಿನಾಲ್ಕು ಕುಟುಂಬಗಳ ಬದುಕಿನ ಚಿತ್ರಣ ಆಗುಹೋಗುಗಳು ಸಾವು ನೋವುಗಳನ್ನು ಚಿತ್ರಿಸುತ್ತದೆ. ಕಾದಂಬರಿಯ ಮಿತಿಯೆಂದರೆ ಒಂದು ವಠಾರದ ಆಂತರಿಕ ಬದುಕಿಗೆ ಮಹತ್ವ ನೀಡುತ್ತದೆಯೇ ಹೊರತು ಬಾಹ್ಯ ಪ್ರಪಂಚದ ಚಿತ್ರಣ ನೀಡುವುದಿಲ್ಲ. ಕೆಲ ಪಾತ್ರಗಳು ಮುಖ್ಯವಾದರೆ ಕೆಲಪಾತ್ರಗಳು ಗೌಣವಾಗುತ್ತವೆ. ಆದಾಗ್ಯೂ ಕಾದಂಬರಿ ಒಂದು ವಠಾರದ ಬದುಕಿನ ಸಾಮಾಜಿಕವಾದ ಮುಖಗಳನ್ನು ಚಿತ್ರಿಸುತ್ತದೆ.

೧೯೫೫ರಲ್ಲಿ ರಚಿತವಾದ 'ಚಿರಸ್ಮರಣೆ' ಹೋರಾಟದ ಕತೆಯೊಂದನ್ನು ನಿರೂಪಿಸುವ ಕಾದಂಬರಿ. ಮೇಲ್ನೋಟಕ್ಕೆ ಸ್ವಾತಂತ್ರ್ಯ ಹೋರಾಟದಂತೆ ಕಂಡರೂ ವರ್ಗ ಸಮರದ ಹೋರಾಟ ಇಲ್ಲಿದೆ. ಕೇರಳದ ಕಯ್ಯೂರಿನಲ್ಲಿ ನಡೆದ ಬಂಡವಾಳಶಾಹಿ, ಸಾಮ್ರಾಜ್ಯ ಶಾಹಿ, ಜಮೀನ್ದಾರಿ ಪಟ್ಟ ಭದ್ರರ ವಿರುತದ್ದ ದನಿ ಎತ್ತುವ ರೈತರ ಸಂಘಟನಾತ್ಮಕ ಪ್ರತಿಭಟನೆಯೇ ಕಾದಬಂರಿಯ ಕೇಂದ್ರಬಿಂದು.

ಜಮೀನ್ದಾರರ ದಬ್ಬಾಳಿಕೆ, ರೈತರ ಶೋಷಣೆ, ಶ್ರಮಜೀವಿಗಳ ಹೋರಾಟದ ಹಿಂದೆ ಕಮ್ಯೂನಿಸ್ಟ್ ಧೋರಣೆ ಕಂಡುಬರುತ್ತದೆ. ಕಯ್ಯೂರಿನಲ್ಲಿ ನಡೆಯುವ ವರ್ಗ ಹೋರಾಟಕ್ಕೆ ಭದ್ರವಾದ ತಳಪಾಯ ಹಾಕುವವರು ಮಾಸ್ತರು. ಚಿರುಕುಂಡ ಮತ್ತು ಅಪ್ಪುಗೆ ಪಂಡಿತರ ಭಾಷಣದಿಂದ ಪ್ರೇರಣೆ ದೊರೆತು ರೈತರಿಗೆ ಅನ್ಯಾಯವಾಗಿದೆ, ನಾವು ಗುಲಾಮಗಿರಿಯಲ್ಲಿದ್ದೇವೆ ಎಂದೆನಿಸುತ್ತದೆ. ಕಾದಂಬರಿಯಲ್ಲಿ ಘಟಿಸುವ ಘಟನೆಗಳ ಹಿಂದೆ ಮಾಸ್ತರಿದ್ದಾರೆ. ರೈತರಿಗಾಗಿ ರಾತ್ರಿಶಾಲೆ ಆರಂಭ, ಪತ್ರಿಕೆ ಓದಿಸುವುದು ಜಮೀನ್ದಾರಿ ವ್ಯವಸ್ಥೆ ವಿರುದ್ಧ ಒಳಗೊಳಗೇ ನಡೆಯುವ ಕಾರ್ಯ ಚಟುವಟಿಕೆಗಳ ಬಗ್ಗೆ ನಂಬಿಯಾರರ ಅಸಹನೆ ಅದನ್ನು ಹತ್ತಿಕ್ಕಲಾರದ ಅಸಹಾಯಕತೆ ಹೀಗೆ ಕಾದಂಬರಿ ಮುಂದುವರಿಯುತ್ತದೆ. ಪ್ರಗತಿಶೀಲ ಪರಂಪರೆ ಕ್ಷೀಣಿಸಿದ ಸಂದರ್ಭದಲ್ಲಿ ಬಂದ ಉತ್ತಮ ಕೃತಿಯಾದರೂ ಪ್ರಗತಿಶೀಲರಲ್ಲಿಯೇ ಗುರುತಿಸಬಹುದಾದಂತಹ ಅತ್ಯುತ್ತಮ ಕೃತಿಯಿದು.

ನಿರಂಜನರ ಬಹಳಷ್ಟು ಕಾದಂಬರಿಗಳು ಪ್ರಗತಿಶೀಲ ಚಳವಳಿ ಕಾವು ಕಳೆದುಕೊಂಡ ಸಂದರ್ಭದಲ್ಲಿ ಬಂದಂತಹವುಗಳು. ಅ.ನ.ಕೃ ಅವರ ಕಾದಂಬರಿಗಳಲ್ಲಿನ ಅಸಹಜ ಬೆಳವಣಿಗೆಯಾಗಲಿ, ಕಟ್ಟೀಮನಿಯವರಲ್ಲಿ ಕಾಣುವ ರೊಚ್ಚಾಗಲಿ ಇವರ ಕಾದಂಬರಿಗಳಲ್ಲಿ ಕಂಡುಬರುವುದಿಲ್ಲ. ಪಾತ್ರ ಪೋಷಣೆಯಲ್ಲಿ ಕಾಣುವ ಸಂಯಮ ವಾಸ್ತವವಾದಕ್ಕೆ ಎಲ್ಲಿಯೂ ಲೋಪವನ್ನುಂಟುಮಾಡುವುದಿಲ್ಲ. "ಶಕ್ತಿಯುತವಾದ ಸಂಭಾಷಣೆ, ಕುತೂಹಲಕರವೂ, ಸಹಜ ಸುಂದರವೂ ಆದ ನಿರೂಪಣೆ ಮತ್ತು ಪ್ರಧಾನವಾಗಿ ನೆಲದಿಂದ ಮೇಲೆದ್ದಂತಹ ಸದೃಢ ಪಾತ್ರಸೃಷ್ಟಿ ಅವರ ವೈಶಿಷ್ಟ್ಯಗಳಾಗಿವೆ."[೩೬] ಎನ್ನುವ ಎಚ್.ಜೆ ಲಕ್ಕಪ್ಪಗೌಡರ ಮಾತು ನಿರಂಜನರ ಕಾದಂಬರಿಗಳ ವೈಶಿಷ್ಟ್ಯ ತಿಳಿಯಲು ಸಹಕಾರಿಯಾಗಿದೆ. ನಿರಂಜನರು ಅ.ನ.ಕೃ ಸಂಪ್ರದಾಯದಲ್ಲಿನ ಎಲ್ಲ ಒಳ್ಳೆ ಗುಣಗಳನ್ನು ಪ್ರತಿನಿಧಿಕರಿಸಿದ್ದಾರೆಂದರೂ ತಪ್ಪಾಗಲಾರದು.

ಪ್ರಗತಿಶೀಲ ಚಳವಳಿಯಲ್ಲಿ ತಮ್ಮದೇ ಆದ ದಾರಿಯಲ್ಲಿ ಮುನ್ನಡೆದವರೆಂದರೆ ತ.ರಾ.ಸು. ಅವರು. ಹಾ.ಮ. ನಾಯಕರು ಹೇಳುವಂತೆ "ವಾಸ್ತವಿಕತೆ, ಸಾಮಾಜಿಕತೆಗಳಲ್ಲಿ, ನೀತಿ, ನಿರೂಪಣೆಗಳಲ್ಲಿ, ಶೈಲಿ, ಸಂವಾದಗಳಲ್ಲಿ ತ.ರಾ.ಸು. ಅವರಿಗೆ ಅ.ನ.ಕೃ. ಅವರೇ ಮೇಲ್ಪಂಕ್ತಿ ಎಂದಿದ್ದಾರೆ" ಅ.ನ.ಕೃ. ಹೆಮ್ಮೆಪಡುವಂತಹ ಶಿಷ್ಯರಾಗಿ ತ.ರಾ.ಸು. ಅವರು ಸಾಹಿತ್ಯ ಕ್ಷೇತ್ರದಲ್ಲಿ ಮುಂದುವರೆದರು. ಕಾದಂಬರಿ ರಚನೆಯಲ್ಲಿ ತ.ರಾ.ಸು ಅವರು ಸಿದ್ಧಹಸ್ತರು. ದೈನಂದಿನ ಬದುಕಿನಲ್ಲಿನ ಅನೇಕ ಸಮಸ್ಯೆಗಳನ್ನು ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ. ಪತಿ–ಪತ್ನಿ ಜಗಳ, ಕೌಟುಂಬಿಕ ಸಮಸ್ಯೆ, ಸ್ತ್ರೀಯರ ಸಮಸ್ಯೆಗಳು, ಗ್ರಾಮೀಣ ಮತ್ತು ನಗರ ಪ್ರದೇಶದ ಜನರ ಸಮಸ್ಯೆ, ದೈವಭಕ್ತಿ, ಸಾಂಸಾರಿಕ ವಿಘಟನೆ ಮುಂತಾದ ಸಮಸ್ಯೆಗಳನ್ನು ಕಾದಂಬರಿಗಳಲ್ಲಿ ಚಿತ್ರಿಸಿ ಓದುವ ವರ್ಗವನ್ನೇ ಸೃಷ್ಟಿಸಿದರು. ಇವರ ಕಾದಂಬರಿಗಳಲ್ಲಿ ಎರಡು ಪೌರಾಣಿಕ, ಹದಿನಾಲ್ಕು ಐತಿಹಾಸಿಕ ಮತ್ತು ಐವತ್ಮೂರು ಸಾಮಾಜಿಕ ಕಾದಂಬರಿಗಳು. ಇವರ ಕಾದಂಬರಿಗಳ ಪಾತ್ರಗಳ ಸೃಷ್ಟಿ ಕೃತಿಯಿಂದ ಕೃತಿಗೆ ವೈಶಿಷ್ಟ್ಯಪೂರ್ಣವಾಗಿ ಚಿತ್ರಿಸಲ್ಪಟ್ಟಿವೆ. ಇವರ ಕಾದಂಬರಿಗಳ ಬಹುತೇಕ ಪಾತ್ರಗಳು ತಮ್ಮಲ್ಲಿನ ತ್ಯಾಗ, ಉದಾರಗುಣಗಳಿಂದ ಓದುಗರ ಮೆಚ್ಚುಗೆ ಗಳಿಸುತ್ತವೆ. ಉದಾ: 'ಹಂಸಗೀತೆಯ' ಚಂದ್ರಸಾನಿ, ಶಿವನಂಜೇಗೌಡ(ಚಂದವಳ್ಳಿಯ ತೋಟ) ತಮ್ಮ ತ್ಯಾಗ ಔದಾರ್ಯ ಮತ್ತು ದುರಂತಗಳಿಂದ ಓದುಗರ ಗಮನ ಸೆಳೆಯುತ್ತವೆ. ಅಲ್ಲದೆ ಪ್ರಭಾವತಿ (ಬಿಡುಗಡೆಯಬೇಡಿ) ಅಕ್ಕಮ್ಮ (ಅಕ್ಕಮ್ಮನ ಭಾಗ್ಯ) ಸುನಂದೆ (ಗಾಳಿಮಾತು).

ಚಾಮಯ್ಯ ಮೇಷ್ಟ್ರು (ನಾಗರಹಾವು) ಇವರೆಲ್ಲ ನಮ್ಮ ಕಣ್ಣೆದುರಿನಲ್ಲಿ ನಮ್ಮೊಂದಿಗಿನ ಪಾತ್ರಗಳಾಗಿಬಿಡುತ್ತವೆ. ಈ ರೀತಿಯ ಪಾತ್ರಸೃಷ್ಟಿ ಅವರ ಕಾದಂಬರಿಗಳ ಯಶಸ್ಸಿಗೂ ಕಾರಣವಾಗುತ್ತದೆ. ಈ ತರಹದ ಗುಣ ಉಳಿದ ಪ್ರಗತಿಶೀಲ ಲೇಖಕರಲ್ಲಿ ಅಪರೂಪವೇ. ಇಂತಹ ಜೀವಂತಿಕೆಯ ಪಾತ್ರ ಸೃಷ್ಟಿಯನ್ನು ನಿರಂಜನ ಅವರಲ್ಲಿ ಗುರುತಿಸಬಹುದು. ಉದಾ: ಚಿರುಕುಂಡ, ಅಪ್ಪು, ಮಾಸ್ತರು, ಮುಂತಾದ ಪಾತ್ರಗಳು ಓದುಗರನ್ನು ಚಿಂತನೆಗೆ ತೊಡಗಿಸುತ್ತವೆ. ಆದರೆ

ತ.ರಾ.ಸು. ಅವರ ಕಾದಂಬರಿಗಳಲ್ಲಿ ಇಂತಹ ಶಿಸ್ತು, ಸಂಯಮ ಕಡಿಮೆಯೆಂದು ಹೇಳಬಹುದು. ಉಸಿರು ಬಿಗಿಹಿಡಿದು ಓದುವಂತಹ ಪಾತ್ರಗಳು ಮತ್ತು ಸನ್ನಿವೇಶಗಳು ತ.ರಾ.ಸು. ಅವರ ಕಾದಂಬರಿಗಳಲ್ಲಿ ಕಂಡುಬರುತ್ತವೆ. ಯಾವುದೇ ರೀತಿಯ ಭದ್ರವಾದ ನೆಲೆಗಟ್ಟು ಇಲ್ಲದ ಇಂತಹ ಪಾತ್ರ ಮತ್ತು ಸನ್ನಿವೇಶಗಳು ಎಷ್ಟೋ ಸಂದರ್ಭದಲ್ಲಿ ಕಾದಂಬರಿಯ ಸೋಲಿಗೆ ಹಾಗೂ ಬರಹಗಾರನ ಮಿತಿಗೂ ಕಾರಣವಾಗುತ್ತವೆ. ಅವಸರದ ಬರವಣಿಗೆಗೂ ಕಾರಣವಾಗಬಹುದು. ತ.ರಾ.ಸು. ಅವರ ಕಾದಂಬರಿಗಳಲ್ಲಿನ ವೈವಿಧ್ಯವಾದ ಪಾತ್ರಗಳ ರಚನೆ ಅವರ ಪ್ರತಿಭೆಗೆ ಸಾಕ್ಷಿಯಾಗುತ್ತವೆ.

ಸಮಾಜವೊಂದರ ಅನೇಕ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುವ ತ.ರಾ.ಸು. ಅವರ ಸೃಷ್ಟಿ ಅಪರೂಪವಾದದ್ದೆ. ಎಂಜಲೆಲೆಯಲ್ಲಿನ ಅನ್ನಕ್ಕಾಗಿ ಪರದಾಡುವ ಭಿಕ್ಷುಕರು, ವೇಶ್ಯೆಯರ ದಾರುಣ ಬದುಕು, ಸಂಗೀತ ಕಲಿಯಲು ಪಡುವ ಕಷ್ಟ, ಬಿಡುಗಡೆಗಾಗಿ ಹಂಬಲಿಸುವ ಹೆಣ್ಣು, ಕಾಮ-ಪ್ರೇಮಗಳ ತೊಳಲಾಟದಲ್ಲಿನ ಗಂಡು-ಹೆಣ್ಣುಗಳು ಹೀಗಾಗಿ ನೂರಾರು ಪಾತ್ರಗಳು, ನೂರಾರು ಸಮಸ್ಯೆಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಯಾವುದೇ ಘಟನೆಯಾಗಲಿ, ವಸ್ತುವಾಗಲಿ ಪಾತ್ರವಾಗಲಿ ಅದನ್ನು ಕಾದಂಬರಿಯನ್ನಾಗಿಸುವ ಕಲೆ ತ.ರಾ.ಸು. ಅವರಿಗೆ ಸಿದ್ಧಿಸಿತ್ತು. ಇಂತಹ ಕಡೆಗಳಲ್ಲಿ ಅ.ನ.ಕೃ. ಅವರನ್ನು ಮೀರಿಸಿದ್ದಾರೆ. ತಮ್ಮ ಕೃತಿಗಳಲ್ಲಿ ಸುಪ್ತಮನೋಲಹರಿ, ಲೈಂಗಿಕ ಮನೋಧರ್ಮದ ಅಂಶಗಳನ್ನು ಪ್ರಯೋಗಕ್ಕಾಗಿ ಬಳಸಿದ್ದರೂ ಅವು ಯಶಸ್ವಿ ಕೃತಿಗಳಾದವು.

ತ.ರಾ.ಸು ಅವರು ಅ.ನ.ಕೃ ಅವರಿಂದ ಪ್ರಭಾವಿತರಾಗಿದ್ದಾರೆ. "ನನ್ನ ಗುರು ನನ್ನ ಬರಹಗಳಿಗೆ ಪ್ರೇರಕ ಅ.ನ.ಕೃ. ಎಂದು ಸ್ವತಃ ತ.ರಾ.ಸು.ಅವರೇ ಹೇಳಿಕೊಂಡಿದ್ದಾರೆ. ಪ್ರಗತಿಶೀಲ ಬರಹಗಾರರಲ್ಲಿ ತುಂಬಾ ವಿಶಿಷ್ಟವಾದ ಕಾದಂಬರಿಕಾರರು."[೩೭] ಕೆಲವೊಮ್ಮೆ ಗೊಡ್ಡು ಸಂಪ್ರದಾಯವಾದಿಯಾಗಿ, ಕೆಲವೊಮ್ಮೆ ಪ್ರತಿಗಾಮಿಯೂ ಆಗಬಲ್ಲರು. ಅವರಲ್ಲಿ ಸುಸಂಬದ್ಧವಾದ ದೃಷ್ಟಿ ಕಡಿಮೆ ಎನ್ನುವ ನಿರಂಜನ ಅವರ ಮಾತು ತ.ರಾ.ಸು.ಅವರ ಕಾದಂಬರಿಗಳಲ್ಲಿನ ಮಿತಿಯನ್ನು ತಿಳಿಸುತ್ತದೆ. 'ಮೊದಲನೋಟ', 'ಶ್ರೀಚಕ್ರೇಶ್ವರಿ' ಯಂಥ ಕಾದಂಬರಿಗಳು ಬರಿ ದೇವರು ಮತ್ತು ಧರ್ಮದ ವಿಷಯಕ್ಕಷ್ಟೆ ಸೀಮಿತವಾಗದೆ, ಆಯಾ ಸಾಮಾಜಿಕ ಸಂದರ್ಭದಲ್ಲಿ ದೇವರು ಮತ್ತು ಧರ್ಮದ ವಿಷಯದ ಬಗ್ಗೆ ಚರ್ಚೆಮಾಡುವ, ವಿಶ್ಲೇಷಿಸುವ, ವಿಮರ್ಶಿಸುವ ಕೃತಿಗಳೂ ಆಗಿಬಿಡುತ್ತವೆ. ಕೆಲವೊಮ್ಮೆ ಓದುಗರನ್ನೂ ಭಕ್ತರನ್ನೂ ಬೆಸೆಯುವ ಪಾತ್ರಗಳಾಗುತ್ತವೆ.

ಸಾಮಾಜಿಕ ಸಮಸ್ಯೆಯಾದ ವೇಶ್ಯಾಸಮಸ್ಯೆಯನ್ನು ಚಿತ್ರಿಸಿದ ಪ್ರಗತಿಶೀಲರಲ್ಲಿ ಅ.ನ.ಕೃ. ಕಟ್ಟೀಮನಿಯವರಲ್ಲಿ ವೇಶ್ಯೆಯರ ರಂಜನೀಯ ಬದುಕನ್ನ, ಹಣಕ್ಕಾಗಿಯೇ ತಮ್ಮ ಮೈ ಮಾರಾಟ ಮಾಡುವ ವೇಶ್ಯೆಯರನ್ನ ಕುರಿತು ಚಿತ್ರಿಸಿದರೆ, ತ.ರಾ.ಸು ಅವರು ಇವರಿಗಿಂತ ಭಿನ್ನವಾಗಿ ಈ ಸಮಸ್ಯೆ ಚಿತ್ರಿಸಿದ್ದಾರೆ. ಈ ವೃತ್ತಿಗೆ ಬರಿ ಸ್ತ್ರೀಯರಷ್ಟೆ ಕಾರಣವಲ್ಲ, ಪುರುಷನೂ ಇದಕ್ಕೆ ಸಹಕಾರಿಯಾಗಬಲ್ಲನೆಂಬುದನ್ನು. ಈ ಸಮಸ್ಯೆಗೆ ಕಾರಣಗಳು, ಸಮಸ್ಯೆಗೆ ಪರಿಹಾರದ

ಮಾರ್ಗಗಳಾವುವು ಎಂಬುದನ್ನು ತಮ್ಮ ಬರಹಗಳಲ್ಲಿ ಮೂಡಿಸಿದ್ದಾರೆ. ಈ ದೃಷ್ಟಿಯಲ್ಲಿ ತ.ರಾ.ಸು ಪ್ರಗತಿಶೀಲ ಬರಹಗಾರರಲ್ಲಿಯೇ ವಿಶಿಷ್ಟರೆನಿಸುತ್ತಾರೆ. ತೀಕ್ಷ್ಣವಾದ ಶೈಲಿ ಬಳಸುವುದರ ಮೂಲಕ ಓದುಗರ ಭಾವನೆಗಳನ್ನೂ ಸೆರೆಹಿಡಿದಿದ್ದಾರೆ.

ಇವರ ಐತಿಹಾಸಿಕ ಕಾದಂಬರಿಗಳಲ್ಲಿನ ಮಹಿಳೆಯರಂತೂ ಹೋರಾಟದ, ಕೆಚ್ಚೆದೆಯ, ತ್ಯಾಗಮಯಿಗಳಾದ ಮಹಿಳೆಯರು. ಇಲ್ಲಿನ ನಾಗತಿಯರು ಉತ್ತರಾಧಿಕಾರತ್ವಕ್ಕಾಗಿ ಸದಾ ದಳವಾಯಿಗಳ ಜೊತೆ ಸಂಘರ್ಷ ಮಾಡಿಕೊಂಡೇ ಬರುತ್ತಾರೆ. ಗಂಡುಮೆಟ್ಟಿನ ನಾಡು ದುರ್ಗದ ಪಾಳೆಯಗಾರರಿಗೆ ಸದಾ ಬೆಂಗಾವಲಾಗಿ ನಿಲ್ಲುವ ನಾಗತಿಯರು ಐತಿಹಾಸಿಕ ಕಾದಂಬರಿಗಳಲ್ಲಿ ಕಂಡು ಬರುತ್ತಾರೆ. ಅಲ್ಲದೆ ಹೊಯ್ಸಳರ, ಚಾಲುಕ್ಯರ ಆಡಳಿತದಲ್ಲಿ ಹೆಣ್ಣಾದವಳು, ರಾಜಮನೆತನಗಳು ವಿವಾಹದ ಮೂಲಕ ಶಾಶ್ವತವಾದ ಸಂಬಂಧ ಕುದುರಿಸುವದಕ್ಕೆ ಸಹಕಾರಿಯಾಗಿದ್ದಾಳೆ. ಇಂತಹ ಕಡೆ ತ.ರಾ.ಸು ಧೀರೋದಾತ್ತ ಸ್ತ್ರೀ ಪಾತ್ರಗಳನ್ನು ಸೃಷ್ಟಿಸಿದ್ದಾರೆ. ಅಲ್ಲದೆ ತಮ್ಮ ಪೌರಾಣಿಕ ಕಾದಂಬರಿಗಳಲ್ಲಿ ವೇದ, ಉಪನಿಷತ್‌ನ ಪರಿಚಯದ ಜೊತೆಗೆ ತುಂಬಾ ವಿಶಿಷ್ಟವಾದ ಶ್ರೇಷ್ಟವಾದ ಬ್ರಹ್ಮಜ್ಞಾನ ಸಂಪಾದನೆಗಾಗಿ ಹಾತೊರೆಯುವ ನಚಿಕೇತ ಮತ್ತು ವಾಜಶ್ರವಸ್ (ಜಾಬಾಲಿ ಮುನಿ) ಬಾಲಕರ ಪಾತ್ರ ಚಿತ್ರಣ ಜೊತೆಗೆ ಋಷಿ ಮುನಿಗಳ ಕೋಪ ಮತ್ತು ಅವರ ತಪಸ್ಸಿನ ಶಕ್ತಿಯ ಮುಂದೆ ತೀರಾ ಕುಬ್ಜವಾಗಿ ಕಾಣುವ ಸ್ತ್ರೀ ಪಾತ್ರಗಳ ಸೃಷ್ಟಿಯಲ್ಲಿ ತ.ರಾ.ಸು ಅವರು ಪ್ರಗತಿಶೀಲರಲ್ಲಿಯೇ ತುಂಬಾ ವೈಶಿಷ್ಟ್ಯಪೂರ್ಣವಾದ ಬರಹಗಾರರಾಗಿ ಕಂಡುಬರುತ್ತಾರೆ. ಹೀಗೆ ನನ್ನ ಸಂಶೋಧನೆಯ ಮಿತಿಯಲ್ಲಿ ಪ್ರಗತಿಶೀಲ ಸಂದರ್ಭದಲ್ಲಿನ ಬೇರೆ ಬರಹಗಾರರಿಗಿಂತ ತ.ರಾ.ಸು ಅವರು ವೈಶಿಷ್ಟ್ಯಪೂರ್ಣವಾದ ಬರಹಗಾರರೆಂಬುದನ್ನು ಗುರುತಿಸುವ ಪ್ರಯತ್ನ ಮಾಡಿದ್ದೇನೆ.

## ಅಡಿ ಟಿಪ್ಪಣಿಗಳು :

೧. ರಾಘವೇಂದ್ರ ರಾವ್. ಹೆಚ್.ಎಸ್. : ಪ್ರಗತಿಶೀಲತೆ, ಪುಟ–೧೦

೨. ರಾಘವೇಂದ್ರ ರಾವ್. ಹೆಚ್.ಎಸ್. : ಪ್ರಗತಿಶೀಲತೆ, ಪುಟ–೧೦

೩. ಶಿವರುದ್ರಪ್ಪ.ಜಿ.ಎಸ್ : ಪ್ರತಿಕ್ರಿಯೆ ಪುಟ–೬೫

೪. ಶಿವರುದ್ರಪ್ಪ.ಜಿ.ಎಸ್ : ಸಾಹಿತ್ಯ ಮತ್ತು ಸಾಮಾಜಿಕ ನಿಲುವುಗಳು, ಪುಟ– ೭೩

೫. ಶಿವರುದ್ರಪ್ಪ.ಜಿ.ಎಸ್ : ಸಾಹಿತ್ಯ ಮತ್ತು ಸಾಮಾಜಿಕ ನಿಲುವುಗಳು,
ಪುಟ–೭೪

೬. ಕೃಷ್ಣರಾಯ ಅ.ನ. : ಸಜೀವ ಸಾಹಿತ್ಯ,
ಪುಟ–೮೧

೭. ಮೂರ್ತಿರಾವ್.ಎ.ಎನ್ : ಸಾಹಿತ್ಯ ಮತ್ತು ಸತ್ಯ
ಪುಟ–೧೩೩

೮. ಅಶೋಕ.ಟಿ.ಪಿ : ವಾಸ್ತವತಾವಾದ,ಕನ್ನಡ ಸಾಹಿತ್ಯ
ಪುಟ–೧೨

೯. ಮಾಸ್ತಿ ವೆಂಕಟೇಶ್ ಅಯ್ಯಂಗಾರ್ : ಪ್ರಸಂಗ ಭಾಗ–೦೧,
ಪುಟ–೩೩

೧೦. ಮಾಸ್ತಿ ವೆಂಕಟೇಶ್ ಅಯ್ಯಂಗಾರ್ : ಪ್ರಸಂಗ ಭಾಗ–೦೧
ಪುಟ ೩೪

೧೧. ಮುಗಳಿ.ರಂ.ಶ್ರೀ : ಕನ್ನಡ ಸಾಹಿತ್ಯ ಚರಿತ್ರೆ
ಪುಟ ೧೩೫

೧೨. ಶಿವರುದ್ರಪ್ಪ.ಜಿ.ಎಸ್. ಸಂಪಾದಕ : ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ,
ಪುಟ ೨೬

೧೩. ಅದೇ : ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ,
ಪುಟ ೨೯

೧೪. ಅದೇ : ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ,
ಪುಟ ೩೮

೧೫. ಕೃಷ್ಣರಾಯ.ಅ.ನ. ಸಂಪಾದಕ : ಪ್ರಗತಿಶೀಲ ಸಾಹಿತ್ಯ
ಪುಟ ೬೫

೧೬. ಶೇಷಗಿರಿ ರಾವ್.ಎಲ್.ಎಸ್. : ಒಂದು ಸ್ವರ್ಣ ಮಹೋತ್ಸವ (ಸಹಚಿಂತನ)
ಪುಟ ೨೬

ಉದೃತ : ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳು
ಪುಟ ೫೭

೧೭. ಕೃಷ್ಣರಾಯ.ಅ.ನ. ಸಂಪಾದಕ : ಪ್ರಗತಿಶೀಲ ಲೇಖಕರ ಸಂಘ, ಬೆಂಗಳೂರು.
ಪುಟ ೫೭

ಉದ್ಧೃತ : ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳು
ಪುಟ ೫೭

೧೮. ಕೃಷ್ಣರಾಯ.ಶಾ.ಮಂ.ಸಂಪಾದಕ : ರಸಚೇತನ,
ಪುಟ ೨೦೬

೧೯. ಕೃಷ್ಣರಾಯ.ಅ.ನ. : ನನ್ನನ್ನು ನಾನೆ ಕಂಡೆ
ಪುಟ ೪೪

೨೦. ಕೃಷ್ಣರಾಯ.ಅ.ನ.( ಸಂಪಾದಕ) : ಪ್ರಗತಿಶೀಲ ಸಾಹಿತ್ಯ
ಪುಟ ೭

೨೧. ಸುಬ್ಬರಾವ್.ತ.ರಾ. : ಪ್ರಗತಿಶೀಲ ಸಾಹಿತ್ಯ ಭಾಷಣ ಮಾಲೆ
ಕನ್ನಡ ನುಡಿ, ಸಂಪುಟ ೬, ಸಂಚಿಕೆ ೪೨ ಆಗಸ್ಟ್
೧೯೪೪

ಉದ್ಧೃತ : ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳು
ಪುಟ ೫೭

೨೨. ನಾಗರಾಜಪ್ಪ.ಕೆ.ಜಿ.( ಸಂಪಾದಕ) : ಸಾಹಿತ್ಯ ಮತ್ತು ಸಾಮಾಜಿಕ ನಿಲುವುಗಳು,
ಪುಟ ೭೩

೨೩. ಅದೇ : ಸಾಹಿತ್ಯ ಮತ್ತು ಸಾಮಾಜಿಕ ನಿಲುವುಗಳು,
ಪುಟ ೭೩

೨೪. ಗೋಕಾಕ.ವಿ.ಕೃ. : ಸಾಹಿತ್ಯದಲ್ಲಿ ಪ್ರಗತಿ
ಕನ್ನಡ ನುಡಿ, ಸಂಪುಟ ೭, ಸಂ.೬,೮,೯ ನವೆಂಬರ್
೧೭, ೧೯೮೮

ಉದ್ಧೃತ : ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳು
ಹೆಚ್.ಆರ್. ಕೋಮಲವಲ್ಲಿ ಒಂದು ಅಧ್ಯಯನ, ಪುಟ ೫೭

ಕೋಮಲವಲ್ಲಿ ಹೆಚ್.ಆರ್. : ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳು
ಒಂದು ಅಧ್ಯಯನ, (ಅಪ್ರಕಟಿತ ಪ್ರಬಂಧ)
(ಪುಟ ೬೩)

೨೫. ದೇ.ಜ.ಗೌ, ಸಿ.ಪಿ.ಕೆ( ಸಂ.) : ಕಟ್ಟೀಮನಿ ಬದುಕುಬರಹ, ಪುಟ ೧೯೨೦

೨೬. ನಿರಂಜನ : ಬುದ್ಧಿ ಭಾವ ಬದುಕು
ಪುಟ ೧೬

೨೭. ಶೇಷಾಗಿರಿರಾವ್.ಎಲ್.ಎಸ್ : ಹೊಸಗನ್ನಡ ಸಾಹಿತ್ಯ ಚರಿತ್ರೆ, ಪುಟ ೬೫

೨೮. ಕೃಷ್ಣರಾಯ.ಶಾ.ಮಂ.( ಸಂ). : ತ.ರಾ.ಸು ಬದುಕು ಬರಹ
ಪುಟ ೧೨

೨೯. ಮದನ್ ಲಾಲ್ 'ಮಧು' : ಗೋರ್ಕಿ ಮತ್ತು ಪ್ರೇಮ್‌ಚಂದ್‌ಎರಡು
ಅಮರ ಪ್ರತಿಭೆಗಳು, ಪುಟ ೩

೩೦. ಶ್ರೀಶೈಲ್ಯ ಆರಾಧ್ಯ.ಹೆಚ್. (ಸಂ). : ಗಿರಿಮಲ್ಲಿಗೆ, ಪುಟ ೨೫೭

೩೧. ಶ್ರೀಕಂಠ ಕೂಡಿಗೆ (ಪ್ರ.ಸಂ.) : ಹೊಸಗನ್ನಡ ಕಥಸಾಹಿತ್ಯ –೨
ಪುಟ ೧೮೭

೩೨. ನರಹಳ್ಳಿ ಬಾಲಸುಬ್ರಹ್ಮಣ್ಯ : ಅ.ನ.ಕೃ ಮತ್ತು ಕನ್ನಡ ಸಂಸ್ಕೃತಿ,
ಪುಟ ೧೧

೩೩. ನಾಯಕ ಹಾ.ಮಾ : ಸಮೀಕ್ಷೆ, ಪುಟ ೩೫

೩೪. ಬಸವರಾಜ ಕಟ್ಟೀಮನಿ : ಜ್ವಾಲಾಮುಖಿಯ ಮೇಲೆ, ಕಾದಂಬರಿ ಮುನ್ನುಡಿ

೩೫. ನಿರಂಜನ : ಬುದ್ಧಿ ಭಾವ ಬದುಕು, ಪುಟ ೨೦೬

೩೬. ದೇ.ಜ.ಗೌ.(ಸಂ.) ಸಿ.ಪಿ.ಕೆ : ಕಟ್ಟೀಮನಿ ಬದುಕು ಬರಹ.
ಪುಟ.೧೮೬.

೩೭. ಶೇಷಗಿರಿರಾವ್.ಎಲ್.ಎಸ್ : ಹೊಸಗನ್ನಡ ಸಾಹಿತ್ಯ
ಪುಟ.೧೮೧

# ಅಧ್ಯಾಯ.೩
# ಸ್ತ್ರೀಪ್ರಧಾನ ಕನ್ನಡ ಕಾದಂಬರಿಗಳ ಅಧ್ಯಯನ

## ೩.೧ ಇಂದಿರಾಬಾಯಿ, ವಾಗ್ದೇವಿ, ಮಾಡಿದ್ದುಣ್ಣೋ ಮಹಾರಾಯ :

ಕನ್ನಡದಲ್ಲಿ ಮೊದಲ ಸ್ವತಂತ್ರ ಸಾಮಾಜಿಕ ಕಾದಂಬರಿ ಎಂದು ಗುರುತಿಸಲಾಗಿರುವ 'ಇಂದಿರಾಬಾಯಿ'(ಸದ್ಧರ್ಮ ವಿಜಯ) ಕೃತಿ ತನ್ನದೇ ಆದ ಕಾರಣಗಳಿಂದ ಗಮನಾರ್ಹ ಕೃತಿಯಾಗಿದೆ. ಇದು ನಮ್ಮ ಸಮಾಜದ ಸಂದರ್ಭವನ್ನು ಗಂಭೀರವಾಗಿ ತೆರೆದಿಡುವ ಕೃತಿಯಾಗಿದೆ. ಪರಂಪರಾನುಗತವಾಗಿ ನಡೆದುಕೊಂಡು ಬಂದ ಧಾರ್ಮಿಕ ವಿಧಿ ವಿಧಾನ, ಕಟ್ಟುಕಟ್ಟಳೆಗಳನ್ನು ಅನುಸರಿಸುವ ಹಿರಿಯರ ಢಾಂಭಿಕತೆ, ಸನಾತನ ಸಮಾಜದಲ್ಲದ್ದ ದುಷ್ಟಪದ್ಧತಿಗಳನ್ನು ದೂರಮಾಡಲೋಸುಗ ಕಾದಂಬರಿ ರಚನೆಯಾದಂತಿದೆ. 'ಇಂದಿರಾಬಾಯಿ' ಕೃತಿಯಲ್ಲಿ ಭೀಮರಾಯ-ಅಂಬಾಬಾಯಿ ಅವರ ಕಥೆಯೇ ಹೆಚ್ಚಾಗಿದ್ದು ಪುನರ್ವಿವಾಹದ ಕಥೆ ಅಷ್ಟೊಂದು ಪುಟಗಳನ್ನು ಪಡೆದಿಲ್ಲ.ಕಾರಣ ಪುನರ್ವಿವಾಹ ಅಂದು ಸುಲಭ ಸಾಧ್ಯವೇನೂ ಆಗಿರಲಿಲ್ಲ. ವಿಧವೆಯೊಬ್ಬಳಿಗೆ ವಿವಾಹಮಾಡುವ ವಿಚಾರವೇ ಕಾದಂಬರಿಯಲ್ಲಿ ಮುಖ್ಯವಾಗಿಬಿಟ್ಟರೆ ಕೃತಿಯು ಓದುಗರಿಂದ ದೂರ ಉಳಿಯುತ್ತದೆ ಎಂಬ ಬಹಳ ದೊಡ್ಡ ಭಯವೂ ಕಾದಂಬರಿಕಾರರಿಗೆ ಕಾಡಿದಂತಿದೆ. ಧಾರ್ಮಿಕ ವಿಧಿ ವಿಧಾನಗಳು ಬಲಾಢ್ಯವಾಗಿ ನಮ್ಮ ಸಮಾಜವನ್ನು ಸಿಲುಕಿದ್ದವು. ಹೀಗಾಗಿ ಸಮಾಜದಲ್ಲಿರುವ ಅನಿಷ್ಠ ಪದ್ಧತಿಗಳನ್ನು ದೂರ ಮಾಡುವ ಸಲುವಾಗಿ ಕಾದಂಬರಿ ರಚನೆಯಾಗಿದೆ. ಇದೊಂದು ಮಹತ್ವದ ಕಾಳಜಿಯಾಗಿದೆ. ಇಂದು ಈ ತೆರನಾದ ಕಾದಂಬರಿ ಬರೆಯುವುದು ಬಹಳ ಸುಲಭ.ಆದರೆ ಅಂದು ಈ ತೆರನಾದ ವಸ್ತುವೊಂದನ್ನು ಯೋಚಿಸುವುದೂ ಕೂಡ ಸಾಧ್ಯವಿರಲಿಲ್ಲ. ನಮ್ಮ ಸಮಾಜ ಎಷ್ಟು ಕ್ರೂರವಾಗಿದೆ ಎಂಬುದನ್ನು ಚಿತ್ರಿಸುವಲ್ಲಿ ಈ ಕಾದಂಬರಿ ಯಶಸ್ವಿಯಾಗಿದೆ ಎಂದೇ ನನ್ನ ಭಾವನೆ. ಈ ಕಾದಂಬರಿ ಒಟ್ಟು ೬೨ ಅಧ್ಯಾಯಗಳನ್ನು ಒಳಗೊಂಡಿದೆ. ಕಾದಂಬರಿಯ ಮುಖ್ಯ ಸಂಗತಿಗಳನ್ನು ಹೀಗೆ ಸಂಗ್ರಹಿಸಬಹುದು.

೧. ಭೀಮರಾಯ ಅಂಬಾಬಾಯಿಯಿಂದ ಪ್ರಭಾವಿತನಾಗಿ ಆಸೆಯ ಕಾರಣದಿಂದ ಸುಂದರರಾಯನಿಗೆ ವಿಷಪ್ರಾಸನ ಮಾಡಿಸಿ ಹೇಗಾದರೂಮಾಡಿ ಸಮಾಜದಲ್ಲಿ ಉನ್ನತ ಸ್ಥಾನಗಳಿಸುವ ಕಥೆ.

೨. ಇಂದಿರಾಬಾಯಿಯನ್ನು ಸಾಂಪ್ರದಾಯಿಕತೆಯಂತೆ ವಿವಾಹ ಮಾಡಿಸುವ ಪ್ರಸಂಗ.

೩.	ಸುಂದರರಾಯನ ಮಗನಾದ ಭಾಸ್ಕರರಾಯ ಸ್ವದೇಶದಲ್ಲಿ ವಿದ್ಯಾಭ್ಯಾಸ ಮಾಡುವ ವಿವರ ಹಾಗೂ ಲಂಡನ್ಗೆ ಉನ್ನತ ವಿದ್ಯಾಭ್ಯಾಸಕ್ಕಾಗಿ ಹೋಗಿ ಸ್ವದೇಶಕ್ಕೆ ಬಂದು ಕಲೆಕ್ಟರಾಗುವ ಸಂಗತಿ.

೪.	ಇಂದಿರಾ ಮದುವೆಯಾಗಿ ಕೆಲವೇ ದಿನಗಳಲ್ಲಿ ಗಂಡನನ್ನು ಕಳೆದುಕೊಂಡು ತೌರು ಮನೆ ಸೇರುವ ಪ್ರಸಂಗ.

೫.	ಸುಂದರರಾಯ-ಇಂದಿರಾ ಇವರ ಮರುವಿವಾಹದ ಸಂದರ್ಭ.

ಇವಿಷ್ಟು ವಿಚಾರಗಳು ಕಾದಂಬರಿಯನ್ನು ರಚಿಸಲು ಮುಖ್ಯವಾಗಿರುವ ಸನ್ನಿವೇಶಗಳು. ಕಾದಂಬರಿ ಪ್ರಧಾನವಾಗಿ ಸ್ತ್ರೀಪರ ದೃಷ್ಟಿಕೋನವನ್ನು ಹೇಗೆ ಪ್ರತಿನಿಧಿಸುತ್ತದೆ ಎಂಬುದನ್ನು ಚರ್ಚಿಸುವುದು ಈ ಅಧ್ಯಾಯದ ಮುಖ್ಯ ವಿಷಯವಾಗಿದೆ. ಕಾದಂಬರಿಯ ಸಂದರ್ಭದಲ್ಲಿ ಮನರಂಜನೆಗಿಂತ ಮನ:ಪರಿವರ್ತನೆ ಮುಖ್ಯ ಎಂಬ ಮಾತು ಮಹತ್ವವನ್ನು ಪಡೆಯುತ್ತದೆ. ಇದು ಕಾದಂಬರಿಯ ಗೆಲುವೂ ಆಗಿದೆ. ಕಾದಂಬರಿಕಾರರು ಕಾದಂಬರಿಯಲ್ಲಿ " ಸತ್ಯತೆ ಹೃದಯ ನಿರ್ಮಲತೆ ಇವೆರಡು ಸಾಧನಗಳೇ ನಮಗೆ ಇಹಪರದಲ್ಲಿಯೂ ಸಾರ್ಥಕಗಳಾಗಿವೆ. ಇವುಗಳನ್ನು ಬಿಟ್ಟು ಸರ್ವ ಪ್ರಯತ್ನಗಳೂ ನಿರರ್ಥಕವೇ. ಇದನ್ನು ಸಾದೃಶ್ಯಗೊಳಿಸುವುದೇ ಈ ಪುಸ್ತಕದ ಉದ್ದೇಶ" ಎಂದು ಹೇಳಿರುವ ಮಾತುಗಳು ಗಮನಾರ್ಹ. ಮನದ ಪರಿವರ್ತನೆ ಮುಖ್ಯ ವಾಗಿದೆ. ಕಾದಂಬರಿಯಲ್ಲಿ ಬರುವ ಅಂಬಾಬಾಯಿಯದು ಪ್ರಧಾನ ಪಾತ್ರವಾಗಿದೆ. "ಪರಂತು ಭೀಮರಾಯನು ಯಾವುದೊಂದು ವಿಷಯವನ್ನಾದರೂ ತನ್ನ ಪತ್ನಿಯೊಡನೆ ಆಲೋಚಿಸದೆ ತೀರ್ಮಾನಿಸಿದ್ದಿಲ್ಲ"[೭] (ಪುಟ.೫) ಎಂಬ ಮಾತನ್ನು ಗಮನಿಸಿದರೆ ಸ್ತ್ರೀಪ್ರಾಬಲ್ಯ ಕಾದಂಬರಿಯ ಪ್ರಾರಂಭದಲ್ಲಿಯೇ ಕಾಣುತ್ತದೆ. ಅವರು ಒಳ್ಳೆಯ ಅಥವಾ ಕೆಟ್ಟದ್ದೇನಾದರೂ ಆಲೋಚಿಸಲಿ ಇಲ್ಲಿ ಸ್ತ್ರೀಪರ ದೃಷ್ಟಿಕೋನವೊಂದು ಇಲ್ಲವೆಂದು ಹೇಳಲಿಕ್ಕಾಗದು. ಇಂದಿರಾಬಾಯಿ ವಿಠಲರಾಯನೊಂದಿಗೆ ವಿವಾಹವಾಗಿರುತ್ತಾಳೆ. ವಿಠಲರಾಯ ಸೂಳೆಯೊಬ್ಬಳ ಮನೆಯಲ್ಲಿ ಸಾವನ್ನಪ್ಪುತ್ತಾನೆ. ಆನಂತರ ವಿಧವೆಯಾದವಳು ಹೀಗೆ ಇರಬೇಕು ಎಂದು ಹೇಳುವ ತಾಯಿಯ ಮಾತುಗಳು ಗಮನಾರ್ಹ. ಕಾದಂಬರಿಯಲ್ಲಿ ಬರುವ ಕೆಲವು ಪ್ರಸಂಗಗಳನ್ನು ಗಮನಿಸಿದರೆ ಹಿಂದೂ ಸಾಂಪ್ರದಾಯಿಕ ಸಮಾಜ ವಿಧವೆಯೊಬ್ಬಳನ್ನು ಎಷ್ಟು ಕ್ರೂರವಾಗಿ ನಡೆಸಿಕೊಂಡಿತ್ತು ಎಂಬುದನ್ನು ಗಮನದಲ್ಲಿಟ್ಟುಕೊಂಡೇ ಕಾದಂಬರಿಕಾರರು ಕಾದಂಬರಿಯನ್ನು ರಚಿಸಿದ್ದಾರೆಂಬುದು ಗೊತ್ತಾಗುತ್ತದೆ.ಉದಾಹರಣೆಗಾಗಿ ಕೆಲವು ಸಾಲುಗಳನ್ನು ಗಮನಿಸಬಹುದು. ಈ ಸಾಲುಗಳು ಕಾದಂಬರಿ ಸ್ತ್ರೀಪರ ದೃಷ್ಟಿಕೋನವೊಂದನ್ನು ಹೇಗೆ ಪ್ರತಿನಿಧಿಸುತ್ತದೆ ಎಂಬುದು ತಿಳಿಯುತ್ತದೆ.

"ವಿಠಲರಾಯನು ಮೃತನಾದ ಬಳಿಕ ಭೀಮರಾಯನಲ್ಲಿ ಒಂದೆರಡು ತಿಂಗಳ ಪರ್ಯಂತರ ಮನೋವ್ಯಥೆಯಲ್ಲಿಯೂ ದು:ಖದಲ್ಲಿಯೂ ಕಾಲ ಕ್ರಮಣವಾಯಿತು. ಆ ಮೇಲೆ ಭೀಮರಾಯ ಅಂಬಾಬಾಯಿ ಸಹ ಮೆಲ್ಲ ಮೆಲ್ಲನೆ ದು:ಖವನ್ನು ಹೇಗೆ ಮರೆಯುತ್ತಾ ಬಂದರೋ

ಹಾಗೆಯೇ ಬಡ ಇಂದಿರೆಯ ಸಂಕಷ್ಟಗಳು ಹೆಚ್ಚುತ್ತಾ ಬಂದವು. ಇಡೀ ಒಂದು ವರುಷ ಪರ್ಯಂತರ ಯಾರಿಗೂ ಮುಖವನ್ನು ತೋರಿಸಲಿಕ್ಕೂ ಯಾರೊಡನಾದರೂ ಮಾತನಾಡಲಿಕ್ಕೂ ಕೂಡದೆಂಬ ಕಟ್ಟಳೆಗೆ ಅನುಸಾರವಾಗಿ ನಡೆಯುವ ವಿಷಯದಲ್ಲಿ ಹೋಗುತ್ತಾ ಹೋಗುತ್ತಾ ಅವಳ ಮೇಲೆ ಕಠೋರವಾದ ಬಲಾತ್ಕಾರಗಳು ನಡೆದವು. ಈ ಹೊತ್ತು ತಲೆಯನ್ನು ಬಾಚಿಕೊಂಡಳೆಂತಲೂ, ನಾಳೆ ಕಪ್ಪು ಸೀರೆಯನ್ನುಟ್ಟಳೆಂತಲೂ, ಇನ್ನೊಂದು ದಿವಸ ಕುಪ್ಪಸ ತೊಟ್ಟಳೆಂತಲೂ, ಹೀಗೆಲ್ಲ ಆಗಾಗ್ಗೆ ಹಿಂದಿನಿಂದ ಮಾತನಾಡಿ ದ್ರೋಹಿಸಲಿಕ್ಕೆ ಪ್ರಾರಂಭಿಸಿದರು. ಪತಿವಿಯೋಗದ ಮನೋವ್ಯಥೆಯಿಂದಲೂ ದಿನೇ ದಿನೇ ಹೆಚ್ಚುತ್ತಾ ಬರುವ ದ್ರೋಹಗಳಿಂದಲೂ ಬಹಳ ಸಂಕಷ್ಟದಲ್ಲಿರುವಾಗ, ಹೇಗೂ ಸಮಯ ಹೋಗಲೆಂದಾಲೋಚಿಸಿ, ಒಂದಾನೊಂದು ದಿವಸ ಮೈರೆಯನ್ನು ಶಾರದಾಬಾಯಿಯ ಬಳಿಗೆ ಕಳುಹಿಸಿ, "ನೀತಿಕಥೆಗಳು" ಎಂಬ ಪುಸ್ತಕವನ್ನು ತರಿಸಿಕೊಂಡು ಓದುತ್ತಿರುವಾಗ ಅಂಬಾಬಾಯಿ ಕಂಡು,

"ಇಂದಿರೇ, ಏನವ್ವಾ? ವಿಧಿವಶಾತ್ ಬಂದೊದಗಿದ ಬವಣೆಯೇ ಸಾಲದೇ? ಇನ್ನು ಜಾತಿ ಕೆಡಲಿಕ್ಕೂ ಇದೆಯೇ? ನಮ್ಮ ದುರದೃಷ್ಟದಿಂದ ಬಂದಕಷ್ಟವನ್ನೇ ಸಹಿಸಕೂಡದಿರುವಾಗ ನೀನು ಹೇಳಿದ ಬುದ್ಧಿಯನ್ನು ಕೇಳದೆ ಮನಸ್ವಯಾಗಿ ನಡೆದುಕೊಳ್ಳುತ್ತಿಯಷ್ಟೆ? ಇದೆಲ್ಲ ಊರಲ್ಲಿ ಪ್ರಕಟವಾದರೆ– "ಏನವ್ವಾ? ನಾನೇನು ದುಷ್ಕೃತ್ಯ ಮಾಡಿದೆ?"

ಅದನ್ನೇಕೆ ಹೇಳಲಿ! ನೀನು ಈಗ ಬರೇ ಚಿಕ್ಕ ಮಗುವಲ್ಲ. ಹಿರಿಯರ ಕಟ್ಟಳೆಗೆ ವಿರೋಧವಾಗಿ ನಡೆಯಬಾರದೆಂದು ನಿನಗೆಷ್ಟು ಹೇಳಿದರೂ ನೀನು ತಲೆಬಾಚಿಕೊಳ್ಳುವುದೋ ಕುಪ್ಪಸತೊಡುವುದೋ ಮುಂತಾದ ನಾಚಿಕೆಗೇಡಿನ ಕೆಲಸಗಳನ್ನು ಮಾಡುತ್ತಿದ್ದಿ. ನನ್ನ ಕರ್ಮಾಧೀನದಿಂದಲೇ ನಿನಗೀ ಬುದ್ಧಿ ಬಂದಿದೆ."[೨] (ಪು.೧೫೧–೧೫೨) ಎಬ ಮಾತುಗಳನ್ನು ಗಮನಿಸಬೇಕು.

ಇಂದಿರಾಬಾಯಿ ಕಾದಂಬರಿಯು ಬದುಕುತ್ತಿರುವ ಸ್ಥಿತಿಯನ್ನು ಹೇಳುವುದಲ್ಲದೆ ಹೆಣ್ಣು ಹೆಣ್ಣಿನಿಂದಲೇ ಶೋಷಣೆಗೆ ಒಳಗಾಗುವುದನ್ನು ಕೂಡ ಕಾದಂಬರಿ ಚಿತ್ರಿಸುತ್ತದೆ. ಪುಸ್ತಕವೊಂದನ್ನು ಗೆಳತಿ ಶಾರದೆಯಿಂದ ತಂದು ಓದಿದರೂ ಅದನ್ನು ಆಕ್ಷೇಪಿಸಿ ಅವಳನ್ನು ಅಲ್ಲಗಳೆಯುವುದನ್ನು ಅಂಬಾಬಾಯಿ ಮಾಡುತ್ತಾಳೆ. ಅಂಬಾಬಾಯಿಯ ಆಕ್ಷೇಪಣೆಗೆ ಬಳಸುವ ನುಡಿಗಳೂ ಕಠೋರವಾಗಿವೆ. "ಅದಕ್ಕೆ ಮ್ಲೇಂಛರಾದ ಪಾದ್ರಿಗಳ ಪುಸ್ತಕ ಓದಬೇಕೆ?"[೩] (ಪು.೧೫೩)ಎಂದು ಖಂಡಿಸುತ್ತಾಳೆ.

ಭೀಮರಾಯ ಅಂಬಾಬಾಯಿಯವರ ಕೃತ್ಯಗಳನ್ನು ಈ ಕೃತಿಯಲ್ಲಿ ವಿಶೇಷವಾಗಿ ಗಮನಿಸಬೇಕು. ಅದರಲ್ಲೂ ಭೀಮಾಬಾಯಿಯ ಕೃತ್ಯಗಳಿಗಿಂತಲೂ ಅಂಬಾಬಾಯಿಯ ಕೃತ್ಯಗಳೇ ಗಮನಾರ್ಹ. ಆಕೆಯ ಶೋಷಣೆಯ ನೆಲೆ ಗಮನಿಸಬೇಕು. "ಹುಡುಗಿಗೆ ಮನಸ್ಸಿನಲ್ಲಿ ವೈರಾಗ್ಯ ಹುಟ್ಟುವಂತೆ ಏನಾದರೂ ಒಂದು ಉಪಾಯ ತೆಗೆಯಬೇಡವೆ?" ಎಂದು ಹೇಳುವ ಮಾತಿಗೆ ಸತ್ಯಮಂಡಲಿಯ ಅಧ್ಯಕ್ಷನನ್ನು ಕರೆಸುತ್ತಾನೆ. ಅವನೇ ಇಂದಿರೆಯ ಕೋಣೆಯನ್ನು ಪ್ರವೇಶಿಸಿ

ಮಾನಭಂಗಕ್ಕೆ ಪ್ರಯತ್ನಿಸುತ್ತಾನೆ. ಅಂಬಾಬಾಯಿ ಯೋಚಿಸುವುದೇ ಒಂದು ಇಲ್ಲಿ ಆಗುವುದೇ ಇನ್ನೊಂದಾಗಿದೆ. ಇಂದಿರಾಬಾಯಿ ವಿವಾಹವೂ ಕೂಡ ಬಾಲ್ಯದಲ್ಲಿಯೇ ಅಂದರೆ ಎಂಟು ವರ್ಷಗಳಿರುವಾಗಲೇ ಆಗಿರುತ್ತದೆ. ಹಲಸೂರ ತ್ರಿಯಂಬಕರಾಯನ ಒಬ್ಬನೇ ಮಗ ವಿಠಲರಾಯನೊಂದಿಗೆ. ದುಶ್ಚಟಗಳ ದಾಸನಾದ ವಿಠಲರಾಯ ಸೂಳೆಯೊಬ್ಬಳ ಮನೆಯಲ್ಲಿ ಕೊನೆಯುಸಿರೆಳೆಯುತ್ತಾನೆ. ಕಾದಂಬರಿ ವಿಧವಾ ವಿವಾಹವನ್ನೂ ಕೂಡ ಗಮನಿಸುತ್ತದೆ. ಇಂದಿರೆ ದುರಂತದಿಂದ ಪಾರಾಗಲು ಸಾಧ್ಯವೇ ಇಲ್ಲ ಇನ್ನಿಸುತ್ತದೆ. ಪಾರುಮಾಡಲು ಅಮೃತರಾಯ-ಜಲಜಾಕ್ಷಿಯವರು ಮನಸ್ಸು ಮಾಡುತ್ತಾರೆ. ಅಲ್ಲಿಗೆ ಹೋದ ಮೇಲೆ ಇಂದಿರೆ ಉತ್ತಮ ಸ್ಥಿತಿಯನ್ನು ಕಾಣುತ್ತಾಳೆ. "ವಿದ್ಯೆ ಕಲಿತರೆ ಜಾತಿಗೆಟ್ಟು ದುರ್ನಡತೆಯಲ್ಲಿ ಪ್ರವರ್ತಿಸುತ್ತಾರಂತೆ"(ಪು.೧೯೨) ಎಂದು ಜಲಜಾಕ್ಷಿಯನ್ನು ಕೇಳಿ ಸ್ಪಷ್ಟತೆ ಪಡೆಯುತ್ತಾಳೆ. ಶಿಕ್ಷಣ ಪಡೆಯಲು ಈ ದಂಪತಿಗಳು ಸಹಕಾರ ನೀಡುತ್ತಾರೆ. ಕ್ರಮೇಣ ಭೀಮರಾಯ, ಅಂಬಾಬಾಯಿ ತನಗೆ ತಂದೆ ತಾಯಿಯರೇ ಅಲ್ಲ ಎಂದು ಹೇಳುತ್ತಾರೆ. ಇಷ್ಟು ಕಠೋರವಾಗಿ ಮಗಳನ್ನು ನಡೆಸಿಕೊಳ್ಳಲು ಕಾರಣಗಳೇನು ಕಾದಂಬರಿಯಲ್ಲಿ ದೊರಕುವುದಿಲ್ಲ. ಆದರೆ ಅತಿ ಸಾಂಪ್ರದಾಯಿಕತೆ ಹೀಗೆ ಮಾಡಿರಬಹುದೆಂದು ಊಹೆ ಮಾಡಬಹುದು.

ಒಟ್ಟಾರೆ ಈ ಕಾದಂಬರಿಯು ಆ ಹೊತ್ತಿನ ಜ್ವಲಂತ ಸಮಸ್ಯೆಗಳನ್ನು ತುಂಬ ಮಾರ್ಮಿಕವಾಗಿ ಚರ್ಚಿಸುತ್ತದೆ. ಅದೂ ಸ್ತ್ರೀ ಸಮಸ್ಯೆಗಳನ್ನು ಪ್ರಧಾನ ನೆಲೆಯಲ್ಲಿ ಚರ್ಚಿಸುತ್ತದೆ ಎಂಬುದು ಮಹತ್ವದ ವಿಚಾರವಾಗಿದೆ.

**ಇಂದಿರೆ :**

ಇಂದಿರಾಬಾಯಿ, ಇಂದಿರೆ ಒಂದೇ ಕಾಲಘಟ್ಟದಲ್ಲಿ ರಚನೆಗೊಂಡರೂ ಕಾದಂಬರಿಕಾರರ ದೃಷ್ಟಿಕೋನಗಳು ಮಾತ್ರ ಭಿನ್ನವಾದವುಗಳು. ಇಬ್ಬರೂ ಕಾದಂಬರಿಕಾರರು ಆಧುನಿಕ ಶಿಕ್ಷಣ ಪಡೆದವರೇ ಕೆರೂರು ವಾಸುದೇವಾಚಾರ್ಯರು ಇಂದಿರೆ ಕಾದಂಬರಿಯಲ್ಲಿ ಪ್ರೇಮವಿವಾಹದ ಬಗ್ಗೆ ಚರ್ಚಿಸಿದ್ದಾರೆ. ಇಲ್ಲಿನ ನಾಯಕ ರಮಾಕಾಂತ ಮತ್ತು ನಾಯಕಿ ಇಂದಿರೆಯರ ಪ್ರೇಮ ಮುಖ್ಯವಾದರೂ, ಕಾದಂಬರಿಯುದ್ದಕ್ಕೂ ಓದುಗರ ಗಮನ ಸೆಳೆಯುವ ಪಾತ್ರ ವಿಧವೆ ದೇವಯಾನಿಯದು. ಅನಂತರ ಮುಂದುವರೆದು ಕೆರೂರು ವಾಸುದೇವಾಚಾರ್ಯರು ಸ್ತ್ರೀಸ್ವಾತಂತ್ರ್ಯದ ಬಗ್ಗೆ ಅರ್ಥವತ್ತಾಗಿ ಚರ್ಚಿಸಿದ್ದಾರೆ. ಕಾದಂಬರಿಯಲ್ಲಿ ಕೆರೂರು ಅವರು ಬಾಲ್ಯವಿವಾಹವನ್ನು ವಿರೋಧಿಸುತ್ತಾರೆ. ಆಧುನಿಕ ಶಿಕ್ಷಣ ಪಡೆದಿದ್ದರೂ ವಿಧವಾವಿವಾಹವನ್ನು ಒಪ್ಪಲು ಅವರು ಸಿದ್ಧರಿರಲಿಲ್ಲವೆಂಬುದು ಕಾದಂಬರಿಯಲ್ಲಿ ಧ್ವನಿತವಾಗಿದೆ. ಕಾದಂಬರಿಕಾರರು ವಿದೇಶಿ ಶಿಕ್ಷಣ ಪಡೆದುದ್ದಲ್ಲದೆ ವಿದೇಶಿ ಸಂಸ್ಕೃತಿಯ ವ್ಯಾಮೋಹವುಳ್ಳವರೆ. ಉದಾಹರಣೆಗಾಗಿ: "..ಅಮೇರಿಕೆಯಲ್ಲಿ ರಾಜ್ಯ ಕಾರಭಾರವನ್ನು ನಡೆಸುವ ಅಧ್ಯಕ್ಷನೂ ಊರಿನಲ್ಲಿಯ ಕೂಲಿಗಾರನೂ ಸಮಾನ ಯೋಗ್ಯತೆಯವರಂತೆ. ಅಮೇರಿಕೆಗಾದರೂ ಹೋಗಿಬಿಡಬೇಕು. ಅಲ್ಲಿಯ ಜನರು ಎಷ್ಟು

ಧನ್ಯರಿರುವರು ನೋಡಿರಿ. ಬಡಿಗನು ಅಧ್ಯಕ್ಷನಾಗಬಲ್ಲನು. ಮೊಚ್ಚೆ ಹೊಲಿಯುವವನು ಪ್ರಧಾನನಾಗಲಭ್ಯಂತರವಿಲ್ಲ" (ಇಂದಿರೆ ಪುಟ.೭೫). ಈ ರೀತಿ ವಿದೇಶದಲ್ಲಿನ ಸಮಾನತೆಯನ್ನು ಕುರಿತು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

'ಇಂದಿರಾಬಾಯಿ' ಅನಂತರ ಬಂದ ಮತ್ತೊಂದು ಮಹತ್ತರವಾದ ಕಾದಂಬರಿ ಎಂದರೆ ಬೋಳಾರ ಬಾಬುರಾಯರ 'ವಾಗ್ದೇವಿ', ೧೯೦೫ರಲ್ಲಿ ರಚನೆಯಾದ ಈ ಕೃತಿ ಇಂದಿರಾಬಾಯಿ ಯಂತೆಯೇ ಮಠಾಧಿಪತಿಯೊಬ್ಬರ ಅನೈತಿಕತೆ ಮತ್ತು ಅನಾಚಾರವನ್ನು ಬಯಲಿಗೆಳೆಯುವ ಕೃತಿ. ಕಾದಂಬರಿಯಲ್ಲಿ ಕೇಂದ್ರ ಪಾತ್ರಗಳಾಗಿ ಮಠಾಧೀಶರ, ಪಾರುಪತ್ಯೇಗಾರರ ವಿಚಾರಗಳು ಚಿತ್ರಿಸಲ್ಪಟ್ಟಿವೆ. ಬೋಳಾರ ಬಾಬುರಾಯರು ಅಂದಿನ ಸಾಮಾಜಿಕ ಸ್ಥಿತಿಗತಿಗಳ ವಿವರಣೆಗಳಿಗೆ ಹೆಚ್ಚಿನ ಒತ್ತು ಕೊಟ್ಟಿದ್ದಾರೆ.

ಕಾದಂಬರಿಯಲ್ಲಿ ಪ್ರಮುಖವಾಗಿ ಚರ್ಚೆಗೊಳಗಾಗುವ ಪಾತ್ರ ವಾಗ್ದೇವಿಯದು, ಮಠಾದೀಶರದು ಅಲ್ಲದೆ ಕುಮುದಾಪುರದ ಸಾಮಾಜಿಕವಾದ ಬದುಕಿನ ಚಿತ್ರಣ. ಆರಂಭದ ಸ್ತ್ರೀಸಂವೇದನಾ ಪರವಾದ ಕಾದಂಬರಿಗಳಂತೆಯೇ ಬದುಕಿನ ಮತ್ತು ಅವಳ ತಾಯಿ ಪಾತ್ರದ ಕಡೆ ಬಾಬುರಾಯರು ತಮ್ಮ ಗಮನವನ್ನು ಕೇಂದ್ರೀಕರಿಸಿದ್ದರೂ ಮಠಮಾನ್ಯಗಳ ಹಾಗೂ ವೈದಿಕ ಸಮಾಜದ ವಿವರಣೆ ಕೊಡುವುದರ ಕಡೆಗೆ ಆಸ್ಥೆ ವಹಿಸಿದ್ದಾರೆ. ಇಡೀ ಊರಿನ ಜನತೆಗೆ ಮಾತನಾಡಿಕೊಳ್ಳುವುದಕ್ಕೆ ಸುಲಭವಾಗಿ ಸಿಕ್ಕಿರುವವಳೆಂದರೆ ವಾಗ್ದೇವಿ ಮತ್ತು ಮಠದ ವ್ಯವಸ್ಥೆ. ವಾಗ್ದೇವಿ ಯೌವ್ವನ ಮತ್ತು ಸೌಂಧರ್ಯ ಕುರಿತಂತೆ ಜನತೆ ಮಾತನಾಡಿಕೊಳ್ಳುವ ರೀತಿಯೆಂದರೆ "ಸಂತೋಷವೇ ಯೌವನ, ಯೌವನದ ಕಾಲದಲ್ಲಿ ಸಂತೋಷವು ಪ್ರಾಪ್ತವಾದರೆ ಮತ್ತೆ ಹೇಳಲೇಕೊ ಯೌವನವೂ ಸಂತೋಷವೂ ಒಗುಮಿಗೆಯಾಗಿ ವಾಗ್ದೇವಿಯಲ್ಲಿ ಪ್ರವರ್ಧಮಾನವಾಗಿ ಅವಳ ಮುಖಕಾಂತಿಯೂ ಅಂಗೋಪಾಂಗಗಳ ಪ್ರಫುಲ್ಲತೆಯೂ ಕೇವಲ ಜರೆ ಬಂದೊದಗಿದ ನರನ ಮನಸ್ಸಿಗೂ ಚಾಂಚಲ್ಯ ಉಂಟುಮಾಡುವವುಗಳಾದುವು. ಏನಪ್ಪಾ! ಇವಳನ್ನು ನೋಡಿ ಒಟ್ಟಿಗೆ ರೋಮಾನಚವಾಗುತ್ತದೆ. ಎಂದು ಕೆಲವರು ಹೇಳ ತೊಡಗಿದರು. ಇವಳಿಗೆಲ್ಯಾರದೊ ದೃಷ್ಟಿತಗಲಿ ಒಂದಕ್ಕೊಂದು ಆಗಲಕ್ಕಿಲ್ಲವಷ್ಟೇ"[೫] (ವಾಗ್ದೇವಿ ಪುಟ ೧೦೭) ಎಂದು ಇನ್ನೂ ಕೆಲವರು ಹೇಳಿದರು. ಹೀಗೆ ಆ ಊರಿನ ಜನತೆ ತಮಗೆ ತೋಚಿದ ರೀತಿಯಲ್ಲಿ ವಾಗ್ದೇವಿಯ ಸೌಂಧರ್ಯದ ಬಗ್ಗೆ, ಅವಳ ನಡತೆಯ ಬಗ್ಗೆ ಅನುಮಾನದಿಂದ ಮಾತನಾಡಿಕೊಳ್ಳುತ್ತಿದ್ದರು. ಇನ್ನು ಮಹಿಳೆಯರಂತೂ ಒಂದು ಹೆಜ್ಜೆ ಮುಂದೆ ಹೋಗಿ ತಮ್ಮದೇ ಆದ ರೀತಿಯಲ್ಲಿ ವ್ಯಾಖ್ಯಾನಿಸುತ್ತಿದ್ದರು. ವಾಗ್ದೇವಿ ಮತ್ತು ಮಠಾಧಿಪತಿಯ ಅನೈತಿಕ ಸಂಬಂಧವೇ ಆ ಊರಿನ ಜನತೆಯ ಚರ್ಚೆಗೆ ಗ್ರಾಸ ಒದಗಿಸುತ್ತದೆ.

'ಇಂದಿರಾಬಾಯಿ' ಕಾದಂಬರಿಯಲ್ಲಿ ಸಾರಸ್ವತ ಸಮಾಜದ ವಿವರಗಳಿದ್ದರೆ 'ವಾಗ್ದೇವಿ' ಕಾದಂಬರಿಯಲ್ಲಿ ಮಾಧ್ವ ಸಮಾಜದ ಹಾಗೂ ಮಾಧ್ವಮಠದ ಚಿತ್ರಣವಿದೆ. ಏಕೆಂದರೆ ಆ

ಹೊತ್ತಿಗಾಗಲೇ ಆಧುನಿಕ ಶಿಕ್ಷಣಕ್ಕೆ, ಇಂಗ್ಲಿಷ್ ವಿದ್ಯಾಭ್ಯಾಸದ ಪ್ರಭಾವಕ್ಕೊಳಗಾಗಿದ್ದ ಗುಲ್ವಾಡಿಯವರು, ಕೆರೂರು ವಾಸುದೇವಾಚಾರ್ಯರು ತಮ್ಮ ಕಾದಂಬರಿಗಳಲ್ಲಿ ಆಧುನಿಕತೆ ಹಾಗೂ ಸ್ತ್ರೀ ಶಿಕ್ಷಣ ಕುರಿತಂತೆ ಸುಧಾರಣೆಯಾಗಬೇಕೆಂಬ ಆಶಯ ವ್ಯಕ್ತಪಡಿಸಿದ್ದರು. ಅಲ್ಲದೆ ನಮ್ಮ ಸಮಾಜದ ಮೌಢ್ಯ, ಸಂಪ್ರದಾಯಗಳನ್ನು ಚಿತ್ರಿಸಿದ್ದಾರೆ. ಜೊತೆಗೆ ಬಾಲ್ಯವಿವಾಹ, ವಿಧವಾ ವಿವಾಹ, ಸ್ತ್ರೀಯರಿಗೆ ಉನ್ನತ ಶಿಕ್ಷಣ ಬೇಕೆಂಬ (ಇಂದಿರಾಬಾಯಿ ಮತ್ತು ಇಂದಿರೆ ಪಾತ್ರಗಳು) ಹಂಬಲದವರು.

ಆಧುನಿಕತೆ ಮತ್ತು ಸುಧಾರಣಾವಾದಿಗಳ ಪ್ರೇರಣೆಗೊಳಗಾದ ಆರಂಭದ ಕಾದಂಬರಿಕಾರರಿಗೆ ಎದುರಾದ ಸವಾಲುಗಳಲ್ಲಿ ಬ್ರಿಟಿಷರ ಆಕ್ಷೇಪಣೆಗೆ ಗುರಿಯಾಗಿದ್ದ ಮತಮಾನ್ಯಗಳು ಮತ್ತು ಪುರೋಹಿತಶಾಹಿ ಹಿನ್ನೆಲೆಯಲ್ಲಿ ಬೋಳಾ ಬಾಬುರಾಯರು ಮಾಧ್ವಮಠದ ಚಿತ್ರಣದ ವಿಡಂಬನೆ ಜೊತೆಯಲ್ಲೇ ಸ್ತ್ರೀಸಂವೇದನೆಯನ್ನೂ ಗುರುತಿಸಬೇಕಾದ ಅನಿವಾರ್ಯತೆಯಿತ್ತು. ಹಾಗಾಗಿ ವಾಗ್ದೇವಿ ಮತ್ತು ತಾಯಿ ಬಾಗಿರಥಿ ಪಾತ್ರಗಳ ಜೊತೆಗೆ ಕುಮುದಾಪುರದ ಜನರ ಬದುಕು, ಮಠದಲ್ಲಿನ ಸ್ವಾಮಿಗಳ ಚರ್ಚೆಯನ್ನು ಕುರಿತು ಬರೆದಿದ್ದಾರೆ.

ಕಾದಂಬರಿಯಲ್ಲಿ ಸ್ವಾರ್ಥ, ದುರಾಸೆ, ಕಪಟತನಗಳು ಪ್ರಧಾನವಾಗಿ ಚಿತ್ರಿಸಲ್ಪಟ್ಟಿವೆ. ಮಗನನ್ನು ಉತ್ತರಾಧಿಕಾರಿ ಮಾಡಲು ಚರ್ಚಿಸುವುದಕ್ಕೆ ಬಂದ ಜನತೆಯನ್ನು ತನ್ನತ್ತ ಸೆಳೆದುಕೊಳ್ಳುವ ವಾಗ್ದೇವಿ, ದುರಾಸೆಯಿಂದ ಪಾರುಪತ್ಯಗಾರರು ಮಾಡುವ ಮೋಸ, ಉಳಿದವರ ಕುತಂತ್ರಗಳು, ಬಯಲಾಗದಿರುವ ಕೊಲೆಯ ರಹಸ್ಯ, ಅಧಿಕಾರಕ್ಕಾಗಿ ಘರ್ಷಣೆ ಮುಂತಾದ ವಿವರಗಳು ಕಾದಂಬರಿಯಲ್ಲಿ ಚಿತ್ರಿಸಲ್ಪಟ್ಟಿರುವುದು. ತನ್ನ ಯೋಜನೆಗಳಾವು ಫಲಿಸದಿದ್ದಾಗ ಧನ ಕನಕಗಳೊಂದಿಗೆ ಕುಮುದಾಪುರದಿಂದ ಪರಾರಿಯಾಗುವ ವಾಗ್ದೇವಿ ಸ್ವಹಿತ ಸಾಧಕಿಯಾಗಿ ಕಂಡುಬರುತ್ತಾಳೆ. ವಾಗ್ದೇವಿ ಅನುಪಸ್ಥಿತಿಯಲ್ಲಿ ಕುಮುದಾಪುರದ ಜನತೆ ನೆಮ್ಮದಿಯಿಂದಿರುತ್ತಾರೆ. ಈ ಎಲ್ಲಾ ಘಟನೆಗಳ ಹಿಂದೆ ವಾಗ್ದೇವಿ ಪ್ರಾಬಲ್ಯವಿರುವುದು ಕಂಡು ಬರುತ್ತದೆ. ಈ ಎಲ್ಲಾ ಘಟನೆಗಳ ಹಿಂದೆ ಹೆಣ್ಣು ಮುಖ್ಯಳಾಗುತ್ತಾಳೆಂಬುದನ್ನು ಬಾಬುರಾಯರು ಚಿತ್ರಿಸಿದ್ದಾರೆ.

ಮಠದ ಭ್ರಷ್ಟಾಚಾರ, ಮಠದ ಮುಖ್ಯಸ್ಥರ ದುರ್ನಡತೆ, ವಾಗ್ದೇವಿ ಜೊತೆಗಿನ ಅನೈತಿಕ ಸಂಬಂಧ ಅಲ್ಲದೆ ಅಲ್ಲಿ ನಡೆಯುವ ಎಷ್ಟೋ ರಹಸ್ಯದ ಚಟುವಟಿಕೆಗಳ ಬಗ್ಗೆ ಬೇಸತ್ತ ಜನತೆ ಪಟ್ಟುರಾಧಿಪತಿಗಳ ಸಂಸ್ಥಾನಕ್ಕೆ ಪತ್ರವೊಂದನ್ನು ಬರೆಯುತ್ತಾರೆ. ಕುಮುದಾಪುರದ ಅನಾಥ ಗಾಥೆಯರು ಮಾಡುವ ವಿನಯಪೂರ್ವಕ ವಿನಂತಿ, "ಸ್ವಾಮಿ", ಪ್ರಕೃತ ಚಂಚಲನೇತ್ರ ಸನ್ಯಾಸಿಯು ಇಟ್ಟುಕೊಂಡ ವಾಗ್ದೇವಿ ಎಂಬ ಮೋಹಿನಿಯು ನಡೆಸುವ ಕಾರ್ಬಾರು ಹೇಳುವುದಕ್ಕೆ ತುದಿಯಿಲ್ಲ. ಅವಳ ದೇಹವೂ ಮಠದ ಹಣವೂ ಅವರಿಬ್ಬರಿಗೆ ದಾರಾದತ್ತ ಮಾಡಿಕೊಟ್ಟಿದೆ. ಅವರು ಮನಸ್ಸು ಬಂದ ಹಾಗೆ ಉಪಯೋಗಿಸಿಕೊಳ್ಳುತ್ತಾರೆ. ಅವರುಭಯತ್ರರೂ ಏಕರಥಾರೂಢರಾಗಿ ನಡೆಸುವ ಘೋರವಾದ ಅನ್ಯಾಯದ ಚರಿತ್ರೆಯ ವಿಮರ್ಶಾಧಿಪತಿಗೆ ಸಂಪೂರ್ಣವಾಗಿ ವಿದಿಸಿರುವುದಾದರೂ

ಆ ಉದ್ಯೋಗಸ್ಥನು ಸದಾ ವಾಗ್ದೇವಿಯ ತಂಗಿ ಶೃಂಗಾರಿಯನ್ನು ಮೋಹಿಸಿ ಕಾರ್ಭಾರಿಯ ಸಹಾಯದಿಂದ ಅವಳನ್ನು ಬೇಕಾದ ಹಾಗೆ ಉಪಯೋಗಿಸಿಕೊಳ್ಳುತ್ತಾನೆ".[೬] (ವಾಗ್ದೇವಿ ಪುಟ ೨೨೬) ಈ ರೀತಿಯಾಗಿ ಕುಮುದಾಪುರದ ಜನ ಮಠದ ಬಗ್ಗೆ, ವಾಗ್ದೇವಿ ಮತ್ತು ಅವಳ ತಂಗಿ ಶೃಂಗಾರಿಯ ಬಗ್ಗೆ ಪಟ್ಟುರಾಧಿಪತಿಗಳ ಸಂಸ್ಥಾನಕ್ಕೆ ಪತ್ರ ಬರೆಯುತ್ತಾರೆ. ಸಾಮಾಜಿಕವಾದ ಸುಧಾರಣೆಗಿಂತ ಸಮಾಜದ ಅನೈತಿಕತೆಯನ್ನು ಚಿತ್ರಿಸಲಾಗಿದೆ.

ಕಾದಂಬರಿಯಲ್ಲಿ ವೈದಿಕ ಸಮಾಜದ ಅವನತಿಯ ಚಿತ್ರಣವನ್ನು ಕಾಣುತ್ತೇವೆ. ವೈದಿಕ ಅನೈತಿಕತೆ ಮತ್ತು ಸ್ವಾಮಿಯ ಹಾಗೂ ಮಠದಲ್ಲಿನ ಕೊತ್ವಾಲನ ಬಗ್ಗೆ ಕುಮುದಾಪುರದ ಜನತೆಯ ಆಕ್ರೋಶ ಮತ್ತು ಸಿಟ್ಟು, ಮಠದ ಮತ್ತು ಜನತೆಯ ನಡುವಿನ ಸಂಘರ್ಷ ಓದುಗರ ಕಣ್ತೆರೆಸುತ್ತದೆ. ಚಂಚಲನೇತ್ರ ಸ್ವಾಮಿ ಮತ್ತು ವಾಗ್ದೇವಿ ಪಾತ್ರದ ಮೂಲಕ ಮಠದ ಅಧಃಪತನ ಮತ್ತು ಸ್ತ್ರೀಯರ ನಡತೆಯ ಬಗ್ಗೆ ಜನತೆಗೆ ಸಂಶಯ ಮೂಡುವುದರ ಜೊತೆಗೆ ಸಾಮಾಜಿಕವಾದ ಕಳಂಕಕ್ಕೆ ಹೆಣ್ಣು ಕಾರಣವಾಗುತ್ತಾಳೆಂಬುದನ್ನು ವಾಗ್ದೇವಿ ಮತ್ತವಳ ತಂಗಿ ಶೃಂಗಾರಿ ಮೂಲಕ ಕಾದಂಬರಿಕಾರರು ತಿಳಿಸುವ ಪ್ರಯತ್ನ ಮಾಡಿದ್ದಾರೆ.

ಧರ್ಮದರ್ಶಿಗಳಾಗಿದ್ದು ಸಮಾಜದ ಅಭಿವೃದ್ಧಿಗೆ ತೊಡಗಿಸಿಕೊಳ್ಳದಿರುವ ಹಾಗೂ ಅವರ ಅನ್ಯಾಯಗಳನ್ನು ಬಯಲಿಗೆಳೆಯಲಾಗಿದೆ. ನಾಲ್ಕೂ ಮಠದವರು ವೇದವ್ಯಾಸ ಉಪಾಧ್ಯಯನ ಕರೆಸಿ, ತಮ್ಮ ಮುಂದೆ ನಿಲ್ಲಿಸಿಕೊಂಡು, "ಬಾಲಮುಕುಂದಾಚಾರ್ಯನು ವಿವರಿಸಿದ ವೃತ್ತಾಂತವನ್ನೆಲ್ಲಾ ಸ್ವಸ್ಥ ಚಿತ್ತದಿಂದ ಅವಧರಿಸಿ ಚಂಚಲನೇತ್ರರು ನಿರ್ದೋಷಿಗಳೆಂದೂ, ವಾಗ್ದೇವಿಯ ಪಾತಿವ್ರತ್ಯ ನಿರಾನು ಮಾನಕರವಾದ್ದೆಂದೂ ಇತ್ಯರ್ಥಪಡಿಸಿದರು"[೭] (ವಾಗ್ದೇವಿ ಪುಟ-೧೦೫) ಈ ರೀತಿ ಕಾದಂಬರಿಯುದ್ದಕ್ಕೂ ಮಠದ ವಿಚಾರ, ವಾಗ್ದೇವಿ ನೈತಿಕತೆ ಮತ್ತು ಅನೈತಿಕತೆ ಬಗ್ಗೆ ಚರ್ಚೆ ನಡೆಯುತ್ತದೆ. "ಈ ಕಾದಂಬರಿಯಲ್ಲಿ ಅಸಹಜವಾದದ್ದೆಂದರೆ ವಾಗ್ದೇವಿಯ ನಡವಳಿಕೆ, ಅವಳ ಪಾತ್ರ ಕಲ್ಪನೆಯಲ್ಲಿ ಅಂಟಿದ ನೂರೆಂಟು ಆಭಾಸಗಳನ್ನು ಕತೆಯ ಉದ್ದೇಶವನ್ನು ಯಾವಾಗಲೂ ವಿಫಲವಾಗಿಸುತ್ತದೆ. ಪಾತ್ರರಚನೆಯಲ್ಲಿ ಸ್ಥಿರತೆಯೆನ್ನುವುದು ಇಲ್ಲದ್ದರಿಂದ ಕತೆ ಮನವರಿಕೆಯಾಗುವುದಿಲ್ಲ. (ಯುಗಧರ್ಮ ಹಾಗೂ ಸಾಹಿತ್ಯ ದರ್ಶನ, ಕೀರ್ತಿನಾಥ ಕುರ್ತಕೋಟಿ, ಪುಟ ೨೫೧, ಮನೋಹರ ಗ್ರಂಥಮಾಲ ಧಾರವಾಡ. ೧೯೬೧). ಈ ರೀತಿ ಕಾದಂಬರಿಯಲ್ಲಿ ವಾಗ್ದೇವಿ ಪಾತ್ರಚಿತ್ರಣದಲ್ಲಿ ಅಸ್ಪಷ್ಟತೆ ಎದ್ದು ಕಾಣುತ್ತದೆ. ಒಟ್ಟಾರೆ ವೈದಿಕತೆಯ ಒಂದು ಸ್ಪಷ್ಟವಾದ ಚಿತ್ರಣ ಮತ್ತು ಅದರ ಅವನತಿಯನ್ನ, ಮಾಧ್ವ ಮಠದ ದುರ್ನಡತೆಯನ್ನು ಚಿತ್ರಿಸಿದ್ದಾರೆ.

ಎಂ.ಎಸ್ ಪುಟ್ಟಣ್ಣನವರ ಕಾದಂಬರಿಗಳು ಹೊಸಗನ್ನಡ ಕಾದಂಬರಿ ಪರಂಪರೆಗೆ ಒಂದು ಸ್ಪಷ್ಟತೆಯನ್ನು ಒದಗಿಸಿದವು ಎಂದು ಭಾವಿಸಬಹುದು. ಮೈಸೂರು ರಾಜಾಸ್ಥಾನದ ಕೃಪೆಗೆ ಪಾತ್ರನಾದ ಸದಾಶಿವನ ಹೆಂಡತಿ ಗಂಡು ಮಗುವಿಗೆ ಜನ್ಮ ನೀಡಿ ತೀರಿಹೋಗಿದ್ದಳು. ಅಜ್ಜಿ

ಮಗುವನ್ನು ಸಾಕಿದಳು. ಸದಾಶಿವ ದೀಕ್ಷಿತ್ ನೀಲಕಂಠ ಜೋಯಿಸರ ಮಗಳು ತಿಮ್ಮಮ್ಮಳನ್ನು ಮದುವೆಯಾಗುತ್ತಾನೆ. ಜೋಯಿಸರು ತಮ್ಮ ಮಗ ಆಸ್ತಿಯನ್ನು ನಿರ್ವಹಿಸಲು ಸಾಧ್ಯವಿಲ್ಲವೆಂದು ಅಳಿಯನಿಗೆ ವಹಿಸಿ ನಿಶ್ಚಿಂತೆಯಿಂದ ಸಾಯುತ್ತಾರೆ. ದೀಕ್ಷಿತ ಮಗ ಮಹಾದೇವ ಊರಿನ ಪಂತ ನಾರಪ್ಪಯ್ಯನ ಬಳಿ ವಿದ್ಯಾಭ್ಯಾಸ ನಡೆಸುತ್ತಾನೆ. ಬೆಳೆದು ದೊಡ್ಡವನಾದ ಮೇಲೆ ದೀಕ್ಷಿತನ ಸೋದರಮಾವನಾದ ಪಶುಪತಿ ಸಾಂಬಶಾಸ್ತ್ರಿಯ ಮೊಮ್ಮಗಳಾದ ಸೀತೆಯ ಜೊತೆ ಮದುವೆಯಾಗುತ್ತಾನೆ. ಸೀತೆ ಮೃದು ಸ್ವಭಾವದವಳೂ, ಒಳ್ಳೆಯ ಗುಣವಂತೆಯೂ ಆಗಿರುತ್ತಾಳೆ. ಒಟ್ಟು ಕುಟುಂಬಕ್ಕೆ ಸುಖ ಕೊಟ್ಟು ಮೆಚ್ಚುಗೆಯಾದವಳು. ತನ್ನ ಸಂಬಂಧದ ಹುಡುಗಿಯನ್ನು ತಂದುಕೊಳ್ಳಬೇಕೆಂಬ ಇಚ್ಛೆ ತಿಮ್ಮಮ್ಮನಿಗೆ ಇದ್ದುದರಿಂದ ಸೀತೆಯ ಮೇಲೆ ಅಸಹನೆ ಇರುತ್ತದೆ. ತಿಮ್ಮಮ್ಮನ ಮಗಳು ಸಾತಿ ಕೂಡ ಸೀತೆಯನ್ನು ವಕ್ರ ದೃಷ್ಟಿಯಿಂದಲೇ ನೋಡುತ್ತಿದ್ದಳು. ಸೀತೆ ಗಂಡು ಮಗನನ್ನು ಪಡೆದಳು. ಸಾತಿ ಮದುವೆಯಾಗಿ ಗಂಡನ ಮನೆಗೆ ಹೋದ ಮೇಲೆ ಅತ್ತೆಯ ಕಾಟವೂ ತಪ್ಪಿತು.ಊರಿನ ಅಮ್ಮನ ಗುಡಿಯ ಪೂಜಾರಿ ಮರಣಹೊಂದಿದ ಮೇಲೆ ಅವರ ಸಂಬಂಧವೆಂದು ಹೇಳಿಕೊಂಡು ಬಂದ ಸಿದ್ಧ ಊರಿನಲ್ಲಿ ಅಪ್ಪಾಜಿ ಎಂಬ ನಾಮಧೇಯ ಧರಿಸಿ ಮೆರೆಯುತ್ತಿದ್ದ. ದೇವಾಲಯದ ಸಮೀಪವಿದ್ದ ಅರುಂಧಮ್ಮನ ಸಮಾಧಿಗೆ ಪೂಜೆ ಸಲ್ಲಿಸಲು ಹೋಗಿಬರುತ್ತಿದ್ದ ಸೀತೆಯ ಮೇಲೆ ಅಪ್ಪಾಜಿಯ ಕಣ್ಣು ಬಿತ್ತು. ಸೀತೆ ಪೂಜಾರಿ ಅಪ್ಪಾಜಿಯ ಯಾವ ಆಮಿಷಕ್ಕೂ ಒಳಗಾಗಲಿಲ್ಲ. ಅವನು ಸುಮ್ಮನಿಲ್ಲದೆ ಸೀತೆಯ ಮೇಲೆ ಮಾಟ ಮಂತ್ರ ಮಾಡಿದ. ಸೀತೆ ಕೆಲವು ದಿನ ಮಾತಿಲ್ಲದೆ ನೆಲಹಿಡಿದಳು. ರೋಗಕ್ಕೆ ಯಾವ ಔಷಧಗಳೂ ಕೆಲಸಮಾಡದೆ ಕಣ್ಮುಚ್ಚಿದಳು. ಶವಸಂಸ್ಕಾರ ಮಾಡಿದವರು ಹಸಿ ಸೌದೆ ಉರಿಯುವುದು ತಡವೆಂದು ಹೊರಟುಹೋದರು. ಆ ವೇಳೆಯಲ್ಲಿ ಕೊಯಮತ್ತೂರು ಪ್ರಾಂತ್ಯಕ್ಕೆ ಹೋಗುವ ಸಲುವಾಗಿ ಭಟಜಿಯೊಬ್ಬನು ಆತನ ಗೆಳೆಯನೊಂದಿಗೆ ಅದೇ ಮಾರ್ಗವಾಗಿ ಬರುತ್ತಿದ್ದವನು ಮಂತ್ರವಿದ್ಯೆಯಲ್ಲಿ ಪಾರಂಗತನಾಗಿದ್ದನು. ಅವನಿಗೆ ಚಿತೆಯ ಮೇಲಿರುವ ದೇಹಕ್ಕೆ ಜೀವವಿದೆ ಎಂದರಿತು ಮಂತ್ರಗಳನ್ನು ಜಪಿಸಿ ಸೀತೆಯನ್ನು ಕಾಪಾಡಿದನು. ಮಂತ್ರ ಶಕ್ತಿಗೆ ಒಳಗಾದ ಅಪ್ಪಾಜಿ ಕಿರುಚುತ್ತ ಓಡಿಬಂದು ತಾನು 'ಸೀತೆಗೆ ಮಾಟಮಾಡಿದುದಾಗಿ ಒಪ್ಪಿ ಬೊಂಬೆಯನ್ನು ತಂದುಕೊಟ್ಟನು. ಭಟಜಿ ಅಪ್ಪಾಜಿಯ ಹಲ್ಲುಗಳನ್ನೆಲ್ಲ ಉದುರಿಸಿ ಗೊಂಬೆಯನ್ನು ಬೆಂಕಿಗೆಸೆದನು. ಸೀತೆ ಜೀವದಿಂದ ಬಂದುದಕ್ಕೆ ಎಲ್ಲರೂ ಸಂತಸಪಟ್ಟರು. ಅಮಾಸೆಯೊಬ್ಬನ ಹೊರತು ಎಲ್ಲರೂ ಜೈಲಿಗೆ ಹೋಗಬೇಕಾಯಿತು. ಉಪಾದ್ರಿಗೂ ಪೂಜಾರಿಗೂ ಶಿಕ್ಷೆಯಾಯಿತು. ಸಂಜಯವಾಡಿ ಜನರೆಲ್ಲ ಊರುಬಿಟ್ಟರು. ಸದಾಶಿವ ದೀಕ್ಷಿತ ಮನೆಯವರೆಲ್ಲರೊಂದಿಗೆ ಸಂಜಯವಾಡಿಬಿಟ್ಟು ಮೈಸೂರಿಗೆ ಹೋದನು.

ಚಾಮರಾಜನಗರದ ಬಳಿಯ ಸಂಜಯವಾಡಿಯಲ್ಲಿ ಕಥೆ ನಡೆಯುವುದರಿಂದ ಸಹಜವಾಗಿ ಪ್ರಾದೇಶಿಕತೆ ಈ ಕೃತಿಗಿರುವುದು ಸಹಜವಾಗಿದೆ.ಅತ್ತೆ ಸೊಸೆಯರ ಕಿರುಕುಳವೇ ಪ್ರಧಾನ ಕತೆಯಲ್ಲದೆ ಕಾದಂಬರಿಯಲ್ಲಿ ಮೈಸೂರಿನ ಒಡೆಯರಾದ ಮುಮ್ಮಡಿ ಕೃಷ್ಣರಾಜರ ದರ್ಬಾರು,

ಅವರ ಔದಾರ್ಯ, ಗ್ರಾಮಗಳಲ್ಲಿ ಕಕ್ಷಿದಾರರು ಎಸಗುವ ದ್ರೋಹ, ಹೇಳಿದ್ದನ್ನೆಲ್ಲ ನಂಬುವ ಹಳ್ಳಿಗರು, ಮಠದ ಗುರುಗಳು ಹಾಗೂ ಅವರ ಶಿಷ್ಯರ ಸಂಬಂಧ, ವಿದ್ಯಾರ್ಥಿಗಳೊಂದಿಗೆ ಸರಿಯಾದ ಸಂಬಂಧ ಸಾಧಿಸದಿದ್ದರೆ ಆಗುವ ಅನಾಹುತಗಳನ್ನು ಕಾದಂಬರಿ ಸುಂದರವಾಗಿ ವಿವರಿಸಿದೆ. ಮಹಾಮಂತ್ರವಾದಿ ಜೀವ ಉಳಿಸಿ ಮಾಡುವ ಪರೋಪಕಾರ ತುಂಬ ಕುತೂಹಲಕರವಾಗಿ ಮೂಡಿಬಂದಿದೆ.

ಗುಲ್ವಾಡಿ ವೆಂಕಟರಾಯರ ರೀತಿಯಲ್ಲಿಯೇ 'ಮಾಡಿದ್ದುಣ್ಣೊ ಮಹಾರಾಯ' ಕೃತಿ ಕೂಡ ನೀತಿ ಪ್ರಧಾನ ಹೆಸರಿಟ್ಟುಕೊಂಡೇ ಪ್ರವೇಶವನ್ನು ಪಡೆಯುತ್ತದೆ. 'ಮಾಡಿದ್ದುಣ್ಣು' ಎಂಬುದು ಮಾಡಿದವನು ಶಿಕ್ಷೆಗೊಳಗಾಗದೇ ಇರಲಾರ ಎಂಬ ಆಶಯವನ್ನು ಹೊಂದಿದೆ. ಇಲ್ಲಿನ ಸೀತೆ ರಾಮಾಯಣದ ರೀತಿಯಲ್ಲಿ ಆದರ್ಶಪ್ರಾಯಳು. ಆಕೆ ಅಲ್ಲಿನಂತೆ ಕಷ್ಟಕ್ಕೆ ಗುರಿಯಾದವಳು. ಆಕೆಯ ಮೇಲೆ ಕಣ್ಣು ಹಾಕುವ ಅಪ್ಪಾಜಿ ದುರಂತ ರಾವಣನಂತೆ ತೋರುತ್ತಾನೆ. ಪುಟ್ಟಣ್ಣನವರು ತಮ್ಮ ಕೃತಿಯನ್ನು ಗಂಭೀರವಾಗಿ ಕಟ್ಟಿದ್ದಾರೆ. ಕಾದಂಬರಿಯ ಮೂಲಕ ವೈಚಾರಿಕ ಸ್ಪಷ್ಟ ತಳಹದಿಯೊಂದನ್ನು ಹಾಕುವ ಯತ್ನ ಗಮನಾರ್ಹ. ಸೀತೆಯೇ ಪ್ರಧಾನ ಪಾತ್ರವಾದುದರಿಂದ ಸೀತೆಯ ಬದುಕಿನ ಮುಖಗಳನ್ನು ಆರ್ದ್ರವಾಗಿ ಚಿತ್ರಿಸಿರುವುದರಿಂದ ಸ್ತ್ರೀಕಾಳಜಿಗಳನ್ನು ಈ ಕಾದಂಬರಿ ಕೇಂದ್ರಮಾಡಿಕೊಂಡಿದೆ.

**೩.೨ ಕಾನೂರು ಹೆಗ್ಗಡಿತಿ, ಸರಸಮ್ಮನ ಸಮಾಧಿ :**

ಕುವೆಂಪು ಅವರ 'ಕಾನೂರು ಹೆಗ್ಗಡಿತಿ' ಒಂದು ಬೃಹತ್ ಕಾದಂಬರಿಯಾಗಿರದೆ ಹೆಗ್ಗಡಿತಿಯ ಕತೆಯಾಗಿದೆ.ಮಲೆನಾಡಿನ ಒಂದು ಭಾಗದಲ್ಲಿ ಪ್ರಚಲಿತವಿದ್ದ ಅನೇಕ ಸಂಗತಿಗಳನ್ನು ಈ ಕಾದಂಬರಿ ಹಿನ್ನೆಲೆಯಾಗಿಟ್ಟುಕೊಂಡ ಕಾರಣ ವಾಸ್ತವವಾದಿ ಕಾದಂಬರಿಯೂ, ಸ್ತ್ರೀಪರ ದೃಷ್ಟಿಯನ್ನಿರಿಸಿಕೊಂಡ ಕೃತಿಯೂ ಆಗಿದೆ. ಇದು ಹೆಗ್ಗಡಿತಿಯ ಕಥೆಯಾದಂತೆ ಕಾನೂರಿನ ಕತೆಯೂ ಆಗಿದೆ. ಮಲೆನಾಡಿನ ಕವಿಯಾದ ಕುವೆಂಪು ಅವರ ಪ್ರಕೃತಿ ಕೇವಲ ಕಾವ್ಯಕ್ಕೆ ಮೀಸಲಾಗದೇ ಅವರ ಎರಡು ಮಹಾ ಕಾದಂಬರಿಗೂ ತನ್ನ ಬಾಹುಗಳನ್ನು ಚಾಚಿದೆ. ಇದು ಕೂಡ ಎಂ.ಎಸ್.ಪುಟ್ಟಣ್ಣನರ ಕಾದಂಬರಿಯಂತೆ ಪ್ರಾದೇಶಿಕತೆಯನ್ನು ಹೆಗಲಿಗಿಟ್ಟುಕೊಂಡಿದೆ. ಚಂದ್ರಯ್ಯಗೌಡರ ಅಡುಗೆ ಮನೆಯ ಚಿತ್ರದ ವರ್ಣನೆ ಹೀಗಿದೆ. "ಸುತ್ತಣಜಗತ್ತಿಗೆಲ್ಲಾ ಬೆಳಕಾಗಿದ್ದರೂ ಅಡುಗೆ ಮನೆಗೆ ಇನ್ನೂ ಮಬ್ಬು ತಪ್ಪಿರಲಿಲ್ಲ. ಏಕೆಂದರೆ ಅದಕ್ಕಿದ್ದುದು ಒಲೆಯ ಮೇಲುಗಡೆ ಒಂದೇ ಕಿಟಕಿ. ಆದರೂ ಪಾಕಶಾಲೆಯ ರೂಪುರೇಖೆ ತಕ್ಕಮಟ್ಟಿಗೆ ಪ್ರದರ್ಶಿತವಾಗಿತ್ತು. ಬಾಗುಮರಿಗೆ, ಉಪ್ಪಿನ ಮರಿಗೆ, ಕೈಯದ್ದುವ ಹಿತ್ತಾಳೆಯ ತಂಬಾಳೆ, ಸಿಕ್ಕದ ಮೇಲೆ ಮೆಣಸಿನಕಾಯಿಯ ಬುಟ್ಟಿ, ಮೊಸರು ಗಡಿಗೆ, ಮಜ್ಜಿಗೆ ಚರಿಗೆ, ಕಡೆಗೋಲು ಕಂಬ, ತುಪ್ಪ ಬೆಣ್ಣೆ ಮೊದಲಾದುವನ್ನು ಇಟ್ಟು ಬೀಗ ಹಾಕಿದ ಒಂದು ಕಲಬಿ, ಮಣೆಯ ರಾಶಿ, ಅಡುಗೆ ಮನೆಯ ಒಂದು ಅನಿವಾರ್ಯವಾದ ಒಂದು ಅಂಗವಾಗಿ ಒಲೆಯ ಪಕ್ಕದ ಬೆಚ್ಚನೆಯ

ಮೂಲೆಯಲ್ಲಿ ತನ್ನೆರಡು ಮರಿಗಳೊಡನೆ ಪವಡಿಸಿದ್ದ ಬೆಕ್ಕು, ಅಲ್ಲಲ್ಲಿ ಹಾರಿ ಹಾರಿ ಕೂರುತ್ತಿದ್ದ ಮನೆಯ ನೊಣಗಳು, ಇತ್ಯಾದಿ. ಯಾರಾದರೂ ಪ್ರಾಕ್ತನ ವಿಮರ್ಶಕನ ವಿಚಕ್ಷಣರು ಆ ಅಡುಗೆಮನೆಯನ್ನು ಪ್ರವೇಶಿಸಿದ್ದರೆ ಪುರಾಣ ಪ್ರಸಿದ್ಧವಾದ ಗವಿಯನ್ನೋ ಅಥವಾ ಪಾಳುಬಿದ್ದ ದೇವಾಲಯವನ್ನೋ ಮನಸ್ಸಿಗೆ ತರುತ್ತಿತ್ತು. ಅದರ ವಾತಾವರಣ ಅಷ್ಟೊಂದು ಪೂರ್ವಿಕತೆಯಿಂದ ತುಂಬಿಕೊಂಡಿತ್ತು?" ಕಾನೂರು ಹೆಗ್ಗಡಿತಿ.

ಕಾನೂರಿನ ಮನೆಯ ದೃಶ್ಯವನ್ನು ವರ್ಣಿಸಿದ ಕುವೆಂಪು ಜೀತದಾಳು ಮುತ್ತಳ್ಳಿ ನಂಜನ ಗುಡಿಸಲನ್ನು ಹೀಗೆ ಕಟ್ಟಿದ್ದಾರೆ.

"ಹುಲ್ಲು ಗುಡಿಸಲಿನ ಕಿರುಬಾಗಿಲಲ್ಲಿ ಒಳಗರ್ಧ ಹೊರಗರ್ಧ ದೇಹ ಮಾಡಿಕೊಂಡು ಹೊಸ್ತಿಲ ಮೇಲೆ ಬಂದು ಕಾಲಿಟ್ಟು ಬಾಗಿಲ ಎರಡು ನಿಲುವುಗಳನ್ನು ಎರಡು ಕೈಗಳಿಂದಲೂ ಹಿಡಿದು ಬಿಲ್ಲಿನಂತೆ ಬಾಗಿ ನಿಂತಿದ್ದ ನಂಜನು ಹಾಕಿಕೊಂಡಿದ್ದ ತಾಂಬೂಲದ ಕೆಂಪು ಉಗುಳನ್ನು ಬಾಗಿಲಿನೊಂದು ಹೊರಭಾಗದ ಪಕ್ಕಕ್ಕೆ ಬಾಣದಂತೆ ಪಿಚಕ್ಕನೆ ಉಗುಳಿ, ಗಂಟಲು ಸರಿಮಾಡಿಕೊಳ್ಳಲೆಂಬಂತೆ ಕೆಮ್ಮುತ್ತ, ಆಮೆಯ ತಲೆ ಅದರ ದೇಹದಲ್ಲಿ ಹುದುಗುವಂತೆ ಗುಡಿಸಲೊಳಗೆ ಹೋದನು. ಹುಲ್ಲು, ತರಗು, ಕಬ್ಬಿನಸಿಪ್ಪೆ, ಮಡಕೆಚೂರು, ಕಂಬಳಿಚಿಂದಿ ಮೊದಲಾದ ಪದಾರ್ಥ ಮತ್ತು ಪದಾರ್ಥಶೇಷಗಳು ಅಸ್ತವ್ಯಸ್ತವಾಗಿ ಕಿಕ್ಕಿರಿದು ಹರಡಿದ್ದ ಆ ಗುಡಿಸಲಿನ ಅಂಗಳದಲ್ಲಿ ಅಥವಾ ಅಂಗಳ ಎಂಬ ಹೆಸರಿನ ಸ್ಥಾನದಲ್ಲಿ, ನಂಜನ ಎಂಜಲಿಗೂ ಸ್ಥಳ ಸಿಕ್ಕಿ, ಒಂದಷ್ಟು ಜಾಗ ಕೆಂಪಾಯಿತು. ಉಗುಳು ಬಿದ್ದ ಜಾಗದಿಂದ ಕೆಂಪು ನೊಣಗಳು ಗೊಯ್ಯೆಂದು ಹಾರಿ ಮತ್ತೆ ಕೂತುವು. ಈ ತೆರನಾದ ಸಹಜ ವರ್ಣನೆಗಳು ಹಾಗೂ ಸಂಭಾಷಣೆಗಳು ಕಾದಂಬರಿಗೆ ಸಹಜತೆಯನ್ನು ಒದಗಿಸಿವೆ. ಅಲ್ಲದೆ ಅಲ್ಲಿನ ವಾಸ್ತವ ಜೀವನವನ್ನು ಕಟ್ಟಿಕೊಡಲು ಸಾಧ್ಯವಾಗಿದೆ. ತನ್ನ ಗಂಡನ ಅನಿರೀಕ್ಷಿತ ಮರಣಕ್ಕೆ ಚಂದ್ರಯ್ಯಗೌಡರೇ ಕಾರಣ ಎಂದೂ ಚಂದ್ರಯ್ಯಗೌಡರ ನಾಲ್ಕನೆಯ ಹೆಂಡತಿಯಾದ, ಸಂಸ್ಕೃತಿಯಿಲ್ಲದ ಸಬ್ಬಮ್ಮನ ಅಧೀನಕ್ಕೆ ಒಳಪಟ್ಟು ಬದುಕುವುದಕ್ಕಿಂತ ಒಂಟಿ ಬದುಕುವುದು ಮೇಲೆಂದು ಭಾವಿಸಿ ಊರಿಗೆ ಹಿಂದಿರುಗುತ್ತಾಳೆ. ಊರಲ್ಲಿ ಹೂವಯ್ಯನನ್ನು ಪಾಲು ಕೇಳು ಎಂದು ಒತ್ತಾಯಿಸುತ್ತಾಳೆ. ಸುಬ್ಬಮ್ಮ ಮಾಗಮ್ಮನೊಂದಿಗೆ ಏಗಲಾರದೆ ಜಗಳವಾಡುತ್ತಾಳೆ. ಜಗಳವನ್ನು ಸಹಜವಾಗಿ ಕುವೆಂಪು ಹೀಗೆ ವರ್ಣಿಸಿರುತ್ತಾರೆ.

ಸವತಿಯ ಮಗ ವಾಸು ಉಪ್ಪಿಟ್ಟು ಕೇಳಿದಾಗ ಉಪ್ಪಿಟ್ಟಿಲ್ಲ ಎಂದು ಸುಬ್ಬಮ್ಮ ಹೇಳಿದ್ದಕ್ಕೆ ವಾಸು "ಎದ್ರಪ್ಪನ್ಮನೇ ಗಂಟು! ಹಡ್ಬೇ ಮುಂಡೆ!" ಎಂದು ಗೊಣಗುಟ್ಟುತ್ತಾನೆ.

"ಇದನ್ನೆಲ್ಲ ನೋಡುತ್ತ ಕೇಳುತ್ತ ಕುಳಿತಿದ್ದ ನಾಗಮ್ಮನವರ ಮೈ ಬೆಂಕಿಯಾಗಿತ್ತು. ಪುಟ್ಟಮ್ಮ ಒಳಗೆ ಬರಲು ಅವಳೊಡನೆ ನಡೆದುದನ್ನೆಲ್ಲಾ ಖಾರವಾಗಿ ಸ್ವಲ್ಪ ಗಟ್ಟಿಯಾಗಿಯೇ ಹೇಳಿದರು.

"ವಾಸು ಬೈದುದು ಸುಬ್ಬಮ್ಮನಿಗೆ ಕೇಳಿಸಿ, ಆಕೆಯ ಮನಸ್ಸಾಗಲೆ ಅಗ್ನಿ ಪರ್ವತವಾಗಿತ್ತು. ನಾಗಮ್ಮನವರು ಹೇಳಿ ಮುಗಿಸಿದ ಕೂಡಲೇ ಮಾತಿನ ಮಳೆ ಸುರಿಯತೊಡಗಿತು. ನಡುನಡುವೆ ಬೈಗುಳದ ಆಲಿಕಲ್ಲುಗಳು ಗುಂಡುಗಳಂತೆ ಸಿಡಿಯುತ್ತಿದ್ದವು.

"ಗಂಡನ್ನ ಕಳಕೊಂಡ ಮುಂಡೇರ ಹಣೇಬರಹವೇ ಹೀಂಗೆ... ಅವರ ಕಣ್ಣು ಇಂಗೇ ಹೋಗಲಿ. . . ನಾನೀ ಹಾಳು ಮನೆಗೆ ಯಾಕೆ ಬಂದೆನೋ, ದೇವರ ಕಣ್ಣಿಗೆ ಒರಲೆ ಹಿಡಿದು ಹೋಗಾಕೆ! ಗಂಜಿ ಕುಡ್ಕೊಂಡಿರ್ತಿದ್ದೆ. . . ಅವರ ಬಾಯಿಗೆಲ್ಲ ಹುಳು ಬಿದ್ದು ಹೋಗಾಕೆ. . . ಏನು ಉರಿಸ್ತಾರೋ. . .ಏನು ಉರೀತಾರೋ. . . ಇಬ್ಬರನ್ನು ತಿಂದ ಮಾರಿ ಮೂರ್ನೇಳವಳನ್ನೂ ಇನ್ನಾಕೆ ನೋಡ್ತದೆ. . . ಮುಖಕ್ಕೆ ಬೆಂಕಿ ಹಾಕ. . ಹುಡುಗರು ಮಕ್ಕಳ್ನೆಲ್ಲಾ ನನ್ನ ಮೇಲೆ ಎತ್ತಿ ಕಟ್ಟಿ ಬಾಯಿಗೆ ಬಂದಂಗೆ ಬಯ್ಯೋದೆ. . !"[೧೦]

"ಯಾರೇ ಎತ್ತಿ ಕಟ್ಟಿದ್ದು? ಯಾವಾಗ್ಲೇ?"

"ಅವನ ಕಡೆಗೆ ಕಣ್ಣು ಮಿಸುಗಿದ್ದು ನನಗೆ ಕಾಣಲಿಲ್ಲೇನೋ?"

"ಬಾಯಿಗೆ ಬಂದಂಗೆ ಬೈಯ್ತಿಯಾ? ದಿಂಡೆ ಬಸವಿ?"

"ಯಾರೇ ದಿಂಡೆ ಬಸವಿ? ಹಾದರಗಿತ್ತಿ!"

ಈ ಜಗಳದ ವರ್ಣನೆ ಓದಿದರೆ ಕಾದಂಬರಿ ಎಷ್ಟು ಸಹಜವಾಗಿ ಮೂಡಿಬಂದಿದೆ ಎಂಬುದು ಗೊತ್ತಾಗುತ್ತದಲ್ಲದೆ ಇಲ್ಲಿನ ಜಗಳ ಸ್ತ್ರೀ ಸಹಜ ಮತ್ಸರವನ್ನೂ ಸೊಗಸಾಗಿ ತೋರಿಸಿಕೊಡುತ್ತದೆ. ಇಲ್ಲಿ ಅವರೀರ್ವರು ಬಳಸುವ ಭಾಷಾ ಪ್ರಯೋಗಗಳು ಅವರ ಯೋಗ್ಯತೆಯನ್ನು ತಿಳಿಸುತ್ತವೆ.

ಸೀತೆಯನ್ನು ರಾಮಯ್ಯನಿಗೆ ಕೊಟ್ಟು ಮದುವೆ ಮಾಡಬೇಕೆಂದು ಅವರ ತಂದೆ ತಾಯಿ ನಿರ್ಧರಿಸಿದಾಗ ಬೇಸರಗೊಂಡ ಹೂವಯ್ಯನನ್ನು ನಾಗಮ್ಮ ಸಮಾಧಾನ ಪಡಿಸುವ ಸನ್ನಿವೇಶ ಗಮನಾರ್ಹ.

"ಹೋಗಲಿ ಬಿಡು. ಅವರ ಹೆಣ್ಣು ನಮಗ್ಯಾಕೆ? ಅವರೇ ಉಬ್ಬೆಗೆ ಹಾಕಿ ಹಣ್ಣುಮಾಡಿಕೊಳ್ಳಲಿ! ನಿನಗೇನು ಹೆಣ್ಣಿಗೆ ಬರಗಾಲವಿಲ್ಲ! ಹ್ನು! ಅಂದರೆ ಕಾಲಿಗೆ ಬಿದ್ದು ಹೆಣ್ಣು ಕೊಡೋರು ಹಮಾಜನ ಇದ್ದಾರೆ. . . . ನನ್ನ ಹತ್ತಿರ ಆಗಲೇ ಆ ಪರ್ಸ್ತಾಪನೂ ಎತ್ತಿದ್ದಾರೆ. . ಆ ಅತ್ತಿಗದ್ದೆ ಹಿರಿಯಣ್ಣಗೌಡರ ಮಗಳು ರಂಗಮ್ಮ ಇದ್ದಾಳಲ್ಲಾ–ಏನಾಗಿದ್ದಾಲೆ? ಸ್ವಲ್ಪ ಬಾಯಿ ಉಗ್ಗಾದರೆ ಏನಂತೆ? ದುಂಡು ಮುಖ, ಬಿಳಿಮೈ, ಕಣ್ಣು, ಮೂಗು ಬಾಯಿ, ಕಿವಿ, ಎಲ್ಲಾ ನೆಟ್ಟಗಿಲ್ಲೇನು?. . ಮತ್ತೆ ಆ ನುಗ್ಗಿಮನೆ ತಮ್ಮಣ್ಣಗೌಡರ ಮಗಳು ದಾನಮ್ಮ ಇದ್ದಾಳಲ್ಲಾ, ಏನಾಗಿದ್ದಾಳೆ? . . ಸ್ವಲ್ಪ ಕಪ್ಪಿರಬೈದು. ಇದ್ರೇನಂತೆ? ಗಟ್ಟಿಮುಟ್ಟಾಗಿ ಕೆಲಸ ಮಾಡ್ತಾಳೆ. . . ಅಥವಾ ಆ ಸಂಪಿಗೆ ಪುಟ್ಟಯ್ಯಗೌಡರ ಮಗಳು ದುಗ್ಗಮ್ಮ, ಅವಳಿಗಾನಾಗಿದಾಳೆ?. . ಏನೋ ಕಣ್ಣು ಸ್ವಲ್ಪ ವಾರೆ ಅಂತಾರೆ! ಆದ್ರೇನಂತೆ! ಕಿವಿ ಸ್ವಲ್ಪ ಮಂದವಂತೆ– ಹಾಂಗೆ ನೋಡಿದರೆ ಸೀತೆ ಕಿವಿನೂ ಮಂದವೇ!. . ಸ್ವಲ್ಪ ಹಲ್ಲು ಉಬ್ಬು ಅವಳಿಗೆ. ಆದರೂ ಏನೂ ಕೆಟ್ಟಿಲ್ಲ. . . ಅಯ್ಯೋ

ಬಿಡೋ! ಇವರು ಹೆಣ್ಣು ಕೊಡ್ತಾರೆ ಅಂತ ನಾನೇನೂ ಗಂಡು ಹೆರಲಿಲ್ಲ! . . .ಇವರ ಹೆಣ್ಣಿನ ಬಣ್ಣ ಚಿನ್ನ ಅಂತಾ ತಿಳಕೊಂಡಿದ್ದಾರೇನೋ! ಅದರ ಅಜ್ಜನಂತಾ ಬಣ್ಣದ ಹೆಣ್ಣುಗಳು ಎಷ್ಟೋ ಬಿದ್ದವೆ. . !"[೧೧]

ಈ ಸಂಭಾಷಣೆಯನ್ನು ಗಮನಿಸುತ್ತಿದ್ದರೆ ಪಾತ್ರಗಳ ಮನಸ್ಥಿತಿಯನ್ನು ಎಷ್ಟು ಚೆನ್ನಾಗಿ ಕುವೆಂಪು ಕಟ್ಟಿಕೊಟ್ಟಿದ್ದಾರೆ ಎಂದೆನಿಸದಿರದು. ಹೂವಯ್ಯನ ಮನಸ್ಥಿತಿಯೇ ಬೇರೆ ನಾಗಮ್ಮನ ಮನಸ್ಥಿತಿಯೇ ಬೇರೆ. ಅವನಿಗೆ ಒಪ್ಪದ ಹೆಣ್ಣುಗಳ ಪಟ್ಟಿಯನ್ನು ಉದ್ದವಾಗಿ ಬೆಳೆಸುತ್ತಾಳೆ. ಮದುವೆ ಎಂದರೆ ಎರಡು ದೇಹಗಳನ್ನು ಕೂಡಿಸುವ ಕೆಲಸ ಎಂದೇ ತಿಳಿದಿದ್ದಾರೆ ಸಾಂಪ್ರದಾಯಿಕ ವಿವಾಹಮಾಡಿಸುವವರು, ಅಲ್ಲದೆ ಮದುವೆಮಾಡಿಸಲು ಹೆಣ್ಣೊಂದನ್ನು ಹುಡುಕುವಲ್ಲಿಯೂ ತಮ್ಮ ಕುಟುಂಬ ಎಂದರೇನೆಂದು ತಿಳಿದಿದ್ದಾರೆ ಎಂದು ಗಂಡಿನ ಕಡೆಯವರು ಬೀಗುವುದರಲ್ಲಿ ಹೆಣ್ಣು ಕೂಡ ಹಿಂದೆ ಬಿದ್ದಿಲ್ಲ ಎಂಬುದನ್ನೂ ಸೂಚ್ಯವಾಗಿ ಕುವೆಂಪು ತಿಳಿಸುತ್ತಿದ್ದಾರೆ. ಮದುವೆ ಎನ್ನುವುದು ಸಾಮಾಜಿಕ ಪ್ರತಿಷ್ಠೆಯಾಗಿ ಅಲ್ಲಿ ಮನಸ್ಸುಗಳ ಕೆಲಸ ಏನೂ ಇರುವುದಿಲ್ಲವೆ ಎಂಬ ಪ್ರಶ್ನೆಗಳನ್ನಿರಿಸಿದ್ದಾರೆ. ಸೀತೆ ಎಷ್ಟು ಮುಗ್ಧಳೆಂದರೆ "ಹೂವಯ್ಯ ಭಾವನನ್ನೇ ಮದುವೆಯಾಗುತ್ತೇನೆ" ಎಂದು ಎಂದೋ ಯಾರಿಗೂ ಕಾಣದಂತೆ ಗೋಡೆಯ ಮೇಲೆ ಬರೆದುಬಿಟ್ಟಿದ್ದಳು. ಹೂವಯ್ಯನಂತೆ ಸೀತೆಯೂ ಕೂಡ ಭಾವುಕಳು. ಕಾದಂಬರಿಯಲ್ಲಿ ಬರುವ ಹೆಣ್ಣಿನ ಪಾತ್ರಗಳು ಅಂದಿನ ಸಾಮಾಜಿಕ,ಆರ್ಥಿಕ ಪರಿಸ್ಥಿತಿಗನುಗುಣವಾಗಿ ಭಿನ್ನ ಭಿನ್ನ ಮನೋಧರ್ಮ ಹೊಂದಿದವರಾಗಿದ್ದರು ಎಂಬುದನ್ನು ಕುವೆಂಪು ಪ್ರಧಾನವಾಗಿ ಗಮನಿಸಿದ್ದಾರೆ.

ಕುವೆಂಪು ಅವರ ಈ ಕಾದಂಬರಿಯಲ್ಲಿ ಮಲೆನಾಡಿನ ಗೌಡರುಗಳ ಬದುಕನ್ನು ಪ್ರಧಾನವಾಗಿ ಚಿತ್ರಿಸಿದ್ದಾರೆ. ಇದರ ಜೊತೆಯಲ್ಲಿಯೇ ಸ್ತ್ರೀಯರ ಬದುಕೂ ಕೂಡ ಅವಿನಾಭವ ಸಂಬಂಧವನ್ನು ಪಡೆದುಕೊಂಡಿದೆ. "ಅಸ್ತಿಯಿಂದ ಹಿಡಿದು ಹೆಣ್ಣಿನವರೆಗೂ ನಡೆಯುವ ಪೈಪೋಟಿಯಂಥ ವಾಸ್ತವವನ್ನು ಬಹಳ ಗಂಭೀರವಾಗಿಯೇ ಚಿತ್ರಿಸಿದ್ದಾರೆಂಬುದನ್ನು ಇಲ್ಲಿ ಗಮನಿಸಬೇಕು. ಸೀತೆಯನ್ನು ತನ್ನ ಮಗ ಕೃಷ್ಣಪ್ಪನಿಗೆ ತಂದು ಕೊಳ್ಳಲು ಪ್ರಯತ್ನಿಸುವುದರಿಂದ ಆರಂಭವಾಗುವ ಈ ಪೈಪೋಟಿ ಕೃಷ್ಣಪ್ಪ ಹುಲಿ ಹಿಡಿದು ಸತ್ತಾಗ, ಸೀತೆಯನ್ನು ಹೂವಯ್ಯನಿಗೆ ಕೊಡಿಸುವತ್ತ ಹೊರಳುತ್ತದೆ." (ಕುವೆಂಪು ಸಆಹಿತ್ಯದಲ್ಲಿ ವಐಚಾರಿಕತೆ ಪುಟ:೧೮೮. ಡಾ.ವಿಠಲ್‌ರಾವ್.ಗಾಯಕ್ವಾಡ್) ಈ ರೀತಿ ಕುವೆಂಪು ಅವರ ಕಾದಂಬರಿಯಲ್ಲಿನ ಸ್ತ್ರೀಸಂವೇದನೆಗೆ ಇವೆಲ್ಲ ಅಂಶಗಳು ಪೂರಕವಾದಂತಹವುಗಳೆಂದು ಹೇಳಬಹುದಾಗಿದೆ.

ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರಗಳು ವಿಶೇಷವೆನಿಸಿವೆ. ಕಾರಂತರ **'ಸರಸಮ್ಮನ ಸಮಾಧಿ'** ಬಹು ಮುಖ್ಯ ಕೃತಿಯಾಗಿದೆ. ಈ ಕಾದಂಬರಿಯಲ್ಲಿ ಅತೃಪ್ತ ಜೋಡಿಗಳಿವೆ. ಇವರು ಕುಟುಂಬದಲ್ಲಿ ಸಾಮರಸ್ಯ ಕಾಣದ ಹತಭಾಗ್ಯರು. ಕಾರಂತರು "ಪುರುಷ ಪ್ರಧಾನ ಸಮಾಜದಲ್ಲಿ 'ಜೀವನದ ಅನೇಕ ಕ್ಷೇತ್ರಗಳಲ್ಲಿ ಸ್ತ್ರೀಯ ಮನಸ್ಸು ಮತ್ತು ಶರೀರಗಳೆರಡೂ ಅವನ ಸೊತ್ತು; ಅದಕ್ಕೆ ಸ್ವತಂತ್ರ ಅಸ್ತಿತ್ವವಿಲ್ಲ' ಎಂಬ ಭಾವನೆಯನ್ನು ಜಗತ್ತಿನ ಹಲವು ದೇಶ ಮತ್ತು

ಮತಗಳು ಸಾರುತ್ತ ಬಂದಿವೆ. ಪ್ರಾಣಿ ಜೀವನ ಪರಿಶೀಲಕರು ಅಂಥ ಕಲೆಯನ್ನು ತೀರ ಅಸಾಧು ಎಂದು ನಮಗೆ ಸುಲಭದಲ್ಲಿ ತಿಳಿಸಿಯಾರು. ಆಧುನಿಕ ಮನಶಾಸ್ತ್ರಜ್ಞರು ಅದನ್ನು ವಿವರಿಸಬಲ್ಲರು. ಆದರೆ ಯಾವ ಸಂಸ್ಕೃತಿಯೇ ಆಗಲಿ, ತನ್ನ ಜನಗಳ ಮೇಲೆ ವಿಧಿಸಿದ ವರ್ತನೆಗಳ ಬೆನ್ನಿಗೆ, ಪಾಪ–ಪುಣ್ಯ, ನ್ಯಾಯ–ನೀತಿ, ಸ್ವರ್ಗ–ನರಕಗಳ ನಂಬಿಕೆಗಳನ್ನೂ ಬೆಸೆಯುತ್ತ ಬಂದಿರುವುದರಿಂದ, ಅದರಿಂದಾಗಿ ಅಸಂಖ್ಯರು ಮನೋದಾಸ್ಯದಿಂದ ಬಂಧಿತರಾಗಿರುವುದರಿಂದ, ತಮ್ಮ ನಾಡಿನ ಪರಂಪರೆ ಸಾರುತ್ತಿರುವ 'ನೀತಿ'ಗಳನ್ನು ಪ್ರಶ್ನಿಸುವ ಧೈರ್ಯವನ್ನು ಇಲ್ಲಿಯವರು ತಳೆದಿಲ್ಲ. ಆ ಸಾಹಸಕ್ಕೆ ಹೋಗಿಲ್ಲ. ಅಲ್ಲದೆ ಮನುಷ್ಯ ವರ್ಗವೇ ಸಾಕಷ್ಟು ಕಪಟ ಜೀವನ ನಡೆಸುತ್ತಿರುವ ಒಂದು ಜಾತಿಯಾಗಿದೆ. ಅದು ಪರರ ವಿಚಾರದಲ್ಲಿ ಯಾವೆಲ್ಲ ನಿಯತ್ತು, ಶಿಕ್ಷೆ, ದೋಷಾರೋಪಣೆ ಮಾಡಲು ಸಿದ್ಧವೋ, ತನ್ನ ವಿಷಯ ಬಂದಾಗ, ತನ್ನನ್ನು ತಾನು ತೂಗಬೇಕಾಗಿ ಬಂದಾಗ, ತನ್ನ ನಡೆನುಡಿಗಳನ್ನು ತಾನು ಪ್ರಶ್ನಿಸಲೇಬೇಕಾದಾಗ, ಆ ಬಗ್ಗೆ ಯಾವ ಸಂಕೋಚವೂ ಇಲ್ಲದಂತೆ ವರ್ತಿಸುತ್ತದೆ.

"ಅಂಥ ಮನಸ್ಸಿನ ಗಂಡಸು ಮತ್ತು ಹೆಂಗಸರ ನಡುವಣ ದಾಂಪತ್ಯದ ಚಂಚಲ ಸಂಬಂಧಗಳನ್ನು ಕುರಿತು ಈ ಕಾದಂಬರಿ ಚಿತ್ರಿಸಲು ಹೊರಟಿದೆ."[೧೨] ಎಂದು ಕಾದಂಬರಿಕಾರರು 'ಮುನ್ನುಡಿ'ಯಲ್ಲಿ ಸೂಕ್ಷ್ಮವಾಗಿ ತಿಳಿಸಿದ್ದಾರೆ. ಮಹಾಸತಿ ಸರಸಮ್ಮ ಇಲ್ಲಿ ಸಾಮಾನ್ಯ ಕುಟುಂಬದ ಹೆಣ್ಣು. "ಆಕೆ ಮೂಡಂಬೈಲಿನಲ್ಲಿ ಜನ್ಮವೆತ್ತಿದ್ದಳಂತೆ. ಆ ಊರಿನ ನೀಲಾಚಲಯ್ಯನನ್ನು ಮದುವೆಯಾದಳಂತೆ. ಮದುವೆಯಾದಂದಿನಿಂದ ಒಂದೇ ಒಂದು ದಿನ ಪತಿಯ ಸೇವೆಯನ್ನು ತಪ್ಪಿಸಿದವಳಲ್ಲ. ನೀಲಾಚಲಯ್ಯ ಹಿಂದಿನ ಜನ್ಮದಲ್ಲಿ ಅಗಸನ ಮಾತು ಕೇಳಿ, ತಾವು ಸೀತೆಗೆ ಮಾಡಿದ ದ್ರೋಹವನ್ನು ನೆನೆದ, ಅವರಿಗೆ ನಾವಾಗದಿದ್ದೀತೆ? ಕೊನೆಗೆ ಅನೇಕ ಮನೆಗಳನ್ನು ಹರಸಿ ಒಂದು ದಿವಸ ನೀಲಾಚಲಯ್ಯ ಅಂತರ್ಧಾನವಾದರು. ಆಗ ಸರಸಮ್ಮ, ಅವರ ಕಳೇಬರವನ್ನು ಚಿತೆಯಲ್ಲಿರಿಸಿ ಊರಿನ ಎಲ್ಲಾ ಮುತ್ತೈದೆಯರಿಂದ ಕುಂಕುಮವಿರಿಸಿಕೊಂಡು ಸಹಗಮನ ಮಾಡಿದಳು! ಆಗ ನೆರೆದವರೆಲ್ಲರೂ ಹೊಗೆ ಸುರುಳಿಸುರುಳಿಯಾಗಿ ಸ್ತ್ರೀ ರೂಪ ತಾಳಿ ಅಂಬರವನ್ನು ಚುಂಬಿಸಿದ್ದನ್ನು ಕಂಡರಂತೆ."[೧೩] (ಸರಸಮ್ಮನ ಸಮಾಧಿ.ಪುಟ.೭) ಹೀಗೆ ಸರಸಮ್ಮ ತನ್ನ ದೇಹ ತ್ಯಜಿಸಿದ ಸಂಗತಿ ಅನೇಕ ರೂಪಾಂತರಗಳನ್ನು ಪಡೆದು ಸರಸಮ್ಮನ ಸಮಾಧಿಗೆ ಹೋಗುವವರೆಂದರೆ "ಯಾವ ಸಂಸಾರದಲ್ಲೇ ಆಗಲಿ ದಂಪತಿಗಳಲ್ಲಿ ಒಡಕು ಬಂದು, ಜೀವನ ಅಸಹ್ಯವಾದರೆ ಸರಸಮ್ಮನಲ್ಲಿಗೆ ದೂರು ಬರುತ್ತದೆ, ಗಂಡನಾದರೆ ತಮ್ಮ ಸತಿ ವಿಧೇಯಳಾಗಲೆಂದು, ಹೆಂಗಸಾದರೆ ತಮ್ಮ ಪತಿ ಒಲಿಯಲೆಂದು ಬೇಡಿ, ಮಾಸ್ತಿಗೆ ಕುಂಕುಮವಿರಿಸಿ ಹೊರಗೆ ಬಂದು ಕೆರೆಯಲ್ಲಿ ಒಂದು ತೆಂಗಿನಕಾಯಿ ಹಾಕಿ ಹೋಗುವರು. ಇದು ಗುರುವಾರದ ದಿನ ಮರುದಿನ ಶುಕ್ರವಾರ ಹೇಗೂ ಅದು ಅಮ್ಮನವರ ದಿವಸ. ಆ ದಿನ ಹರಕೆ ಹೊತ್ತವರು ಅಲ್ಲಿಗೆ ಬಂದೇ ಬರುತ್ತಾರೆ. ತಾವು ಎಸೆದ ತೆಂಗಿನಕಾಯಿ ಏನಾಯಿತು ಎಂದು ನೋಡಲು. ಒಂದು ದಿವಸವೂ ಒಬ್ಬರ ಕಣ್ಣಿಗೂ ಅದು ಕಾಣಿಸಿಲ್ಲವಂತೆ. 'ಸರಸಮ್ಮನಿಗೆ ಒಪ್ಪಿಸಿದ

ಕೆಲಸ, ಗುಟ್ಟು ರಟ್ಟಾದೀತೆ?' ಎಂದುಕೊಂಡು ಭಕ್ತರು ಸಂತೋಷದಿಂದ ಮರಳುತ್ತಾರೆ. ಸತಿಪತಿಯರು ಎಂಥವರೇ ಇರಲಿ, ಅವರಲ್ಲಿನ ಮನೋಕ್ಲೇಶಗಳು ಸಾವಿರವಿರಲಿ ಕೈ ಹಿಡಿದ ಸತಿ ಆ ಮೇಲೆಯೂ ಸತಿಯೇ, ಸರಸಮ್ಮ 'ನೀಲಾಚಲಯ್ಯ ಸತ್ತ' ಎಂದು ಕುಂಕುಮವನ್ನು ಅಳಿಸಿ, ಕೆಂಪು ಸೀರೆ ಉಡಲಿಲ್ಲ."[೧೪] (ಸರಸಮ್ಮನ ಸಮಾಧಿ.ಪುಟ.೭-೮)

ಕಾದಂಬರಿಕಾರರು ಪುರುಷ ಪ್ರಧಾನ ಸಮಾಜದ ಹಿಡಿತದ ಗಂಭೀರತೆಯನ್ನು ಪ್ರಶ್ನಿಸುತ್ತಾರೆ. ದಾಂಪತ್ಯದಲ್ಲಿ ಸುಖತರುವಂತೆ ಸ್ತ್ರೀಯರು ಮತ್ತು ಪುರುಷರಾದಿಯಾಗಿ ಆಕೆಗೆ ಮೊರೆಹೋಗುವವರೆ, ಕಾದಂಬರಿಯಲ್ಲಿನ ಜಾನಕಿ, ಸುನಾಲಿನಿ, ಮುಂತಾದವರು ಸುಖೀ ದಾಂಪತ್ಯಕ್ಕಾಗಿ ಸರಸಮ್ಮನ ಮೊರೆಹೋಗುವುದನ್ನು ಕಾಣುತ್ತೇವೆ. ಜಾನಕಿಗೆ ಒಮ್ಮೆ ಸೀತಕ್ಕ ಹೇಳುವ ಮಾತೆಂದರೆ, "ಜಾನಕಿ ನೀನು ಎಷ್ಟೇ ಹೇಳು ತಾರಾಬಲ-ಗೀರಾಬಲ ಎಲ್ಲ ಸುಳ್ಳು, ನಾವು ಪಡೆದು ಬಂದದ್ದು ಯಾರಿಂದಲೂ ತಪ್ಪಿಸಲಿಕ್ಕೆ ಸಾಧ್ಯವಿಲ್ಲ. ಮನೋಬಲ-ಅದು ಗಟ್ಟಿ" ಎನ್ನುತ್ತಾಳೆ. ಅಂದರೆ ಇಲ್ಲಿನ ಸೀತಕ್ಕ ಸಂಪ್ರದಾಯವನ್ನು ವಿರೋಧಿಸುವವಳು. ಮನೋಬಲ ಇದ್ದರೆ ಎಲ್ಲವನ್ನೂ ಗೆಲ್ಲಬಹುದು ಎಂಬ ದಿಟ್ಟ ನಿಲುವನ್ನು ತಳೆದಿರುವವಳು. ಕಾದಂಬರಿಕಾರರು ಸೀತಕ್ಕನಂತಹ ಸಾಮಾನ್ಯ ಪಾತ್ರದ ಮೂಲಕ ಸಂಪ್ರದಾಯ ವಿರೋಧಿ ನಿಲುವುಗಳನ್ನು ಸ್ಪಷ್ಟಪಡಿಸುತ್ತಿದ್ದಾರೆ.

ಇದೇ ರೀತಿಯ ಅಭಿಪ್ರಾಯವನ್ನು ಮುಂದುವರಿದು ಸುನಾಲಿನ ಮತ್ತು ಭಾಗೀರಥಿ ಪಾತ್ರಗಳಲ್ಲೂ ಗುರುತಿಸಬಹುದಾಗಿದೆ. ಸುನಾಲಿನಿ ವಿದ್ಯಾವಂತಳಾದರೂ ಸಂಪ್ರದಾಯದ ಹಿಡಿತದಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗದವಳು. ಸುನಾಲಿನಿ ತನ್ನ ಪತಿ ಬಗ್ಗೆ ತಾನೇ ಹಾಕಿಕೊಳ್ಳುವ ಪ್ರಶ್ನೆಗಳೆಂದರೆ 'ಸಂಸಾರಕ್ಕೆ ನೆರವಾಗದ ವಿದ್ಯೆ ಎಷ್ಟಿದ್ದರೇನು? ಎಂಬುದು. ಅನಂತರ ಸುನಾಲಿನಿ ಆಡುವ ಒಂದೊಂದು ಮಾತು ಕಾದಂಬರಿಯಲ್ಲಿ ತುಂಬಾ ಸೂಕ್ಷ್ಮವಾದವುಗಳು. ಸುನಾಲಿನಿ ಸ್ವತಂತ್ರಳೂ ಆಗದ, ಗಂಡನ ಮನೆಯಲ್ಲಿ ತೃಪ್ತಿಯನ್ನೂ ಕಾಣದೆ ಒದ್ದಾಡುವವಳು. ಮದುವೆ ಎನ್ನುವ ಸಂಸ್ಥೆ ಬಗ್ಗೆ, ಸಮಾಜದ ಬಗ್ಗೆ ತುಂಬಾ ಯೋಚಿಸುವವಳು ಸುನಾಲಿನಿ. ತ.ರಾ.ಸು. ಅವರ 'ಬಿಡುಗಡೆಯ ಬೇಡಿ' ಕಾದಂಬರಿಯಲ್ಲಿನ ಪ್ರಭಾವತಿ ಈ ತರಹದ ಸಂಧಿಗ್ಧಕ್ಕೆ ಸಿಲುಕಿರುವವಳೇ. ಮದುವೆ, ಪುರುಷನ ಆಯ್ಕೆ, ಸ್ತ್ರೀಸ್ವಾತಂತ್ರ್ಯ ಮುಂತಾದ ವಿಚಾರದಲ್ಲಿ ಸಂಪ್ರದಾಯವನ್ನ ಧಿಕ್ಕರಿಸಿ ಆಧುನಿಕ ರೀತಿಯ ಆಲೋಚನೆ ಮಾಡುತ್ತಾಳೆ. ಆದರೆ ಸ್ವತಂತ್ರ ಸಿಕ್ಕರೂ ಬದುಕಲ್ಲಿ ನೆಮ್ಮದಿ ಕಳೆದುಕೊಳ್ಳುತ್ತಾಳೆ. ಕಾರಂತರ ಕಾದಂಬರಿಗಳಲ್ಲಿನ ಸ್ತ್ರೀಯರು(ಸುನಾಲಿನಿ ಮುಂತಾದವರು) ಆಧುನಿಕತೆ ಬಯಸಿದರೂ ಪರಂಪರೆಯನ್ನ, ಸಿದ್ಧಚೌಕಟ್ಟೊಂದನ್ನ ಸಂಪ್ರದಾಯವನ್ನ ಮೀರದವರು. ತ.ರಾ.ಸು. ಅವರ ಕಾದಂಬರಿಗಳಲ್ಲಿನ ಸ್ತ್ರೀಯರು ಸಂಪ್ರದಾಯವನ್ನು ಮೀರಿ ಆಧುನಿಕ ಬದುಕಿಗೆ ಹೊಂದಿಕೊಂಡರೂ ಸಾಮಾಜಿಕವಾದ ನೆಮ್ಮದಿ ಕಳೆದುಕೊಂಡು ಅತಂತ್ರ ಸ್ಥಿತಿಗೆ ತಲುಪುತ್ತಾರೆ. ಸಮಾಜವನ್ನು ಪ್ರಶ್ನೆ ಮಾಡುವವರು ಕಾರಂತರ ಕಾದಂಬರಿಗಳಲ್ಲಿನ ಸ್ತ್ರೀಯರು (ತ.ರಾ.ಸು. ಅವರ ಬಂಗಾರಿ ಕಾದಂಬರಿಯಲ್ಲಿನ

ಸ್ತ್ರೀಯರು ಮತ್ತು ಕಾರಂತರ ಮೈಮನಗಳ ಸುಳಿಯಲ್ಲಿ) ಭಾಗೀರಥಿ ಚಂದ್ರಯ್ಯನೊಡನೆ ಅನುರಕ್ತಿ ಹೊಂದುವ ಆಕಾಂಕ್ಷೆಯನ್ನು ಹಿರಣ್ಯನಲ್ಲಿ ಹೇಳುವುದು ಕೂಡ ಬದುಕಿನ ಬಗ್ಗೆ ಆತ್ಮಾವಲೋಕನ ಮಾಡಿಕೊಳ್ಳುವ ಚಿತ್ರಣ ಕಂಡು ಬರುತ್ತದೆ. ಸುಖ ಸಾಮರಸ್ಯಕ್ಕೆ ತೆರೆದ ಮನಸ್ಸು ಇರಬೇಕೆನ್ನುವ ಆದರ್ಶ ಮನೋಭಾವ ಇಲ್ಲಿ ಕಂಡು ಬರುತ್ತದೆ. ಹಾಗೆಯೇ ನಾಗವೇಣಿ ಸೀತರಾಮರ ದಾಂಪತ್ಯದ ಬದುಕೂ ಕೂಡ ದೊಡ್ಡ ಬಿರುಕಿನಿಂದಲೇ ಕೂಡಿದೆ. ಇವರೀರ್ವರ ಬದುಕಿನ ಮಧ್ಯೆ ಇರುವ ಬಿರುಕೆಂದರೆ ಸಂಕೋಚ. ಹೀಗೆ ಇಡೀ ಕಾದಂಬರಿಯಲ್ಲಿ ಗಮನಾರ್ಹ ಅಂಶಗಳೆಂದರೆ ನಂಬಿಕೆಗಳನ್ನು ಪ್ರಶ್ನೆಮಾಡುವುದು ಅದಕ್ಕೆ ಉತ್ತರ ಹುಡುಕುವುದು. ಎರಡನ್ನೂ ಮಾಡುವ ಪ್ರಯತ್ನ ಕಾದಂಬರಿಯಲ್ಲಿ ಸಾಗುತ್ತಾ ಹೋಗುತ್ತದೆ.

ಹೀಗೆ ಕಾರಂತರ ಕಾದಂಬರಿಗಳಲ್ಲಿನ ಗಂಡು ಹೆಣ್ಣುಗಳ ಸಂಬಂಧ ಪವಿತ್ರವಾದದ್ದು ಸಂಪ್ರದಾಯವನ್ನು ಮೀರಲಾರದ ಬಂಧವಿದು. "ಗಂಡು ಹೆಣ್ಣಿನ ಸಂಬಂಧವೆನ್ನುವುದು ಮೂಲಭೂತವಾಗಿ ನೈಸರ್ಗಿಕ ಪ್ರವೃತ್ತಿಯೊಂದರ ವಿಷಯವಾದರೂ ಅದನ್ನು ಸಾಮಾಜಿಕವಾದ ನೆಲೆಯೊಂದರಲ್ಲಿ ಅರ್ಥಪೂರ್ಣವಾಗಿಸುವ ಪ್ರಯತ್ನಗಳು ಹಿಂದಿನಿಂದಲೂ ನಡೆದಿವೆ. ತಾತ್ಕಾಲಿಕ ಮೋಹವು ಚಿರಕಾಲ ಉಳಿಯಬೇಕಾದರೆ ಗಂಡು-ಹೆಣ್ಣುಗಳ ಮನೋವೃತ್ತಿ, ಆಸಕ್ತಿಯಲ್ಲಿ, ಉದ್ದೇಶದಲ್ಲಿ, ಸ್ನೇಹಗಳಲ್ಲಿ ಹೊಂದಿಕೊಳ್ಳಬೇಕು" (ಶಿವರಾಮ ಕಾರಂತರ ಎರೆಡು ಅಧ್ಯಯನಗಳು. ಟಿ.ಪಿ. ಅಶೋಕ. ಪುಟ.೩೧. ಅಕ್ಷರ ಪ್ರಕಾಶನ, ಹೆಗ್ಗೋಡು ಸಾಗರ, ಕರ್ನಾಟಕ.೧೯೯೬). ಅಂದರೆ ಕಾರಂತರ ಕಾದಂಬರಿಗಳಲ್ಲಿನ ಸ್ತ್ರೀಯರು ಪುರುಷ ಸಮಾಜದ ವಿರುದ್ಧ ಸೆಟೆದು ನಿಲ್ಲುವವರಲ್ಲ ಎಂಬುದನ್ನು ಈ ಹೇಳಿಕೆಯಿಂದ ಗ್ರಹಿಸಬಹುದು.

ಈ ರೀತಿ ಸ್ತ್ರೀಪ್ರಧಾನ ಕನ್ನಡ ಕಾದಂಬರಿಗಳನ್ನು ಬರೆದವರೆಲ್ಲರೂ ಪುರುಷರೇ ಆದರೂ ಆ ಕಾದಂಬರಿಗಳೆಲ್ಲ ಸ್ತ್ರೀಸಂವೇದನಾ ಪರವಾದ ಕಾದಂಬರಿಗಳಲ್ಲಿ ಕಾದಂಬರಿಗಳೆ, ಆಧುನಿಕತೆ, ರಾಷ್ಟ್ರೀಯ ಪುನರುಜ್ಜೀವನದ ಮೌಲ್ಯಗಳು, ಸುಧಾರಣಾಯುಗದ ಪ್ರಭಾವ ಎದ್ದುಕಾಣುತ್ತವೆ. ಆಧುನಿಕ ಕನ್ನಡ ಕಾದಂಬರಿಗಾರರು ಹೆಚ್ಚಾಗಿ ಸ್ತ್ರೀಸಂವೇದನೆಯಂತಹ ಕೃತಿಗಳನ್ನು ಕೊಡುವಲ್ಲಿ ಶ್ರಮಿಸಿದ್ದಾರೆ. ಪುರುಷರಷ್ಟೇ ಅಲ್ಲದೆ 'ಸ್ತ್ರೀಸಮಸ್ಯೆಗಳನ್ನು ಕುರಿತ ಕೃತಿಗಳನ್ನು ರಚಿಸಿದ ಮೊದಲ ಮಹಿಳೆಯೆಂದರೆ, ತಿರುಮಲಾಂಬ. ಇವರ 'ವಿಧವಾ ಕರ್ತವ್ಯ' (೧೯೧೩), ಸುಶೀಲೆ (೧೯೧೩). 'ವಿದ್ಯುಲ್ಲತಾ' (೧೯೧೪), 'ಮಾತೃನಂದಿನಿ' (೧೯೧೬) ಮುಂತಾದ ಕಾದಂಬರಿಗಳನ್ನು ಹೆಸರಿಸಬಹುದು. ಅನಂತರ ಆರ್. ಕಲ್ಯಾಣಮ್ಮ ಅವರ ಪ್ರಿಯಂವದಾ (೧೯೧೭) ಹೆಸರಿಸಬಹುದು.

ತ.ರಾ.ಸು ಅವರ ಕಾದಂಬರಿಗಳಲ್ಲಿ ಸ್ತ್ರೀಸಂವೇದನೆ ಕುರಿತು ಸಂಶೋಧನೆ ಮಾಡುವುದು ನನ್ನ ಉದ್ದೇಶವಾಗಿರುವುದರಿಂದ ಈ ಅಧ್ಯಾಯದಲ್ಲಿ ಆರಂಭದ ಕೆಲವು ಪ್ರಾತಿನಿದಿಕವಾಧ ಸ್ತ್ರೀಸಂವೇಧನಾ ಪರವಾದ ಧೋರಣೆ ಹೊಂದಿರುವ ಕಾದಂಬರಿಗಳ ಬಗ್ಗೆ ಮಾತ್ರ ಅಧ್ಯಯನ ಮಾಡಿರುತ್ತೇನೆ.

## ಅಡಿ ಟಿಪ್ಪಣಿಗಳು :

| | |
|---|---|
| ೧) ಗುಲ್ವಾಡಿ ವೆಂಕಟರಾವ್ | ಇಂದಿರಾಬಾಯಿ<br>ಪುಟ.೦೫ |
| ೨) ಅದೇ | ಪುಟ.೧೫೧-೧೫೨ |
| ೩) ಅದೇ | ಪುಟ.೧೫೩ |
| ೪) ಅದೇ | ಪುಟ.೧೯೨ |
| ೫) ಬೋಳಾರ ಬಾಬುರಾಯ | ವಾಗ್ದೇವಿ, ಪುಟ_೧೦೭ |
| ೬) ಅದೇ | ಪುಟ.೨೨೬ |
| ೭) ಅದೇ | ಪುಟ_೧೦೫ |
| ೮) ಕೀರ್ತಿನಾಥ ಕುರ್ತುಕೋಟಿ | ಯುಗಧರ್ಮ ಹಾಗೂ ಸಾಹಿತ್ಯದರ್ಶನ,<br>ಪುಟ. ೨೫೧ |
| ೯) ಕುವೆಂಪು | ಕಾನೂರು ಹೆಗ್ಗಡಿತಿ<br>ಪುಟ.೩೬೫ |
| ೧೦) ಕುವೆಂಪು | ಕಾನೂರು ಹೆಗ್ಗಡಿತಿ<br>ಪುಟ:೪೬೨ |
| ೧೧) ಕುವೆಂಪು | ಕಾನೂರು ಹೆಗ್ಗಡಿತಿ |
| ೧೨) ಶಿವರಾಮ ಕಾರಂತ | ಸರಸಮ್ಮನ ಸಮಾಧಿ<br>ಮುನ್ನುಡಿ ಮಾತು.ಪುಟ_೦೭ |
| ೧೩) ಅದೇ | ಪುಟ.೦೭-೦೮ |
| ೧೪) ಅದೇ | ಪುಟ.೭-೮. |

# ಅಧ್ಯಾಯ ೪

# ಮಹಿಳಾ ಆಂದೋಲನಗಳು ಮತ್ತು ತ.ರಾ.ಸು ಅವರ ಕಾದಂಬರಿಗಳು

ಅಧ್ಯಾಯ – ೪

# ಮಹಿಳಾ ಆಂದೋಲನಗಳು ಮತ್ತು ತ.ರಾ.ಸು ಅವರ ಕಾದಂಬರಿಗಳು;

## ೪.೧ ಮಹಿಳಾ ಸಂವೇದನೆ :

ಸ್ತ್ರೀಸಂವೇದನೆ ಪ್ರಾಚೀನ ದಿನಗಳಿಂದಲೂ ಬೇರೆ ಬೇರೆ ಆಯಾಮದಲ್ಲಿ ಚರ್ಚಿಸಲ್ಪಟ್ಟಿದೆ. ಸ್ತ್ರೀಸಂವೇದನೆ ಎಂದರೆ ಸ್ತ್ರೀ ಪರವಾದ ಧೋರಣೆ ತಳೆದಿರುವುದು ಎಂದರ್ಥ. "ಸಂವೇದನೆ" ಎನ್ನುವ ಪದಕ್ಕೆ ಭಿನ್ನವಾದ ಅರ್ಥಗಳಿವೆ. ಸಾಮಾಜಿಕವಾಗಿ, ಸಾಹಿತಕ್ಯವಾಗಿ, ಆರ್ಥಿಕವಾಗಿ ರಾಜಕೀಯವಾಗಿ ಸಂವೇದನೆ ಎನ್ನುವ ಪದ ಬೇರೆ ಬೇರೆ ಸ್ತರದಲ್ಲಿ ಬಳಸಲ್ಪಟ್ಟಿದೆ. ಇಂಗ್ಲಿಷ್‌ನಲ್ಲಿ ಬಳಕೆಯಾಗುವ "*Sensibility*" ಗೆ ಸಂವಾದಿಯಾಗಿ ಕನ್ನಡದಲ್ಲಿ "ಸಂವೇದನೆ" ಎಂಬ ಪದವನ್ನು ಬಳಸಲಾಗಿದೆ. ಜೊತೆಗೆ *awareness, knoweledge* ಗಳನ್ನೂ ಹೇಳಲಾಗಿದೆ.

Sensibility ಎನ್ನುವ ಪದ new oxford The squarus of English. Indian Edition p.no.861 ರಲ್ಲಿ ಈ ರೀತಿ ಪ್ರಯೋಗವಾಗಿದೆ.

"The study of literature leads to a growth of intelligence and sensibility SENSITIVITY, sensitiveness, finer feelings, delicacy, subtlety taste, discrimination, discernment, understandings, insight, empathy, appreciation, awareness of feelings of others, feelings, intuitiveness, responsiveness, receptivity, perceptiveness, awareness".

ಹೀಗೆ ಬಳಕೆಯಾಗಿರುವ "ಸಂವೇದನೆ" ಎನ್ನುವ ಪದದ ಅರ್ಥವನ್ನು ಈ ರೀತಿ ಗ್ರಹಿಸಬಹುದಾಗಿದೆ. ಸಾಹಿತ್ಯದ ಅಧ್ಯಯನ ನಮ್ಮನ್ನು ಈ ಮುಂದೆ ಪ್ರಸ್ತಾಪಿಸುವ ಅಂಶಗಳ ಕಡೆಗೆ ಗಮನ ಸೆಳೆಯುತ್ತದೆ. ಬುದ್ಧಿ, ಸಂವೇದನೆ,ಸೂಕ್ಷ್ಮತೆ, ಕುಶಾಲಮತಿ, ಉದಾತ್ತಭಾವನೆಗಳು, ಸದಭಿರುಚಿ, ನಿಗೂಢತೆ, ರುಚಿ,ಭಿನ್ನತೆ, ನೋಡುವಿಕೆ, ಅರ್ಥೈಸುವಿಕೆ, ಒಳನೋಟ, ಕರುಣೆ, ಶ್ಲಾಘನೆ, ಜಾಗ್ರತೆ, ಬೇರೊಬ್ಬರ ಭಾವನೆಗಳು, ಅನಿಸಿಕೆ, ಅಂತರ್‌ಮುಖತನ, ಪ್ರತಿಕ್ರಿಯಿಸುವಿಕೆ, ಗ್ರಹಿಸುವಿಕೆ, ಪರಿಭಾವಿಸುವಿಕೆ, ಎಚ್ಚರಾವಸ್ಥೆ. ಈ ಮೇಲಿನ ಎಲ್ಲ ಪದ ಬಳಕೆಗಳು ಸಮಾನಾರ್ಥ ಪದಗಳೇ ಆಗಿದ್ದು, ವಿಭಿನ್ನ ಸಂದರ್ಭಗಳಲ್ಲಿ ಭಿನ್ನ ಭಿನ್ನವಾಗಿ ಬಳಕೆಯಾಗಿವೆ. ಈ ಹಿನ್ನೆಲೆಯಲ್ಲಿ "ಸಂವೇದನೆ" ಪದದ ಸ್ವರೂಪ ಮತ್ತು ಅದರ ವ್ಯಾಪ್ತಿಯನ್ನು ಸೂಕ್ಷ್ಮವಾಗಿ ಅರ್ಥೈಸಬಹುದಾಗಿದೆ.

ಮಹಿಳಾ ಸಂವೇದನೆ ಇತ್ತೀಚಿನ ದಿನಗಳಲ್ಲಿ ತುಂಬಾ ಚರ್ಚೆಯಾಗುತ್ತಿರುವ ವಿಷಯವಾಗಿದೆ. ಆದರೆ ಈ ಪದದ ಅರ್ಥವ್ಯಾಪ್ತಿ, ವೈಶಾಲ್ಯತೆ ತುಂಬಾ ದೀರ್ಘವಾದುದು ಮತ್ತು ಪ್ರಾಚೀನವಾದುದು. ವೇದಗಳ ಕಾಲದಿಂದಲೂ ಸ್ತ್ರೀಸಂವೇದನೆ ಎನ್ನುವುದು ಬಳಕೆಯಲ್ಲಿದ್ದು ಕಾಲಕಾಲಕ್ಕನುಗುಣವಾಗಿ ವಿವಿಧ ನೆಲೆಗಟ್ಟಿನಲ್ಲಿ ಚರ್ಚಿಸಲ್ಪಟ್ಟಿದೆ. ಕನ್ನಡ ಸಾಹಿತ್ಯದಲ್ಲಿಯಂತೂ ಸ್ತ್ರೀಸಂವೇದನೆ ಚರ್ಚೆಯಾಗುತ್ತಲೇ ಬಂದಿದೆ. "ಸ್ತ್ರೀಸಂವೇದನೆಯ ಮಾತು ಇತ್ತೀಚಿನದಾದರೂ ಸಂವೇದನೆ ಇತ್ತೀಚಿನದಲ್ಲ. ಸಂವೇದನೆಯ ಸ್ವರೂಪ ಕಾಲ ಕಾಲಕ್ಕೆ ಬೇರೆ ರೀತಿಯಾಗಿರಬಹುದು. ಬೇರೆ ನೆಲೆಗಳಿಂದ ಪ್ರೇರಿತವಾಗಿರಬಹುದು. ಸ್ತ್ರೀ ಸಂವೇದನೆ ಎಂದು ನಾವು ಈಗ ಗುರುತಿಸುವ ಪರಿಭಾಷೆ ಮತ್ತು ಪರಿಕಲ್ಪನೆಗಳನ್ನು ಸ್ಪಷ್ಟಪಡಿಸಿಕೊಂಡು ಹಿಂದಿನ ಸಾಹಿತ್ಯಾಸಕ್ತಿಯನ್ನು ನೋಡಿದಾಗ ಇದಕ್ಕೆ ಒಪ್ಪದ ವಿಷಯಗಳು ಹೊರಬೀಳಬಹುದು. ಹೊರಬೀಳುವುದು ತಪ್ಪಲ್ಲ ಅಧ್ಯಯನದ ನೆಲೆಯಲ್ಲಿ ಹೊರತೆಗೆಯುವ ಪ್ರಕ್ರಿಯೆಯೇ ಈ ಚಿಂತನೆಯ ತುಡಿತವಾಗಿದೆ. ಆದ್ದರಿಂದ ಕನ್ನಡ ಸಾಹಿತ್ಯಾಭಿವ್ಯಕ್ತಿಯಲ್ಲಿ ಸ್ತ್ರೀ ಮತ್ತು ಸಂವೇದನೆಗಳು ಕಾಣಿಸಿಕೊಂಡ ಕ್ರಮವನ್ನು ಗ್ರಹಿಸುವ, ವಿವರಿಸುವ ಮತ್ತು ವಿಮರ್ಶಿಸುವ ಪ್ರಯತ್ನವನ್ನು ಈ ವಿಷಯವು ಒಳಗೊಳ್ಳಲಿದೆ."[೧] ಹೀಗೆ ಸ್ತ್ರೀ ಸಂವೇದನೆ ತನ್ನ ವ್ಯಾಪ್ತಿಯಲ್ಲಿ ಅಧ್ಯಯನ ಮಾಡುವ ವಿಷಯ ಮತ್ತು ಅದರ ಸ್ವರೂಪವನ್ನು ತಿಳಿಸುತ್ತದೆ.

ಕನ್ನಡ ಸಾಹಿತ್ಯದಲ್ಲಿ ಸ್ತ್ರೀಸಂವೇದನೆ ವೇದಗಳ ಕಾಲದಿಂದಲೂ ಬಳಕೆಯಲ್ಲಿದೆ. ಮುಂದುವರೆದು ಶಾಸನಗಳಲ್ಲಿ, ಹಳಗನ್ನಡದಲ್ಲಿ, ನಡುಗನ್ನಡದಲ್ಲಿ, ವಚನಗಳಲ್ಲಿ ಆಧುನಿಕ ಸಾಹಿತ್ಯದಲ್ಲಿ ಹೀಗೆ ಎಲ್ಲ ಕಾಲ ಮತ್ತು ಸಾಹಿತ್ಯ ಪಂಥದಲ್ಲಿ ಬಳಸಲ್ಪಟ್ಟಿದೆ. ಹಾಗೆ ನೋಡುವುದಾದರೆ ಕಾಲ ಮತ್ತು ಮನುಷ್ಯನ ಸಂಬಂಧ ವಿಶಿಷ್ಟವಾದುದು. ಯಾವುದೇ ಒಂದು ಕಾಲ ಮೇಲ್ನೋಟಕ್ಕೆ ಒಂದು ಸ್ವತಂತ್ರ ಪ್ರತ್ಯೇಕ ಘಟಕದಂತೆ ಕಂಡರೂ ಪ್ರತ್ಯೇಕವಲ್ಲ. ಪಾರಂಪರಿಕ ಗುಣಲಕ್ಷಣಗಳಿಂದ ಅದು ನಿರಂತರವಾದುದಾಗುತ್ತದೆ. ಅಂದರೆ ವರ್ತಮಾನದಲ್ಲಿ ಭೂತಕಾಲದ ಲಕ್ಷಣಗಳಿದ್ದೇ ಇರುತ್ತವೆ. ಹಾಗೆಯೇ ಭೂತಕಾಲವೂ ಒಂದು ಕಾಲಕ್ಕೆ ವರ್ತಮಾನವಾಗಿರುತ್ತದೆ. ಆ ಗುಣಗಳಿಂದಲೇ ಮುಂದಿನದಕ್ಕೆ ಪೂರಕವೂ ಆಗಿರುತ್ತದೆ. ಪ್ರಸ್ತುತ ಸಂದರ್ಭದಲ್ಲಿ ಮನುಷ್ಯ ಎದುರಿಸುವ ಸಮಸ್ಯೆ ಮತ್ತು ಸವಾಲುಗಳೂ ವಿಭಿನ್ನವಾಗಿವೆ.

ಪ್ರಾಚೀನ ಕನ್ನಡಸಾಹಿತ್ಯದಲ್ಲಿ ಸ್ತ್ರೀಬದುಕು ಕಂಡುಬರುವುದು ಸಾಮಾನ್ಯವಾಗಿ ಮನುಸ್ಮೃತಿಯಿಂದ ಪ್ರೇರಿತಗೊಂಡ ದೇವತೆ ಇಲ್ಲವೆ ರಕ್ಕಸಿಯಾಗಿ. ಆಕೆಯನ್ನು ಹೆಣ್ಣಾಗಿ ಕಂಡಿರುವುದು ವಿರಳವೆಂದೇ ಹೇಳಬಹುದು. ಒಟ್ಟಾರೆ ನಮ್ಮ ಬಹುತೇಕ ಸಾಂಸ್ಕೃತಿಕ ಚರಿತ್ರೆಯಲ್ಲಿ ಹೆಣ್ಣು ವರ್ಣನೆಯ ವಸ್ತುವಾಗಿಯೇ ಕಂಡು ಬಂದಿದ್ದಾಳೆ. ಹೆಣ್ಣು ಹೆಂಡತಿಯಾಗಿ, ತಾಯಿಯೂ, ಅಜ್ಜಿಯಾಗಿ ಮನೆಯ ಒಳಗೆ ಮತ್ತು ಹೊರಗೆ ಪುರುಷನಿಗೆ ಸರಿಸಮನಾಗಿ ದುಡಿದರೂ ಎರಡನೆ ದರ್ಜೆಯ ಸ್ಥಾನವನ್ನೆ ಆಕೆಗೆ ಕಲ್ಪಿಸಿದ್ದು. ವೇದಗಳ ಕಾಲದಲ್ಲಿ ಆಕೆಗೆ ಹೆಚ್ಚಿನ ಸ್ಥಾನ-ಮಾನಗಳು

ಲಭಿಸಿದ್ದವು. ಆದರೆ ಪುರಾಣ ಮತ್ತು ಇತಿಹಾಸದಲ್ಲಿ ಆಕೆ ನಿರ್ಲಕ್ಷಿಸಲ್ಪಟ್ಟಳು. ಮಹಾಕಾವ್ಯಗಳ ಸಂದರ್ಭಕ್ಕೆ ಆಕೆಯ ಬದುಕು ಇನ್ನೂ ಶೋಚನೀಯ ಸ್ಥಿತಿ ತಲುಪಿತು. ಕಾರಣ ಹೆಣ್ಣನ್ನು ಭೋಗವಸ್ತುವೆಂದು ಭಾವಿಸಿದ್ದ ರಾಜಪ್ರಭುತ್ವ ಬೌದ್ಧಧರ್ಮದ ಕಾಲಕ್ಕೆ ಅವಳ ಶೋಚನೀಯ ಸ್ಥಿತಿ ಸ್ವಲ್ಪ ಸುಧಾರಿಸಲ್ಪಟ್ಟಿತೆಂದು ಹೇಳಬಹುದಾಗಿದೆ. ಕಂತಿಯು, ಶ್ರಾವಕಿ, ಯೋಗಿನಿಯಾಗಿ ಕಂಡುಬಂದಳು. ಅನಂತರ ಮನುವಿನ ಕಾಲಕ್ಕೆ ತುಂಬಾ ಬಿಗಿ ನಿಲುವನ್ನು ತಳೆದದ್ದು ಕಂಡು ಬಂದಿತು. ಮಹಿಳೆಯರು ಪೂಜೆಗೊಳ್ಳುವಲ್ಲಿ ದೇವತೆಗಳಿರುತ್ತಾರೆಂದು ಹೇಳುತ್ತಲೇ ಮತ್ತೊಂದೆಡೆ ಹೆಣ್ಣು ಸ್ವಾತಂತ್ರ್ಯಕ್ಕೆ ಅರ್ಹಳಲ್ಲವೆಂದು ದಾಖಲಾಗಿದೆ. ಜೈನಧರ್ಮದಲ್ಲೂ ಸ್ವಲ್ಪ ಮಟ್ಟಿನ ಹೆಣ್ಣಿನ ಬದುಕಲ್ಲಿ ಬದಲಾವಣೆ ಕಂಡುಬಂದಿತು. ಅನಂತರ ಶೈವಧರ್ಮ ಮತ್ತು ವಚನ ಚಳವಳಿ ಸಂದರ್ಭದಲ್ಲಿ ಹೆಣ್ಣಿನ ಬದುಕಲ್ಲಿ ಸುಧಾರಣೆಯಾದದ್ದನ್ನು ಗಮನಿಸ ಬಹುದಾಗಿದೆ.

ವೇದಗಳ ಕಾಲದಲ್ಲಿ ಗಂಡು ಮಗುವಿಗೆ ದೊರೆತ ಆದ್ಯತೆ ಹೆಣ್ಣು ಮಗುವಿಗೆ ದೊರೆಯಲಿಲ್ಲ. ಪಿತೃಪ್ರಧಾನ ಕುಟುಂಬಗಳು ಬೆಳೆದು ಬಂದವು. ಪಂಪಪೂರ್ವಯುಗದ ಕೃತಿ 'ವಡ್ಡಾರಾಧನೆ'ಯಲ್ಲಿ (ಸುಕುಮಾರ ಸ್ವಾಮಿ ಕಥೆ) ಸೋಮಶರ್ಮ ಮತ್ತು ತ್ರಿವೇದಿ ಮಕ್ಕಳನ್ನು ಬೇಡಿ ನಾಗದೇವತೆಯನ್ನು ಪೂಜಿಸಿದಾಗ ಹೆಣ್ಣುಮಗು ಜನಿಸಿತ್ತದೆ. ಆದಿಪುರಾಣದಲ್ಲಿ ತೀರ್ಥಂಕರನ ಜನನಕ್ಕೂ ಮುಂಚೆ ಇಂದ್ರ ತನ್ನ ಪರಿವಾರವನ್ನು ಕರೆಸಿ ನಾಭಿರಾಜನ ಪತ್ನಿಯಾದ ಮರುದೇವಿಯ ಗರ್ಭವನ್ನು ಪವಿತ್ರವಾಗಿರಿಸುವನು. ಪಂಪಭಾರತದಲ್ಲಿ ದ್ರೋಣನಿಂದ ಅವಮಾನಿತನಾದ ದ್ರುಪದನು ಆತನನ್ನು ಕೊಲ್ಲುವ ಮಗನನ್ನು, ವಿಕ್ರಮಾರ್ಜುನನಿಗೆ ಹೆಂಡತಿಯಾಗುವಂತಹ ಒಬ್ಬಳು ಮಗಳನ್ನು ಪಡೆದಲ್ಲದೆ ಇರುವುದಿಲ್ಲ ಎಂದು ಯಾಗವನ್ನು ಕೈಗೊಂಡು ದೃಷ್ಟದ್ಯುಮ್ನ ಮತ್ತು ದ್ರೌಪದಿಯನ್ನು ಪಡೆಯುತ್ತಾನೆ.

'ಧರ್ಮಾಮೃತ'ದಲ್ಲಿ ನಯಸೇನನು ಹೆಣ್ಣುಮಕ್ಕಳ ಬಗ್ಗೆ ಸಾಕಷ್ಟು ವಿವರಗಳನ್ನು ಕೊಟ್ಟಿದ್ದಾನೆ. ಗಂಡುಮಗು ಬೇಕೆಂದು ವರ ಕೇಳಿದ್ದರೆ ಹೆಣ್ಣುಮಗು ಹುಟ್ಟಿತೆಂದು ಅದನ್ನು ಹಿಂದಿರುಗಿಸುವ ವಿಚಾರ ಕರ್ಣಪಾರ್ಯನ 'ನೇಮಿನಾಥಪುರಾಣ'ದಲ್ಲಿ ಉಕ್ತವಾಗಿದೆ. ಇದು ಹೆಣ್ಣಿನ ಬಗೆಗಿನ ತಾತ್ಸಾರ ಭಾವನೆ ತಿಳಿಸುತ್ತದೆ. ವಾತ್ಸಾಯನನ ಪ್ರಕಾರ ಹೆಣ್ಣಿಗೆ ಕಲಿಕೆಯ ಗುರು ಹೆಣ್ಣೇ ಇರಬೇಕೆಂದು ತಿಳಿದು ಬರುತ್ತದೆ. 'ರಾಮಚಂದ್ರಚರಿತ ಪುರಾಣ'ದಲ್ಲಿ ಸೀತೆಯು ಭರತನ ನಾಟ್ಯಶಾಸ್ತ್ರದ ಕಲೆಗಳಲ್ಲಿ ಪರಿಣತಿ ಪಡೆದಿದ್ದಳೆಂದು ತಿಳಿದು ಬಂದಿದೆ. "ಈ ರೀತಿ ಹಳಗನ್ನಡ ಕಾವ್ಯಗಳ (ಸಾಹಿತ್ಯ) ಸಂದರ್ಭಕ್ಕೆ ಸ್ತ್ರೀ ವಿದ್ಯಾಭ್ಯಾಸವು ಉಚ್ಚವರ್ಗಕ್ಕೆ ಮಾತ್ರ ಮೀಸಲಾಗಿದ್ದು, ಮಧ್ಯಮ ಹಾಗೂ ಕೆಳವರ್ಗದವರಿಗೆ ಹೆಣ್ಣುಮಕ್ಕಳನ್ನು ಓದಿಸಬೇಕೆಂಬ ಕಲ್ಪನೆಯೇ ಆ ಕಾಲಕ್ಕೆ ಇದ್ದಿರಲಿಲ್ಲ"[೨]. ಅಂದರೆ ಸ್ತ್ರೀಯರು ಹೀಗೆ ವಿದ್ಯಾಭ್ಯಾಸದಿಂದ ವಂಚಿತರಾಗಿದ್ದರೆಂಬುದನ್ನು ತಿಳಿಸುತ್ತದೆ. ಅನಂತರ ದುರ್ಗಸಿಂಹನ 'ಪಂಚತಂತ್ರ', ಜನ್ನನ 'ಯಶೋಧರ ಚರಿತೆಗಳಲ್ಲಿಯೂ ಸ್ತ್ರೀಸಂವೇದನೆಯನ್ನು ಗುರುತಿಸಬಹುದಾಗಿದೆ.

ಮಧ್ಯಕಾಲೀನ ಸಾಹಿತ್ಯ ಸಂಧರ್ಭದಲ್ಲಿ ಭಕ್ತಿಪಂಥದ ಚಳವಳಿಯಿಂದಾಗಿ ಸ್ತ್ರೀಗೆ ವಿದ್ಯೆ ಕಲಿಯುವ ಅವಕಾಶ ಲಭಿಸಿತು. ಯಾವುದೇ ಸಂಸ್ಕೃತಿಯ ಏಳುಬೀಳುಗಳನ್ನು ಅಳೆಯುವ ಸಂದರ್ಭದಲ್ಲಿ ಅದರ ಉನ್ನತಿ ಮತ್ತು ಅವನತಿ ಕುರಿತಂತೆ ಮೌಲ್ಯಮಾಪನ ಮಾಡುವ ಸಂದರ್ಭದಲ್ಲಿ ಸ್ತ್ರೀಯರ ಸ್ಥಾನಮಾನ ಮತ್ತು ಆ ಸಂಸ್ಕೃತಿಯ ವಿಕಾಸಕ್ಕೆ ಅವರ ಕೊಡುಗೆ ಮುಖ್ಯವಾಗುತ್ತದೆ. ಹನ್ನೆರಡನೆ ಶತಮಾನ ಕನ್ನಡ ಸಾಹಿತ್ಯದ ರಚನೆಯಲ್ಲಿ ಒಂದು ಪ್ರಗತಿಪರ ಘಟ್ಟ, ಸಮಾಜ ಸುಧಾರಣೆಯಾಗುತ್ತಿರುವ ಸಂದರ್ಭದಲ್ಲಿ ವಚನ ಸಾಹಿತ್ಯದಲ್ಲಿ ಸ್ತ್ರೀಸಂವೇದನೆಯು ಕಾಣಿಸಿಕೊಂಡು ಎಲ್ಲ ವರ್ಗದ ಸ್ತ್ರೀಯರು ಸಾಹಿತ್ಯ ಸಂವೇದನೆಯಲ್ಲಿ ತೊಡಗಿಸಿಕೊಂಡದ್ದು ಪ್ರಮುಖವಾದ ಘಟನೆಯೇ. ಹೆಣ್ಣು ಗಂಡು ಎನ್ನುವ ಭೇದವನ್ನು ಅಳಿಸಿ ಹಾಕುವ ಪ್ರಯತ್ನ ಇಲ್ಲಿ ನಡೆಯಿತು. ಸ್ತ್ರೀಯರಲ್ಲಿ ಆತ್ಮವಿಶ್ವಾಸವನ್ನು ತುಂಬುವ ಸಮಾನತೆ ಮತ್ತು ಅಭಿವ್ಯಕ್ತಿಸ್ವಾತಂತ್ರ್ಯವನ್ನು ಕಲ್ಪಿಸಲಾಯಿತು. ಶರಣರ ಜೊತೆಗೆ ಸಮಾನತೆ ಪಡೆದ ಸ್ತ್ರೀಯರು ವಚನಕಾರರ ಜೊತೆಗೆ ತಾತ್ತ್ವಿಕವಾಗಿ ಚರ್ಚೆ ವಿಚಾರ ವಿನಿಮಯ ನಡೆಸಿದರು. ವೈಚಾರಿಕ ಚರ್ಚೆಗಳಲ್ಲಿ ಭಾಗವಹಿಸಿ ವಚನಗಳನ್ನು ರಚಿಸಿದರು. ಅಕ್ಕಮಹಾದೇವಿ, ಮುಕ್ತಾಯಕ್ಕ, ಗಂಗಾಂಬಿಕೆ,ಅಕ್ಕನಾಗಮ್ಮ, ಮೋಳಿಗೆಮಹಾದೇವಮ್ಮ ಅಲ್ಲದೇ ತೀರಾ ಕೆಳವರ್ಗದ ಕಾಳವ್ವೆ, ಸರಂಕವ್ವೆ, ಗುಡ್ಡಮ್ಮ, ರೇಕಮ್ಮ ಮಸಣಮ್ಮ, ಕಾಮಮ್ಮ, ವೀರಮ್ಮ ಮುಂತಾದವರು ಸಾಹಿತ್ಯದಲ್ಲಿ ಸಂವೇದಿಸಿದ್ದು ಮಹತ್ವದ ಘಟನೆಯಾಗಿದೆ.

ನವೋದಯ ಕಾಲದಲ್ಲಿ ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ ಕನ್ನಡ ಸಾಹಿತ್ಯದಲ್ಲಿ ಸ್ತ್ರೀಪರವಾದ ವಿಚಾರಗಳ ಬಗ್ಗೆ ಬರೆಯಲಾರಂಭಿಸಿದರು. ಕನ್ನಡದ ಆರಂಭದ ಸಾಮಾಜಿಕ ಕಾದಂಬರಿಗಳೆಲ್ಲವೂ ಸ್ತ್ರೀಪರವಾದ ಧೋರಣೆಯಿಂದಲೇ ರಚಿಸಲ್ಪಟ್ಟವು. ಅಲ್ಲಿ ಸುಧಾರಣಾವಾದಿಗಳ ಪ್ರಭಾವ ಎದ್ದುಕಾಣುತ್ತದೆ. ಕನ್ನಡದ ಮೊದಲ ಸಾಮಾಜಿಕ ಕಾದಂಬರಿ 'ಇಂದಿರಾಬಾಯಿ', 'ಇಂದಿರೆ,' 'ವಾಗ್ದೇವಿ', 'ಮಾಡಿದ್ದುಣ್ಣೋ ಮಹಾರಾಯ', 'ಕಾನೂರುಹೆಗ್ಗಡಿತಿ', 'ಸರಸಮ್ಮನ ಸಮಾಧಿ' ಮುಂತಾದ ಕಾದಂಬರಿಗಳು. ಈ ಕಾದಂಬರಿಗಳನ್ನು ಕುರಿತಂತೆ ಮೂರನೆಯ ಅಧ್ಯಾಯದಲ್ಲಿ ಸುಧೀರ್ಘವಾಗಿ ಚರ್ಚಿಸಲಾಗಿದೆ. ಇವಿಷ್ಟೇ ಅಲ್ಲದೆ ಕುವೆಂಪು, ಮಾಸ್ತಿ, ಕಾರಂತರ ಕಾದಂಬರಿಗಳಲ್ಲೂ ಹೇರಳವಾದ ಸ್ತ್ರೀ ಸಂವೇದನೆ ಗುರುತಿಸಬಹುದಾಗಿದೆ. ಪ್ರಗತಿಶೀಲ ಕಥೆ ಕಾದಂಬರಿಕಾರು ಪ್ರಧಾನವಾಗಿ ಸ್ತ್ರೀಯನ್ನೇ ಕೇಂದ್ರವಾಗಿರಿಸಿಕೊಂಡು ಕೃತಿಗಳನ್ನು ರಚಿಸತೊಡಗಿದರು.

### ೪.೨ ಮಹಿಳಾ ಚಳವಳಿಗಳು :

ತ.ರಾ.ಸು ಅವರ ಕಾದಂಬರಿಗಳಲ್ಲಿ ಸ್ತ್ರೀಸಂವೇದನೆ ಗುರುತಿಸುವುದು ನನ್ನ ಉದ್ದೇಶವಾಗಿರುವುದರಿಂದ ಈ ಅಧ್ಯಾಯದಲ್ಲಿ ಮಹಿಳಾ ಆಂದೋಲನಗಳು ಮತ್ತು ತ.ರಾ.ಸು. ಅವರ ಕಾದಂಬರಿಗಳನ್ನು ಕುರಿತಂತೆ ಅವಲೋಕನ ಮಾಡಲಾಗಿದೆ. ವಚನ ಚಳವಳಿಯಲ್ಲಿ ಹೆಣ್ಣಿನ

ಪರವಾಗಿ ದನಿ ಎತ್ತಿದವಳೆಂದರೆ ಅಕ್ಕಮಹಾದೇವಿ. ಅನಂತರ ಸಂಚಿಯಹೊನ್ನಮ್ಮ ಹೆಣ್ಣಿನ ಪರವಾಗಿ ಧ್ವನಿ ಎತ್ತಿದರೂ ಆಕೆಯದು ಪುರುಷನಿಷ್ಠಪರವಾದ ಧೋರಣೆಯಾಗಿತ್ತು. ಆದಕಾರಣ ಹೊನ್ನಮ್ಮ ಸತಿಧರ್ಮವನ್ನು ಹೇಳುವುದರ ಜೊತೆಜೊತೆಯಲ್ಲೇ ಪತಿಧರ್ಮವನ್ನು ಕುರಿತು ಪ್ರತಿಪಾದಿಸುತ್ತಾಳೆ. ಅದೇ ರೀತಿ ಹೇಳವನಕಟ್ಟೆ ಗಿರಿಯಮ್ಮನದೂ ಪುರುಷನಿಷ್ಠ ಧೋರಣೆಯೇ ಆಗಿತ್ತು.

ಚಳವಳಿ ಅಥವಾ ಆಂದೋಲನವೆಂದರೆ ದಬ್ಬಾಳಿಕೆ ಶೋಷಣೆ ವಿರುದ್ಧ ಪ್ರತಿಭಟಿಸುವ ಮನೋಭಾವ. ಸ್ತ್ರೀವಾದದ ಹಿನ್ನೆಲೆಯಲ್ಲಿ ಮಹಿಳಾ ಚಳವಳಿ ಕುರಿತು ಇಲ್ಲಿ ಚರ್ಚಿಸಲಾಗುತ್ತದೆ. ಸ್ತ್ರೀವಾದ ಮಹಿಳೆಯನ್ನು ಕುರಿತಂತೆ ಪುರುಷನ ಆಲೋಚನೆಗಳು ಮತ್ತು ಮಹಿಳೆ ಬಗ್ಗೆ ಮಹಿಳೆಯೇ ಆಲೋಚಿಸುವ ವಿಧಾನವನ್ನ ಒಳಗೊಂಡಿರುತ್ತದೆ. ಸ್ತ್ರೀವಾದದ ಸಾಧ್ಯತೆಗಳನ್ನು ಕುರಿತಂತೆ ಡೇಲ್‌ಸ್ಪೆಂಡರ್‌ಳು "ಸ್ತ್ರೀವಾದದ ತಾತ್ವಿಕತೆಯು ಪಿತೃಪ್ರಾಧಾನ್ಯತೆ ಹೊಂದಿರುವ ದಬ್ಬಾಳಿಕೆಗೆ ವಿರುದ್ಧವಾಗಿದೆ. ದಬ್ಬಾಳಿಕೆ ಎಂದರೆ ಗಂಡು ಹೆಣ್ಣಿನ ಮೇಲೆ, ಬಿಳಿಯ ವ್ಯಕ್ತಿ, ಕಪ್ಪು ವ್ಯಕ್ತಿಯ ಮೇಲೆ, ಶ್ರೀಮಂತವರ್ಗ ಬಡವರ್ಗದ ಮೇಲೆ ಮಾಡುವ ದಬ್ಬಾಳಿಕೆ. ಹಾಗೆಯೇ ಬುದ್ಧಿಜೀವಿ ವರ್ಗವು ಎತ್ತಿಹಿಡಿದ ಸ್ಪರ್ಧೆ ಹಾಗೂ ಅರ್ಹತಾ ಪರೀಕ್ಷೆಗಳು ಕೂಡ ದಬ್ಬಾಳಿಕೆಯ ಸೂಕ್ಷ್ಮ ವಿಧಾನಗಳಾಗಬಲ್ಲವು. ಆಳುವ ವರ್ಗದ ಜಗತ್ತಿನ ಗ್ರಹಿಕೆಗಳು, ಆಳಿಸಿಕೊಳ್ಳುವವರ ಜಗತ್ತಿನ ಗ್ರಹಿಕೆಗಳಿಗಿಂತ ಭಿನ್ನವಾಗಿರುತ್ತವೆ ಎಂಬ ಸತ್ಯವನ್ನು ಸ್ತ್ರೀವಾದಿಯಾಗಿ ತಾನಂದುಕೊಂಡೆ ಎಂದು ಡೇಲ್ ಸ್ಪೆಂಡರ್ ಹೇಳುತ್ತಾಳೆ".[೩] ಈ ರೀತಿ ಸ್ತ್ರೀವಾದ ಎಂದರೆ ಮಹಿಳೆ ತನ್ನ ವಿರುದ್ಧ ನಡೆಯುವ ಶೋಷಣೆ ಕುರಿತಾದ ನಿಲುವು ಯಾವುದಾಗಿರಬೇಕೆಂಬುದು ಈ ಮೇಲಿನ ಹೇಳಿಕೆಯಿಂದ ಸ್ಪಷ್ಟವಾಗುತ್ತದೆ.

ಸಮಾಜದಲ್ಲಿ ದಬ್ಬಾಳಿಕೆ ಯಾವ ರೀತಿ ಬೇರುಬಿಟ್ಟಿದೆ ಹಾಗೂ ಇಂತಹ ವ್ಯವಸ್ಥೆ ಜನತೆಯನ್ನು ಮಾತನಾಡದಂತೆ ಏಕೆ ಬಾಯಿಮುಚ್ಚಿಸಿದೆ ಎಂಬುದನ್ನು ಕುರಿತು ಚರ್ಚಿಸುವುದು ಸ್ತ್ರೀವಾದ. ಆ ಮೂಲಕ ಇಂತಹ ಮೌನವನ್ನು ಮುರಿದು ಪ್ರತಿಭಟಿಸುವ ಸೊಲ್ಲೆತ್ತುವ ಪ್ರಯತ್ನ ಮಾಡುವುದೇ ಸ್ತ್ರೀವಾದವೆಂದು ಹೇಳಬಹುದಾಗಿದೆ.

ಸ್ತ್ರೀವಾದ ಪುರುಷವರ್ಗದ ಆಲೋಚನೆಗಳಿಗಿಂತ ಭಿನ್ನವಾಗಿ ಆಲೋಚಿಸುವ ವಿಧಾನ. ಮೂಲಭೂತ ಆವಶ್ಯಕತೆಗಳ ಬಗ್ಗೆ, ಸಮಸ್ಯೆಗಳ ಬಗ್ಗೆ ಆಲೋಚಿಸುವ ಹಾಗೂ ತಕ್ಷಣ ಪರಿಹಾರ ಕಂಡುಕೊಳ್ಳುವ ವಿಧಾನವೂ ಆಗಿರುತ್ತದೆ. ಅಂದರೆ ಮಹಿಳೆ ತನ್ನನ್ನು ತಾನು ಹೊಸದಾಗಿ ಗುರುತಿಸಿಕೊಳ್ಳುವ ವಿಧಾನವೆಂದರೂ ತಪ್ಪಾಗಲಾರದು. ಹಾಗಾದರೆ ಇಲ್ಲಿ ಎದುರಾಗುವ ಪ್ರಶ್ನೆ ಸ್ತ್ರೀವಾದಿ ಎಂದರೆ ಯಾರು? ಎನ್ನುವುದು. "ಜೈವಿಕ ಲಿಂಗ ಕಾರಣಕ್ಕಾಗಿಯೇ ಅಸಮಾನತೆಗೆ ಗುರಿಯಾಗುವಲ್ಲಿ ಮಹಿಳೆಯು ಅನುಭವಿಸುವ ನೋವಿನ ಕಾರಣವನ್ನು ಸ್ತ್ರೀವಾದಿ ತಿಳಿಸುತ್ತಾಳೆ/ನೆ. ಸ್ತ್ರೀವಾದಿಯ ಆಲೋಚನೆ ಹೀಗಿದೆ: ಮಹಿಳೆಯರಿಗೆ ತಮ್ಮದೇ ಆದ ಅವಶ್ಯಕತೆಗಳಿದ್ದು, ಅವು ನಿರ್ಲಕ್ಷಿತವಾಗುತ್ತವೆ ಹಾಗೂ ಈಡೇರುವುದಿಲ್ಲ. ಆಕೆಯ ಅಗತ್ಯಗಳ ಈಡೇರುವಿಕೆಗೆ ಸಾಮಾಜಿಕ,

ಆರ್ಥಿಕ ಹಾಗೂ ರಾಜಕೀಯ ವ್ಯವಸ್ಥೆಯಲ್ಲಿಯೇ ಮೂಲಭೂತ ಮಾರ್ಪಾಡಾಗಬೇಕಾಗುತ್ತದೆ."[೪] ಎಂದು ಡೇಲ್‌ಸ್ಪೆಂಡರ್ ಹೇಳುವ ಮಾತು ಸ್ತ್ರೀವಾದಿ ಎಂದರೆ ಮಹಿಳೆಯೇ ಆಗಬೇಕಾಗಿಲ್ಲ. ಅವಳ ಬದುಕಲ್ಲಿ ಸುಧಾರಣಾ ನಿಟ್ಟಿನಲ್ಲಿ ಆಲೋಚಿಸುವ ಯಾರಾದರೂ ಸ್ತ್ರೀವಾದಿಯೇ ಎಂಬುದನ್ನು ತಿಳಿಸುತ್ತದೆ. ಅಂದರೆ ಸ್ತ್ರೀವಾದಿಗಳೆಂದರೆ ಪುರುಷರು ಅಥವಾ ಮಹಿಳೆಯರೂ ಯಾರಾದರೂ ಆಗಬಹುದು ಎಂಬುದಾಗಿದೆ.

ಸ್ತ್ರೀವಾದದ ಬಗ್ಗೆ ತಳೆದಿರುವ ಧೋರಣೆ ಲೌಕಿಕ ಅಥವಾ ಅವಳ ಬಾಹ್ಯ ಸಾಂಸ್ಕೃತಿಕ ಚರಿತ್ರೆ ಕಟ್ಟುವಲ್ಲಿ ಆಕೆಯ ಕೊಡುಗೆ ಮುಖ್ಯವಾಗುತ್ತದೆ. "ಸ್ತ್ರೀಯರು ಅನುಸರಿಸುತ್ತಿರುವ ಸಾಂಪ್ರದಾಯಿಕ ನಡಾವಳಿಗಳಲ್ಲಿ ಕ್ರಾಂತಿಕಾರಕ ಬದಲಾವಣೆಯಾಗಬೇಕೆಂದು ಮೇರಿ ವುಲ್ ಸ್ಟನ್‌ಕ್ರಾಪ್ಟಳು ೧೮ನೆಯ ಶತಮಾನದ ಅಂತ್ಯದಲ್ಲಿ ಕರೆಕೊಟ್ಟಿದ್ದಾಳೆಂದು" ಪ್ರೀತಿ ಶುಭಚಂದ್ರ ಅವರು ದಾಖಲಿಸಿದ್ದಾರೆ. ೧೮ನೆಯ ಶತಮಾನದೀಚೆಗೆ ಸ್ತ್ರೀವಾದದ ಬಗ್ಗೆ ವಿವಿಧ ರೀತಿಯ ಅಭಿವ್ಯಕ್ತಿಗಳು ಪ್ರಕಟಗೊಂಡಿವೆ.

ಮಹಿಳಾ ಚಳವಳಿ ಇಂಗ್ಲೆಂಡಿನಲ್ಲಿ ಮಹಿಳಾ ವಿಷಯಕ್ಕೆ ಸಂಬಂಧಿಸಿದಂತೆ ಸಮರ್ಥವಾದ ನಿಲುವನ್ನು ತಳೆದಿತ್ತೆಂದು ಹೇಳಬಹುದಾಗಿದೆ. ಅನಂತರ ಬೇರೆ ಬೇರೆ ದೇಶಗಳಲ್ಲಿ ಮಹಿಳೆಯ ಹಕ್ಕುಬಾಧ್ಯತೆಗಳ ಬಗ್ಗೆ ಮಹಿಳಾ ಚಳವಳಿಗಳು ವ್ಯವಸ್ಥೆ ವಿರುದ್ದ ಹೋರಾಟವನ್ನು ಆರಂಭಿಸಿದ್ದು ಗಮನಾರ್ಹವಾದ ವಿಷಯ. ತಮ್ಮ ಧ್ಯೇಯ-ಧೋರಣೆಗಳನ್ನು ಸಾರ್ವತ್ರಿಕ ನೆಲೆಯಲ್ಲಿ ಮಂಡಿಸುವ ಪ್ರಯತ್ನವನ್ನು ಮಾಡುತ್ತಿವೆ. ಅಂದರೆ ಬೇರೆ ಬೇರೆ ತರಹದ ಶೋಷಣೆಗೆ ಒಳಗಾದ ಮಹಿಳೆಯರು ತಮ್ಮ ಅನುಭವ ಮತ್ತು ಅನಿಸಿಕೆಗಳನ್ನು ಹಂಚಿಕೊಳ್ಳಲು, ಪ್ರತಿಕ್ರಿಯಿಸಲು ಸಾಮೂಹಿಕ ವೇದಿಕೆ ಸ್ತ್ರೀವಾದದ ಮುಖೇನ ಸೃಷ್ಟಿಯಾಯಿತು. ಸ್ತ್ರೀವಾದವು "ನಾನು" ಎನ್ನುವುದಕ್ಕೆ ಬದಲಾಗಿ "ನಾವು" ಎಂಬುದನ್ನು ಬಳಸಬೇಕೆಂಬುದಾಗಿ ಒತ್ತಾಯಿಸಲಾರಂಭಿಸಿತು. ೬೦ರ ದಶಕದ ಉತ್ತರಾರ್ಧದಲ್ಲಿಯಂತೂ ಈ ಚಳವಳಿ ವೈಯಕ್ತಿಕತೆಯಿಂದ ಸಾರ್ವತ್ರಿಕತೆಯಡೆಗೆ ಮುಖಮಾಡಿದ್ದು ಮಹಿಳಾ ಚಳವಳಿಯ ಸಾಧನೆಯೇ. ಮಹಿಳಾ ಸಂಬಂಧಿ ಚಟುವಟಿಕೆಗಳೆಲ್ಲವನ್ನು ಒಂದೇ ಭಾವಣಿಯಡಿಗೆ ತರುವ ಇಂಥ ಪ್ರಯತ್ನವನ್ನು ತುರ್ತಾಗಿ ಪ್ರಶ್ನಿಸಬೇಕಾದ ಅಗತ್ಯವಿದೆಯೆಂದು ಜೂಲಿಯಟ್‌ಮಿಶೆಲ್ ಹಾಗೂ ಆನ್‌ಓಕ್ಲೆ ಹೇಳಿದ್ದಾರೆನ್ನುವ ಅಭಿಪ್ರಾಯವನ್ನು ಡಾ.ಪ್ರೀತಿಶುಭಚಂದ್ರ ಅವರು ದಾಖಲಿಸಿರುವುದು ಬಹುಮುಖ್ಯವಾದ ವಿಷಯ.

ಅರವತ್ತರ ದಶಕದ ಕೊನೆಯ ವೇಳೆಗೆ ಸ್ತ್ರೀವಾದದ ಹಿನ್ನೆಲೆಯಲ್ಲಿ ಮಹಿಳಾ ಚಳವಳಿಗಳು ಸಕ್ರಿಯವಾಗಿ ಸಾಮಾಜಿಕ ಮತ್ತು ಸಾಂಸ್ಕೃತಿಕವಾದ ಸಂಘಟನಾ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡದ್ದು ಪ್ರಮುಖವಾದ ವಿಷಯ. ಸ್ತ್ರೀವಾದ ಮತ್ತು ಮಹಿಳೆಯ ಸ್ಥಾನಮಾನ ಕುರಿತಂತೆ ರೇಸ್ಟ್ರಾಚೆ ಯು 'ದಿ ಕಾಸ್' ಎಂಬ ಇತಿಹಾಸ ಕೃತಿಯಲ್ಲಿ ಮಹಿಳೆಯ ಬದುಕಿನಲ್ಲಿ ಬದಲಾವಣೆ ಮತ್ತು ಮಹಿಳಾ ಆಂದೋಲನಗಳ ನಡುವಿನ ನಿಕಟ ಸಂಬಂಧವನ್ನು

ಸ್ಪಷ್ಟಪಡಿಸುತ್ತಾಳೆ. ಮುಖ್ಯವಾಗಿ ಇದರಲ್ಲಿ ೧೯ನೆಯ ಶತಮಾನದ ಸಾಮಾಜಿಕ ಚಳವಳಿಯ ಇತಿಹಾಸವನ್ನು ನಿರೂಪಿಸುತ್ತದೆ. ೧೮೬೦ ರಿಂದ ೧೯೨೦ ರವರೆಗಿನ ಕಾಲಮಾನದ ಚಟುವಟಿಕೆಗಳ ಬಗೆಗೆ ಈಕೆ ಆಸಕ್ತಿ ತಳೆದಿದ್ದಳು. ಹಾಗೆಯೇ ಬಾರ್ಬರಾ ಟೇಲರ್‌ಳ 'ಎರಾ ಅಂಡ್ ದಿ ನೀವ್ ಜೆರುಸೆಲಂ' ಕೃತಿಯಲ್ಲಿ ಸ್ತ್ರೀವಾದ ಮತ್ತು ಚಟುವಟಿಕೆಗಳ ಬಗ್ಗೆ ವಿವರಗಳು ದೊರೆಯುತ್ತವೆ.

ಅನಂತರದ ದಿನಗಳಲ್ಲಿ ಸ್ತ್ರೀವಾದಿಗಳ ಬಗ್ಗೆ "ಲೈಂಗಿಕ ರಾಜಕರಣ" ಕೂಡ ಆರಂಭವಾಯಿತು. ಲೈಂಗಿಕ ರಾಜಕರಣದ ಪರಿಕಲ್ಪನೆ ಡೇಲ್‌ಸ್ಪೇಡರ್ ದೃಷ್ಟಿಯಲ್ಲಿ ಎರಡು ವಿಚಾರಗಳನ್ನು ಹೊಂದಿರುತ್ತದೆ. ಅವುಗಳೆಂದರೆ

೧) ಸಾಮಾಜಿಕ ಗುಂಪು ಎನಿಸಿಕೊಂಡ ಪುರುಷ ವರ್ಗದಿಂದ ಮತ್ತೊಂದು ಸಾಮಾಜಿಕ ಗುಂಪಾದ ಮಹಿಳಾ ವರ್ಗವು ದಮನಕ್ಕೆ ಒಳಗಾಗುತ್ತದೆ.

೨) ಸಂತಾನೋತ್ಪತ್ತಿಯಂಥ ಸೀಮಿತ ಕರ್ತವ್ಯದ ಗಡಿಯಾಚೆಗಿನ ಜೈವಿಕ ಲಿಂಗವಾಗಿ ಮಹಿಳಾ ವರ್ಗವಿದೆ.

ಹೀಗೆ ಡೇಲ್‌ಸ್ಪೇಡರ್ ಚಿಂತನೆಯು ಎರಡು ದೃಷ್ಟಿಕೋನಗಳನ್ನು ಒಳಗೊಂಡಿರುತ್ತದೆ.

ಎಂಬತ್ತರ ದಶಕದ ವೇಳೆಗೆ ಸ್ತ್ರೀವಾದದಲ್ಲಿ ಮಹತ್ತರವಾದ ಬದಲಾವಣೆ ಉಂಟಾಯಿತು. ಈ ವೇಳೆಗೆ ಸ್ತ್ರೀವಾದವು ಖಚಿತವೂ ವಿಶಿಷ್ಟವೂ ಆದ ಲಿಂಗವ್ಯವಸ್ಥೆಯ ಪರಿಕಲ್ಪನೆಗೆ ತನ್ನನ್ನು ತೆರೆದುಕೊಂಡದ್ದು ಕಂಡುಬರುತ್ತದೆ. ಮಹಿಳೆಯರ ಪರವಾಗಿ, ಮಹಿಳೆರಿಯಗೋಸ್ಕರವಾಗಿ ಆಲೋಚಿಸುವ ವಿಧಾನವು ವಿಶಿಷ್ಟವಾಗಿ ಬೆಳೆದು ಬರುತ್ತದೆ. ಸ್ಪಷ್ಟವಾಗಿ ಲೈಂಗಿಕ ವಿಭಜನೆಯನ್ನು ಮಾಡಲಾಗುತ್ತದೆ. ಕೌಟುಂಬಿಕ ಪಾತ್ರದಲ್ಲಿ ಮಹಿಳೆ ಮತ್ತು ಆಕೆಯ ದೇಹ ಸ್ಥಿತಿಯಲ್ಲಿ ಬದಲಾವಣೆಗಳುಂಟಾಗಿರುವುದು ಕಂಡು ಬರುತ್ತದೆ.

ಮಹಿಳಾ ಆಂದೋಲನಗಳು ಇಂಗ್ಲೆಂಡ್‌ನಲ್ಲಿ ಆರಂಭವಾದರೂ ಯೂರೋಪು ಮತ್ತು ಅಮೇರಿಕಾದಲ್ಲಿ ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಿದ್ದು ಕಂಡುಬರುತ್ತದೆ. ೧೮ನೆಯ ಶತಮಾನದವರೆಗೆ ಭಾರತದಲ್ಲಿಯೂ ಕೂಡ ಮಹಿಳಾ ಆಂದೋಲನಗಳು ಧಾರ್ಮಿಕ ಮತ್ತು ಸಾಮಾಜಿಕ ಚಳವಳಿಗಳ ಜೊತೆಜೊತೆಗೇನೆ ಬೆಳೆದು ಬಂದದ್ದನ್ನು ಗುರುತಿಸಬಹುದಾಗಿದೆ. ಈ ನಿಟ್ಟಿನಲ್ಲಿ ಬುದ್ಧ, ಮಹಾವೀರ, ಬಸವ, ಭಕ್ತಿಪಂಥ ಮತ್ತು ವಚನ ಚಳವಳಿ ಮುಖ್ಯವಾಗುತ್ತವೆ. ಆಧುನಿಕ ಕನ್ನಡದ ಮಹಿಳಾ ಕಾವ್ಯಕ್ಕೆ ಮುಖ್ಯವಾಗಿ ಪ್ರೇರಕಳಾದವಳು ಅಕ್ಕಮಹಾದೇವಿ. ೧೯ ಮತ್ತು ೨೦ನೆಯ ಶತಮಾನದ ವೇಳೆಗೆ ಸಮಾಜ ಸುಧಾರಣಾ ಚಳವಳಿ ಜೊತೆಗೆ ಮಹಿಳಾ ಆಂದೋಲನ ಸೇರುತ್ತದೆ. ಬ್ರಿಟಿಷರ ಆಡಳಿತ ಮತ್ತು ಇಂಗ್ಲಿಷ್ ಶಿಕ್ಷಣದ ಪ್ರಭಾವದಿಂದ ಭಾರತೀಯ ಮಹಿಳೆಯರ ಬದುಕಲ್ಲಿ ಮಹತ್ತರವಾದ ಬದಲಾವಣೆಗಳಾಗುತ್ತವೆ. ಈ ಹಿನ್ನೆಲೆಯಲ್ಲಿ ಮಹಿಳಾ ಆಂದೋಲನಕ್ಕೆ ಬಹುಮುಖ್ಯವಾದ ಪ್ರೇರಣೆಯೆಂದರೆ ರಾಜಾ ರಾಮಮೋಹನರಾಯ್

ಮತ್ತು ದಯಾನಂದ ಸರಸ್ವತಿಯವರು. ಸುಧಾರಣಾವಾದದಿಂದ ಮಹಿಳೆಯರ ವಿಮೋಚನೆಗಾಗಿ ಅನೇಕ ಕಾಯಿದೆಗಳು ರೂಪುಗೊಂಡವು. ಸತಿಪದ್ಧತಿ, ಬಹುಪತ್ನಿತ್ವ, ಬಾಲ್ಯವಿವಾಹ, ವಿಧವಾವಿವಾಹ, ಮುಂತಾದವುಗಳಲ್ಲಿ ಸುಧಾರಣೆಗಳುಂಟಾದವು. ಅಲ್ಲದೆ ಗಾಂಧಿವಾದವೂ ಮಹಿಳಾ ಹೋರಾಟ ಮತ್ತು ಚಳವಳಿಗೆ ಗಂಭೀರವಾಗಿ ಪ್ರೇರೇಪಿಸರುವುದು ಗಮನಾರ್ಹ. ಮಹಿಳೆ ರಾಜಕಾರಣದಲ್ಲಿ ಭಾಗವಹಿಸುವುದನ್ನು ಸರೋಜಿನಿನಾಯ್ಡು ಅವರು ಸಮರ್ಥಿಸಿಕೊಂಡು ಅಂತಹ ಮಹಿಳೆಯರಿಗೆ ಸಹಕಾರ ನೀಡುತ್ತಾರೆ.

ಸ್ವಾತಂತ್ರ್ಯ ಚಳವಳಿಯಲ್ಲಿ ಕೂಡ ಮಹಿಳೆಯರು ಭಾಗವಹಿಸಿದ್ದಾರೆ. ೧೯೨೦ರಿಂದ ಆರಂಭವಾಗುವ ಅಸಹಕಾರ ಚಳವಳಿ, ಅಲ್ಲದೆ ಬಂಗಾಳದಲ್ಲಿ ಜರುಗಿದಂತಹ ಕ್ರಾಂತಿಕಾರಕ ಹೋರಾಟದಲ್ಲಿಯೂ ಭಾಗವಹಿಸಿರುವುದನ್ನು ಮುಖ್ಯವಾಗಿ ಗಮನಿಸಬೇಕು. ಕ್ರಾಂತಿಕಾರಕ ಹೋರಾಟದಲ್ಲಿ ಕ್ಯಾಪ್ಟನ್ ಲಕ್ಮೀಸೆಹಗಲ್ ಅವರು ಭಾಗವಹಿಸಿದ್ದರು. ಮುಸ್ಲಿಂ ವಕೀಲನನ್ನು ಮದುವೆಯಾಗುವ ಅರುಣ ಅಸಫ್ಆಲಿ ಮುಂತಾದವರು ಸುಧಾರಣಾವಾದದಿಂದ ಪ್ರೇರಿತರಾಗಿ ಆಧುನಿಕ ಮಹಿಳಾ ಆಂದೋಲನದಲ್ಲಿ ಮುಖ್ಯವಾಗಿ ಕಂಡುಬರುತ್ತಾರೆ. ಸ್ವಾತಂತ್ರೋತ್ತರ ಭಾರತದಲ್ಲಿ ಮಹಿಳಾ ಆಂದೋಲನದ ಕಾವು ಕಡಿಮೆಯಾಗುತ್ತಾ ಬಂದಿತು. ಭಾರತೀಯ ಮಹಿಳಾ ಆಂದೋಲನಕ್ಕೆ ತಾತ್ತ್ವಿಕ ನೆಲೆ ರೂಪಿಸಿದ್ದೆಂದರೆ ತೆಲಾಂಗಣದ ಮಹಿಳಾ ಚಳವಳಿ.

೧೯೧೬ರಲ್ಲಿ ಹುಟ್ಟಿಕೊಂಡ ಹೈದರಾಬಾದಿನ ಅಖಿಲ ಕರ್ನಾಟಕ ಮಹಿಳಾ ಕಾನ್‌ಫರೆನ್ಸ್ ಹಾಗೂ ೧೯೩೦ರ ಆಂಧ್ರ ಮಹಿಳಾ ಸಭಾಗಳು ಪ್ರಮುಖವಾದವುಗಳು. ೧೯೪೮ ಏಪ್ರಿಲ್‌ನಲ್ಲಿ ಆಂಧ್ರರಾಷ್ಟ್ರ ಮಹಿಳಾ ಸಂಘದ ಸಮ್ಮೇಳನ ನಡೆಯಿತು.

ಹೀಗೆ ಜಾಗತಿಕ ಮಟ್ಟದಲ್ಲಿ ಮಹಿಳಾ ಆಂದೋಲನಗಳು ಪ್ರಬಲವಾಗಿ ತಮ್ಮ ಹಕ್ಕುಬಾಧ್ಯತೆಗಳ ಬಗ್ಗೆ ಹೋರಾಟವನ್ನು ಆರಂಭಿಸಿದ್ದರ ಹಿನ್ನೆಲೆಯಲ್ಲಿ ೧೯೫೩ರಲ್ಲಿ ಕೋಪನ್‌ಹೇಗ್‌ನಲ್ಲಿ ಮಹಿಳಾ ಸಮಾವೇಶವೊಂದನ್ನು ಏರ್ಪಡಿಸಲಾಯಿತು. ಇದಾದನಂತರ 'ಅಖಿಲ ಭಾರತ ಮಹಿಳಾ ಸಮನ್ವಯ ಸಮಿತಿ'ಯನ್ನು ಭಾರತದಲ್ಲಿ ಸ್ಥಾಪಿಸಲಾಯಿತು. ಈ ಸಮಿತಿ ೧೯೫೪ರಲ್ಲಿ ಸಮಾವೇಶಗೊಂಡು ಸೇರಿ ಈ ಕೆಳಗಿನ ಧ್ಯೇಯೋದ್ದೇಶಗಳ ಬಗ್ಗೆ ಚರ್ಚಿಸಿ ತೀರ್ಮಾನ ಕೈಗೊಂಡಿತು.

೧) ಶಾಂತಿ ಸ್ವಾತಂತ್ರ್ಯಗಳ ರಕ್ಷಣೆ
೨) ಮಹಿಳಾ ಹಕ್ಕುಗಳು, ಶಾಸನಗಳ ರಚನೆ
೩) ಮಹಿಳೆಯರ ಉದ್ಯೋಗಾವಕಾಶಗಳ ಹೆಚ್ಚಳ
೪) ರೈತ ಮಹಿಳೆಯರ ಹಕ್ಕುಗಳ ರಕ್ಷಣೆ
೫) ತಾಯಿಮಕ್ಕಳ ಆರೋಗ್ಯ ರಕ್ಷಣೆ.

## ೪.೩ ಮಹಿಳಾ ಆಂದೋಲನಗಳ ತಾತ್ತ್ವಿಕತೆಯಲ್ಲಿ ಬಂದಿರುವ ಕನ್ನಡ ಕಾದಂಬರಿಗಳು :

ಮಹಿಳಾ ಆಂದೋಲನಗಳನ್ನು ಕುರಿತಂತೆ ಈಗಾಗಲೇ ಚರ್ಚಿಸಲಾಗಿದೆ. ಆಂದೋಲನ ಪದ ಸಾಮಾಜಿಕ, ಧಾರ್ಮಿಕ, ರಾಜಕೀಯ ಹಿನ್ನೆಲೆಯಲ್ಲಿ ವಿವಿಧ ಸ್ತರದಲ್ಲಿ ಚರ್ಚೆಯಾಗುತ್ತಿದೆ. ಆಂದೋಲನ, ಚಳವಳಿ ಪದಗಳಿಗೆ ಸಮಾಜವಾದಿ ಚಿಂತಕರು ಬೇರೆ ಬೇರೆ ರೀತಿಯಲ್ಲಿ ಚರ್ಚಿಸಿದ್ದಾರೆ. ಹೀಗೆ ಎಲ್ಲ ಪ್ರಯೋಗಗಳ ಅನಂತರ "ಇಂದು ಚಳವಳಿ ಎಂಬ ಪದ ಒಪ್ಪಿತರೂಪವಾಗಿದ್ದು, ಇಂಗ್ಲಿಷ್ ನ "ಮೂವ್‌ಮೆಂಟ್" ಎಂಬ ಪದಕ್ಕೆ ಸಮಾನಾರ್ಥಕ ಶಬ್ದವಾಗಿ ಬಳಕೆಗೊಳ್ಳುತ್ತಿದ್ದು ಅದು ಚಲನೆಯನ್ನು ಸೂಚಿಸುವುದಾಗಿದೆ".[೫] ಆಂದೋಲನಗಳ ಮುಖ್ಯ ಉದ್ದೇಶ ಜಡ್ಡುಗಟ್ಟಿದ ಸಾಮಾಜಿಕ ವ್ಯವಸ್ಥೆಯನ್ನು ಚಲನಶೀಲತೆಯೆಡೆಗೆ ಕೊಂಡೊಯ್ಯುವುದು ಎಂಬುದನ್ನು ಎಂ.ಉಷಾ ಅವರ ಮೇಲಿನ ಹೇಳಿಕೆಯು ಧ್ವನಿಸುತ್ತದೆ.

ಸ್ತ್ರೀವಾದ ಮತ್ತು ಸ್ತ್ರೀವಾದಿ ಸಾಹಿತ್ಯ ಕುರಿತಂತೆ ಚರ್ಚೆ ನಡೆಯುವ ಈ ಹೊತ್ತಿನಲ್ಲಿ ಲಿಂಗ ತಾರತಮ್ಯದ ಪ್ರಶ್ನೆಯು ಎದುರಾಗುತ್ತದೆ. ನೊಂದವರ ನೋವ ನೋಯುದವರೇನ ಬಲ್ಲರು ಎಂಬ ವಾಡಿಕೆಯಂತೆ ಸ್ತ್ರೀಯರು ಬರೆದ ಸಾಹಿತ್ಯವನ್ನು ವಿಮರ್ಶೆ ಮಾಡುವವರೆಲ್ಲ ಪುರುಷರೇ ಆದ ಕಾರಣ ಸರಿಯಾದ ರೀತಿಯಲ್ಲಿ ಮೌಲ್ಯಮಾಪನ ಮಾಡಲಾರರೆಂಬುದು, ಬರೀ ಹೇಳಿಕೆಗಳನ್ನು ಮುಂದಿಟ್ಟು ವಿಮರ್ಶೆ ಮಾಡುವ ವಿಧಾನ ಸರಿಯಿಲ್ಲ. ಇದು ಬದಲಾಗಬೇಕೆಂಬುದೇ ಸ್ತ್ರೀವಾದಿ ವಿಮರ್ಶೆಯ ಧೋರಣೆ. "ಸ್ತ್ರೀವಾದಿ ವಿಮರ್ಶೆಯನ್ನು ರೂಪಿಸುವ ಸನ್ನಿವೇಶಗಳನ್ನು ಕ್ರೂಢೀಕರಿಸಿ ಈ ಕೆಳಕಂಡಂತೆ ಹೇಳಬಹುದಾಗಿದೆ.

೧) ಲಿಂಗ ವ್ಯತ್ಯಾಸ, ಜನಾಂಗ, ವರ್ಗ ಮತ್ತು ಅವುಗಳನ್ನು ರೂಪಿಸುವ ಸಾಂಸ್ಕೃತಿಕ ಸನ್ನಿವೇಶ

೨) ಸ್ತ್ರೀಯರ ಖಾಸಗಿ ಚರಿತ್ರೆಗಳು

೩) ಸ್ತ್ರೀವಾದಿ ವಿಮರ್ಶೆಯ ಚರ್ಚೆಗೆ ಬಳಸುವ ತಾಂತ್ರಿಕ ಕುಶಲತೆ"[೬]

ಈ ಅಂಶಗಳನ್ನು ಮುಖ್ಯವಾಗಿಟ್ಟುಕೊಂಡು ಪ್ರತ್ಯೇಕವಾದ ಸ್ತ್ರೀವಾದಿ ವಿಮರ್ಶೆಯನ್ನು ಬೆಳೆಸಬೇಕೆಂಬುದು ಸ್ತ್ರೀವಾದದ ಪ್ರಯತ್ನವಾಗಿದೆ. ಸ್ತ್ರೀವಾದಿ ವಿಮರ್ಶೆಯ ಮತ್ತೊಂದು ಉದ್ದೇಶವೆಂದರೆ ಚರಿತ್ರೆಯ ಪುನಾರಚನೆ ಮಹಿಳೆಯರಿಂದ, ಮಹಿಳೆಯರ ಜೀವನ ಸಂದರ್ಭದಲ್ಲಿ ಬೆಳೆದ ಕಲೆಗಳು ಅವರ ಭಾಷೆ, ಸಾಹಿತ್ಯ, ವಿವಿಧ ರೀತಿಯ ವಿಚಾರಗಳು, ಸಂಶೋಧನೆ ಮತ್ತು ಅಧ್ಯಯನಗಳಿಂದ ಗತಿಸಿಹೋದ ಚರಿತ್ರೆಯನ್ನು ಮತ್ತೆ ಪಡೆಯುವುದಾಗಿದೆ. ಹೀಗೆ ಸ್ತ್ರೀವಾದ ಪುರುಷನನ್ನು ಸಂಪೂರ್ಣ ದೂರವಿರಿಸಬೇಕೆಂಬುದು, ತನ್ನದೇ ಆದ ಸ್ತ್ರೀವಾದಿ ಸಾಹಿತ್ಯ ರೂಪಿಸಬೇಕೆಂದು ಬಯಸುತ್ತದೆ. ಪಾಶ್ಚಿಮಾತ್ಯ ದೇಶಗಳಲ್ಲಿ ಈ ದಿಶೆಯಲ್ಲಿ ಬಹಳಷ್ಟು ಪ್ರಗತಿ ಸಾಧಿಸಲಾಗಿದೆ. ಪ್ರಗತಿಶೀಲ ಸಂದರ್ಭದ ಈ ವೇಳೆಯಲ್ಲಿ ಪಾಶ್ಚಿಮಾತ್ಯ ಚಿಂತನೆಗಳೊಂದಿಗೆ,

ದೇಶಿಯ ಚಿಂತನೆಗಳ ಮಿಶ್ರಣದೊಂದಿಗೆ ಮಹಿಳಾ ಆಂದೋಲನ ಮತ್ತು ಸ್ತ್ರೀವಾದ ಭಿನ್ನವಾದ ಆಲೋಚನಾ ಕ್ರಮವನ್ನು ಕಟ್ಟಿಕೊಳ್ಳುತ್ತಿರುವ ಸಾಧ್ಯತೆಯನ್ನು ಕಾಣಬಹುದಾಗಿದೆ.

ಹೀಗೆ ಸ್ತ್ರೀವಾದ ಮತ್ತು ಮಹಿಳಾ ಆಂದೋಲನಗಳು ಬೆಳೆದುಬಂದ ಬಗೆ ಮತ್ತು ಅದರ ಇತಿಹಾಸ ಅವಲೋಕಿಸಿದ ಅನಂತರ ಮಹಿಳಾ ಆಂದೋಲನದ ಹಿನ್ನೆಲೆಯಲ್ಲಿ ಹೊಸಗನ್ನಡ ಸಾಹಿತ್ಯದ ಆರಂಭದ ದಿನಗಳಲ್ಲಿ ರಚನೆಗೊಂಡ ಸಾಹಿತ್ಯ ಸುಧಾರಣಾವಾದಿ ಹಿನ್ನೆಲೆಯಲ್ಲಿ ರಚಿಸಲ್ಪಟ್ಟಿತೆಂಬ ಸತ್ಯವನ್ನ ಮರೆಯಲಿಕ್ಕಾಗದು. ನವೋದಯಪೂರ್ವ ಕಾದಂಬರಿಗಳನ್ನು ಅವಲೋಕನ ಮಾಡಿದರೆ ಈ ಅಂಶಗಳು ಸ್ಪಷ್ಟವಾಗುತ್ತವೆ. ಅನಂತರ ನವೋದಯ ಸಂದರ್ಭದ ಕಾದಂಬರಿಕಾರರಲ್ಲಿ ಸುಧಾರಣವಾದದ ಪ್ರಭಾವ ಹಾಗೂ ಪುನರುಜ್ಜೀವನದ ಮೌಲ್ಯಗಳು ಪ್ರಧಾನವಾಗಿ ಕಂಡು ಬರುತ್ತವೆ.

"ಸುಧಾರಣಾವಾದಿ ಚಳವಳಿಯು ಸ್ತ್ರೀಯ ಪಾರಂಪರಿಕ ಪಾತ್ರಕಲ್ಪನೆಯನ್ನು ಉಳಿಸಿಕೊಂಡೇ ಸುಧಾರಿತ ಸ್ತ್ರೀಯ ಪಾತ್ರದ ಮಾದರಿಯನ್ನು ಹೊಸತಾಗಿ ರೂಪಿಸಿತು. ಶಿಕ್ಷಣವನ್ನು ಪಡೆದ ಮಹಿಳೆ ತನ್ನ ಕೌಟುಂಬಿಕ ಕರ್ತವ್ಯಗಳನ್ನು ಮತ್ತೂ ಚನ್ನಾಗಿ ನಿರ್ವಹಿಸಲು ಶಕ್ತಳೆಂಬ ಅಭಿಪ್ರಾಯವು ಹೆಚ್ಚು ಜನರಿಂದ ಸ್ವೀಕೃತವಾಯಿತು. ಹಿಂದು ಸಂಸ್ಕೃತಿ ಪರಂಪರೆಯ ಬಗ್ಗೆ ಹೆಮ್ಮೆ, ಗೌರವಾದರಗಳನ್ನುಂಟುಮಾಡಲು ಬ್ರಹ್ಮಸಮಾಜ, ಆರ್ಯಸಮಾಜ, ಪ್ರಾರ್ಥನಾಸಮಾಜಗಳು ಶ್ರಮಿಸಿದವು. ಸಾಂಸ್ಕೃತಿಕ ರಾಷ್ಟ್ರೀಯತೆಯ ಭಾವನೆಯನ್ನು ಕಟ್ಟುವ ಯತ್ನದಲ್ಲಿ ಸತಿಪದ್ಧತಿ,ಬಾಲ್ಯವಿವಾಹ,ವೈಧವ್ಯ ಪದ್ದತಿಗಳನ್ನು ಹಿಂದೂ ಸ್ತ್ರೀಯ ಆದರ್ಶದ ಪ್ರತಿಬಿಂಬಗಳನ್ನು ವೈದಿಕ ಸಾಹಿತ್ಯ ಇತಿಹಾಸ ಪುರಾಣಗಳಿಂದ ಹುಡುಕಿ ತಂದು ಕಟ್ಟಿಕೊಂಡರು. ಮಹಿಳೆಯ ಪಾರಂಪಾರಿಕ ಪಾತ್ರವನ್ನು ಬದಲಾಯಿಸುವುದಕ್ಕಿಂತ ಅದನ್ನು ಮತ್ತೊಂದು ರೀತಿಯಲ್ಲಿ ಇನ್ನೂ ಗಟ್ಟಿಗೊಳಿಸಲಾಯಿತು".[೭] ಹೀಗೆ ಸುಧಾರಣಾವಾದಿ ಚಳವಳಿಯು ಕಾದಂಬರಿಗಳಲ್ಲಿ ಬ್ರಿಟಿಷ್ ಆಡಳಿತದಿಂದ ಹಾಗೂ ಸುಧಾರಣಾವಾದದ ಪ್ರಭಾವದಿಂದ ಮಹಿಳೆಯರ ಸಮಸ್ಯೆಗಳನ್ನು ಪ್ರಧಾನವಾಗಿ ಚಿತ್ರಿಸಿದ್ದನ್ನು ಕಾಣುತ್ತೇವೆ. ಇವಿಷ್ಟೇ ಅಲ್ಲದೆ ಕೆಳವರ್ಗದ ಮಹಿಳೆಯರ ಬದುಕನ್ನು ತಮ್ಮ ಬರಹದಲ್ಲಿ ಆ ಸಂದರ್ಭದ ಬರಹಗಾರರು ರೂಪಿಸಿದ್ದು, ಜಾತಿವ್ಯವಸ್ಥೆಯಿಂದ ರೂಪುಗೊಂಡ ಸಾಮಾಜಿಕ ವ್ಯವಸ್ಥೆಯನ್ನು ಪ್ರಶ್ನೆಮಾಡುವಂತಹ ಮನೋಭಾವ ಮೂಡಲು ಜ್ಯೋತಿಬಾಫುಲೆ ಮತ್ತು ಅಂಬೇಡ್ಕರ್ ಅವರ ವಿಚಾರಗಳು ಪೂರಕವಾದವು. ಶೂದ್ರರ, ವಿಧವೆಯರ ಬದುಕಲ್ಲಿ ಸುಧಾರಣೆ, ಮಹಿಳಾ ವಿದ್ಯಾಭ್ಯಾಸಕ್ಕೆ ವಿಶೇಷವಾದ ಕಾನೂನುಗಳು ರೂಪುಗೊಂಡವು. ಅಂತೂ ಅಬ್ರಾಹ್ಮಣ ಚಳವಳಿಗೆ ಸುಧಾರಣಾವಾದದ ಈ ಎಲ್ಲಾ ಅಂಶಗಳು ಪೂರಕವಾದದ್ದನ್ನು ಆ ಸಂದರ್ಭದ ಬರಹದಲ್ಲಿ ಕಾಣುವುದಕ್ಕೆ ಸಾಧ್ಯವಿದೆ.

ಸ್ವತಂತ್ರ ಭಾರತ ಮಹಿಳೆಯರಿಗೆ ಮತ್ತು ಶೂದ್ರರಿಗೆ ಬಿಡುಗಡೆ ಒದಗಿಸಿದ ಕಾಲ. ಇಂತಹ ಬಿಡುಗಡೆಯ ಬೀಜವನ್ನು ಬ್ರಿಟಿಷರು ತಮ್ಮ ಆಡಳಿತದ ಅವಧಿಯಲ್ಲಿ ಈ ನೆಲದಲ್ಲಿ ಬಿತ್ತಿಹೋಗಿದ್ದರು. ಭಾಷೆ, ಶಿಕ್ಷಣ, ಹಾಗೂ ಸಾಂಸ್ಕೃತಿಕಚಹರೆಗಳ ಮೇಲೆ ಗಾಢವಾದ ಪರಿಣಾಮ ಬೀರಿದ್ದರು. ಮನುಷ್ಯ ಬದುಕಿನ ಹಿನ್ನೆಲೆಯನ್ನು ಗಮನಿಸಿದಾಗ ಮೊದಲಿಂದಲೂ ಶೋಷಣೆಗೆ ಒಳಗಾಗಿರುವ ವ್ಯಕ್ತಿಯೆಂದರೆ ಮಹಿಳೆಯೇ. ಇಂತಹ ಮಹಿಳೆಯ ಬದುಕು ಮತ್ತು ಸುಧಾರಣೆಗಳನ್ನು ನವೋದಯ ಪೂರ್ವದ ಮತ್ತು ನವೋದಯ ಕಾದಂಬರಿಗಳಲ್ಲಿ ಕಾಣಬಹುದಾಗಿದೆ.

ಕನ್ನಡದ ಆರಂಭದ ಕಾದಂಬರಿಗಳಲ್ಲಿ ಇಂಗ್ಲಿಷ್ ಸಾಹಿತ್ಯದ ಪ್ರಭಾವ, ವಾಸ್ತವತಾವಾದ, ಕೈಗಾರೀಕರಣದಿಂದ ಉಂಟಾದ ಚಲನಶೀಲತೆಯನ್ನು ಕಾಣುತ್ತೇವೆ. ಅನಂತರ ನವೋದಯದ ಸ್ತ್ರೀಪ್ರಧಾನ ಸಾಮಾಜಿಕ ಕಾದಂಬರಿಗಳಲ್ಲಿ ಸುಧಾರಣಾವಾದದ ಪ್ರಭಾವ ಹೆಚ್ಚಾಗಿ ಕಂಡುಬರುತ್ತದೆ. ಮೂಢನಂಬಿಕೆಗಳ ಖಂಡನೆ, ಸಾಂಸ್ಕೃತಿಕ ಭ್ರಷ್ಟಾಚಾರದ ಟೀಕೆ, ಮಾನವೀಯ ಮೌಲ್ಯಗಳು, ಆದರ್ಶವಾದ ಮುಂತಾದವು ಎದ್ದು ಕಾಣುತ್ತವೆ. ಧಾರ್ಮಿಕತೆಯ ಅತಿರೇಕನೆಲೆಯನ್ನು ಖಂಡಿಸಲಾಗಿದೆ. ಅಲ್ಲದೆ ಆರಂಭದ ಕಾದಂಬರಿಗಳನ್ನು ರಚಿಸಿದ ಬೋಳಾರ ಬಾಬುರಾವ್, ವಾಸುದೇವಾಚಾರ್ಯ, ಗುಲವಾಡಿ, ಎಂ.ಎಸ್.ಪುಟ್ಟಣ್ಣ ಮುಂತಾದವರು ಪುರುಷರೇ ಆದರೂ ಕಾದಂಬರಿಗಳ ಕೇಂದ್ರಪಾತ್ರಗಳೆಲ್ಲ ಸ್ತ್ರೀಯರೇ ಎಂಬುದು ಗಮನಾರ್ಹ ವಿಷಯ.

ಕನ್ನಡದ ಮೊದಲ ಸಾಮಾಜಿಕ ಕಾದಂಬರಿ 'ಇಂದಿರಾಬಾಯಿ' (೧೮೯೯) ಮತ್ತು 'ವಾಗ್ದೇವಿ' (೧೯೦೫). ಗುಲವಾಡಿ ವೆಂಕಟರಾವ್ ಮತ್ತು ಬೋಳಾರ ಬಾಬುರಾವ್ ಈ ಕಾದಂಬರಿಗಳ ಲೇಖಕರು. ವಿಡಂಬನೆ ಮತ್ತು ವಿಮರ್ಶೆಗಳ ಮೂಲಕ ಮಠಾಧಿಪತಿಗಳನ್ನು ಟೀಕಿಸಿರುವುದು ವಿಶೇಷ ಗಮನಾರ್ಹ. ಕರ್ನಾಟಕದಲ್ಲಿ ಮೊದಲು ಆಧುನಿಕ ಶಿಕ್ಷಣ ಪಡೆದು ಬ್ರಹ್ಮಸಮಾಜದ ಪ್ರಭಾವಕ್ಕೆ ಒಳಗಾಗಿ ಸ್ತ್ರೀಶಿಕ್ಷಣ, ಬಾಲ್ಯವಿವಾಹ, ಕೇಶಮುಂಡನ, ಸಮುದ್ರಯಾನ, ಬಹುಪತ್ನಿತ್ವ, ಮತ್ತು ಅಸ್ಪೃಶ್ಯತೆ .ಬೋಳಾರ ಬಾಬುರವ್,ಗುಲ್ವಾಡಿ, ವಾಸುದೇವಾಚಾರ್ಯ, ಎಂ.ಎಸ್.ಪುಟ್ಟಣ್ಣ ಮುಂತಾದ ವಿಷಯಗಳಲ್ಲಿ ಪ್ರಗತಿಶೀಲ ಧೋರಣೆ ಹೊಂದಿ, ಮಠಮಂದಿರಗಳಲ್ಲಿ ನಡೆಯುತ್ತಿದ್ದ ಡಂಭಾಚಾರ, ವಿಷಯ ಲೋಲುಪತೆಗಳನ್ನು ತೀಕ್ಷ್ಣವಾಗಿ ಟೀಕಿಸಿದರು.

ಕೆರೂರು ವಾಸುದೇವಾಚಾರ್ಯರ 'ಇಂದಿರೆ' ಕಾದಂಬರಿಯಲ್ಲಿ ಪುನರ್ವಿವಾಹದ ಪ್ರಶ್ನೆ ಮುಖ್ಯವಾಗುತ್ತದೆ. ೧೯೧೫ರಲ್ಲಿ ಪ್ರಕಟವಾದ 'ಮಾಡಿದ್ದುಣ್ಣೋ ಮಹಾರಾಯ' ಕಾದಂಬರಿಯಲ್ಲಿ ಸಂಪ್ರದಾಯ, ಹಳೆಯ ಮೌಢ್ಯಗಳು ಹಿಂದೆ ಸರಿಯುತ್ತವೆ. ಅರಾಜಕತೆ, ಭ್ರಷ್ಟಾಚಾರ, ಮೋಸ, ವಂಚನೆಗಳನ್ನು ಟೀಕಿಸಿರುವುದಲ್ಲದೆ ಸ್ತ್ರೀಯರ ಬದುಕಿನ ಹಳೆಯ ಮೌಲ್ಯಗಳಾದ ಪಾತಿವ್ರತ್ಯ, ವಿಧೇಯತೆ ತ್ಯಾಗ, ಸಹನೆ ಅಲ್ಲದೆ ಸೇವಾ ಮನೋಭಾವಗಳನ್ನು ಎಂ.ಎಸ್. ಪುಟ್ಟಣ್ಣನವರು

ಚಿತ್ರಿಸಿದ್ದಾರೆ. ಸತಿಪದ್ಧತಿ ಆಂದೋಲನ ಭಾರತದಲ್ಲಿ ತೀವ್ರವಾಗಿದ್ದ ಸಂದರ್ಭದಲ್ಲಿ ಕಾದಂಬರಿಕಾರರು ಮೃತಗಂಡನೊಂದಿಗೆ ಜೀವಂತವಾಗಿ ಚಿತೆಯೇರಿದ ಅರುಂಧಮ್ಮನ ಮಹಾಸತೀತ್ವವನ್ನು ತುಂಬಾ ಆದರ ಅಭಿಮಾನಗಳಿಂದ ಚಿತ್ರಿಸಿದ್ದಾರೆ.

ಆರಂಭದ ಕಾದಂಬರಿಗಳಲ್ಲಿ ಸ್ತ್ರೀಸಂವೇದನೆ ಪ್ರಧಾನವಾಗಿ ಗುರುತಿಸಲ್ಪಟ್ಟಿದ್ದರೂ, ಸ್ತ್ರೀ ಶಿಕ್ಷಣ ಚರ್ಚೆಯ ವಿಷಯವಾಗಿದೆ. ಬಾಲ್ಯವಿವಾಹ, ವಿಧವಾವಿವಾಹ ಮುಂತಾದ ವಿಷಯಗಳು ಬಹಳ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತವೆ. ಬಾಲವಿಧವೆಯೊಬ್ಬಳ ಮರುವಿವಾಹವನ್ನು ಗುಲವಾಡಿಯವರು 'ಇಂದಿರಾಬಾಯಿ'ಯಲ್ಲಿ ಸುಶಿಕ್ಷಿತ ಮಹಿಳೆಯೊಬ್ಬಳು ತನ್ನ ವ್ಯಕ್ತಿತ್ವ ವಿಕಾಸದಿಂದ ಸುತ್ತಲಿನ ಪರಿಸರದ ಮೇಲೆ ಪ್ರಭಾವ ಬೀರಿ ಹೇಗೆ ಮಾದರಿಯಾಗುತ್ತಾಳೆಂಬುದನ್ನು ತಿಳಿಸಿದ್ದಾರೆ. ಅನಂತರ ಕೆರೂರು ಅವರು 'ಇಂದಿರೆ'ಯಲ್ಲಿ ಇಂದಿರೆಯು ವಿದ್ಯಾವಂತಳೂ, ಸುಶಿಕ್ಷಿತಳೂ ಆಗಿದ್ದರೂ ಪರಂಪರಾಗತ ಹಿಂದೂಧರ್ಮದ ಉನ್ನತ ಆದರ್ಶದ ಪ್ರತೀಕವಾಗಿ, ಹಿಂದೂ ಧರ್ಮದಲ್ಲಿ ಕ್ರಾಂತಿಕಾರಕ ಬದಲಾವಣೆಯನ್ನು ನಿರಾಕರಿಸುವ ಪ್ರಯತ್ನದ ಪ್ರತೀಕವಾಗಿ ಕಂಡುಬರುತ್ತಾಳೆ. ಹೀಗೆ ಆರಂಭದ ಕಾದಂಬರಿಕಾರರು ವಸಾಹತೀಕರಣದ ಪ್ರಭಾವಕ್ಕೊಳಗಾಗಿ, ಇಂಗ್ಲಿಷ್ ಶಿಕ್ಷಣಕ್ಕೆ ತೆರೆದುಕೊಂಡು, ಮಹಿಳೆಯರ ಸ್ಥಿತಿಗಳನ್ನು ಆಪ್ತವಾಗಿ ಚಿತ್ರಿಸಿದ್ದಾರೆ. ಆರಂಭದ ಕಾದಂಬರಿಕಾರರು ಈ ರೀತಿ ಮಹಿಳೆಯರ ಬದುಕನ್ನು ಕುರಿತಂತೆ ಚಿತ್ರಿಸಿದ್ದು ಮುಂದೆ ಬಂದಂಥ ನವೋದಯದ ಲೇಖಕರಿಗೆ ಹೆಣ್ಣನ್ನು ಹೆಚ್ಚು ಮಾನವೀಯವಾಗಿ ಮತ್ತು ಗಂಭೀರವಾಗಿ ನೋಡುವಂತಹ ಪ್ರಯತ್ನ ಮಾಡುವುದಕ್ಕೆ ಒಂದು ಭೂಮಿಕೆಯನ್ನೇ ಸಿದ್ಧಪಡಿಸುತ್ತಾರೆ.

ನವೋದಯ ಸಾಹಿತ್ಯ ಸಂದರ್ಭದಲ್ಲಿ ಹಲವಾರು ಸಾಹಿತ್ಯ ಪ್ರಕಾರಗಳು ರೂಪುಗೊಂಡರೂ ಕಾದಂಬರಿ ಪ್ರಧಾನವಾದ ಪ್ರಕಾರವಾಗಿ ಬೆಳೆದಿದೆ. ನವೋದಯ ಸಂದರ್ಭದಲ್ಲಿನ ಕಾದಂಬರಿಗಳಲ್ಲಿ ಪ್ರಧಾನವಾಗಿ ಮಹಿಳಾ ಸಂವೇದನೆಯನ್ನು ಗುರುತಿಸಿದರೂ, ಸುಧಾರಣಾವಾದದ, ಪುನರುಜ್ಜೀವನದ ಮೌಲ್ಯಗಳು ಆ ಕಾದಂಬರಿಗಳಲ್ಲಿ ಕಂಡುಬರುತ್ತವೆ. ಕುವೆಂಪು ಅವರ 'ಕಾನೂರು ಹೆಗ್ಗಡಿತಿ' ಹೆಸರೇ ಸೂಚಿಸುವಂತೆ ಕಾನೂರಿನ ಗೌಡರಾದ ಚಂದ್ರಯ್ಯಗೌಡರ ಕುಟುಂಬವನ್ನು ಕುರಿತಾದದ್ದು. ಈ ಕುಟುಂಬದ ಮುಖ್ಯಪಾತ್ರವಾದ ಸುಬ್ಬಮ್ಮನ ಸಂಕೀರ್ಣ ವ್ಯಕ್ತಿತ್ವವನ್ನು ಕಲಾತ್ಮಕವಾಗಿ ಚಿತ್ರಿಸಿದ್ದಾರೆ. ಬಡಕುಟುಂಬದಲ್ಲಿ ಬೆಳೆದ ಸುಬ್ಬಮ್ಮ ವಯಸ್ಸಾದ ಮತ್ತು ವಿಧುರನಾದ ವರನಿಗೆ ಮೂರನೆಯ ವಿವಾಹದ ವಧುವಾಗುತ್ತಾಳೆ. ಸುಬ್ಬಮ್ಮನಿಗೆ ಇದು ಇಷ್ಟವಾಗದಿದ್ದರೂ ಒಂದು ದೊಡ್ಡಮನೆಗೆ ಯಜಮಾನಿಯಾಗಬಹುದೆಂಬ ಸಂತೋಷದಿಂದ ಒಪ್ಪುತ್ತಾಳೆ. ಅನಂತರ ಹೆಗ್ಗಡಿತಿಯಾದ ಸುಬ್ಬಮ್ಮ ಕಾನೂರು ಮನೆಯಲ್ಲಿ ಅನಾಗರಿಕಳಾಗಿ ವರ್ತಿಸುತ್ತಾಳೆ. ದಾರಿದ್ರ್ಯದಲ್ಲೆ ಹುಟ್ಟಿ ಬೆಳೆದ ಸುಬ್ಬಮ್ಮ ಅಸಂಸ್ಕೃತ ನಡೆನುಡಿಯಿಂದ ಬೆಳೆದಂತಹವಳು. ಅವಳಲ್ಲಿ ಸುಸಂಸ್ಕೃತವಾದ ಸ್ತ್ರೀಸಹಜವಾದ ಔದಾರ್ಯ, ಗಾಂಭೀರ್ಯ, ನಯ ವಿನಯ, ಸಂಯಮ, ಸಂಚಲನಗಳು ಒಂದಿನಿತು ಇರಲಿಲ್ಲ ಎಂಬುದು ಕಾದಂಬರಿಕಾರರಿಗೆ ಮುಖ್ಯವಾದ ಸಂಗತಿಯಾಗುತ್ತದೆ. ಅನಂತರ ಸೀತೆಯ ಪಾತ್ರವು ಅತ್ಯಂತ

ಕುತೂಹಲಕಾರಿಯಾದದು. ತಾನು ಬಯಸಿದ್ದನ್ನು ಸಾಧಿಸಿಕೊಳ್ಳುವ ಪಾತ್ರ. ಹೂವಯ್ಯನಂತಹ ವಿದ್ಯಾವಂತ ಸುಸಂಸ್ಕೃತ ಪಾತ್ರದ ಪ್ರಭಾವಕ್ಕೆ ಸಿಲುಕಿದ ಸೀತೆ ಸೂಕ್ಷ್ಮಹೃದಯದ ಭಾವಜೀವಿಯಾದ ವ್ಯಕ್ತಿಯಾಗಿ ಪರಿವರ್ತಿತಳಾಗುತ್ತಾಳೆ. ಹೂವಯ್ಯನಂತಹ ವಿದ್ಯಾವಂತ ಸೀತೆಯ ಜೀವನದಲ್ಲಿ ಅಳಿಸಲಾಗದಂತಹ ಪರಿಣಾಮವನ್ನು ಉಂಟುಮಾಡುತ್ತಾನೆ. ಹೂವಯ್ಯ ಮತ್ತು ಸೀತೆಯರ ಪ್ರೀತಿಗೆ ರೂಢಿಯ, ಕಟ್ಟುನಿಟ್ಟಿನ ಶಾಸ್ತ್ರದ ರೀತಿಯ ಅವಲಂಬನೆ ಇವರಿಗೆ ಅನಗತ್ಯ. ಹೀಗೆ ಸೀತೆ ಚಿತ್ರಣ ಅಕ್ಕಮಹಾದೇವಿಯಂತೆ ಕಂಡುಬರುತ್ತದೆ. ಸೀತೆ ಹೂವಯ್ಯನ ಆತ್ಮದ ಸಂಗಾತಿಯಾಗಿ ಲೈಂಗಿಕ ಬದುಕಿಗೆ ದೂರವಾಗಿ ತಪಸ್ವಿನಿಯಾಗಿ ಕಾನೂರಿನಲ್ಲಿಯೇ ಉಳಿಯುತ್ತಾಳೆ.

ಕುವೆಂಪು ಅವರ 'ಮಲೆಗಳಲ್ಲಿ ಮಧುಮಗಳು' ಮಲೆನಾಡಿನ ವಿವಿಧ ಸ್ತರಗಳಿಗೆ ಸೇರಿದ ಮದುಮಕ್ಕಳ ಪ್ರೇಮದ ಬದುಕು. ಇಲ್ಲಿನ ಪಾತ್ರಗಳು ವೈಯಕ್ತಿಕ ಬದುಕಿನ ಮಿತಿಗಳನ್ನು ಮೀರುತ್ತಲೆ ಅಗಾಧವಾದ ಹೊಸಹುಟ್ಟು ಪಡೆಯುತ್ತವೆ. ಕ್ರೈಸ್ತಧರ್ಮದ ಪ್ರಭಾವದಿಂದ ಮಲೆನಾಡಿನ ಹೆಣ್ಣುಗಳು ಅನುಭವಿಸುವ ಯಾತನೆಗಳು ಕಾದಂಬರಿಯಲ್ಲಿ ನಿರ್ದುಷ್ಟವಾಗಿ ಮೂಡಿಬಂದಿದೆ. ತನ್ನ ಗಂಡನ ಆಕ್ಷೇಪಣೀಯ ವರ್ತನೆಗಳೆಲ್ಲವನ್ನು ಕ್ಷಮಿಸಲು ಸಿದ್ದವಿದ್ದ ದೇವಮ್ಮ ಅವನ ಕ್ರೈಸ್ತಮತಾಂತರವನ್ನು ಒಪ್ಪಲು ಸಿದ್ದಳಿರುವುದಿಲ್ಲ. ದೇವಯ್ಯನಿಗೆ ವಿವಾಹ ವಿಚ್ಚೇದನ ಪಡೆದುಕೊಳ್ಳಲು ಒತ್ತಾಯಿಸುವ ಪಾದ್ರಿ, ಕಾವೇರಿಯ ಸಾವನ್ನು ಅತ್ಯಾಚಾರ ಪ್ರಕರಣವೆಂದು ದಾಖಲು ಮಾಡಿಸುವ ಐಗಳು ಮತ್ತು ಅನಂತಯ್ಯ ಕಾನೂನನ್ನು ಖಾಸಗೀ ಬದುಕಿಗೆ ಎಳೆದು ತರುತ್ತಾರೆ. ಧರ್ಮಸಮ್ಮತ ವಿವಾಹದ ಜೊತೆಗೆ ವಿವಾಹೇತರ ಲೈಂಗಿಕ ಸಂಬಂಧಗಳನ್ನು ಕೆಳಜಾತಿಯ ಹೆಣ್ಣು ಮೇಲುಜಾತಿಯ ಗಂಡು ಇವು ಸಾಮಾಜಿಕ ಒಪ್ಪಂದವೆನ್ನುವಂತೆ ಕಂಡುಬರುತ್ತವೆ. ಭಿನ್ನಜಾತಿಗೆ ಸೇರಿದ ಮದುಮಕ್ಕಳು ಇಲ್ಲಿ ಹೆತ್ತವರ ಅಭಿಪ್ರಾಯವನ್ನು ಕೇಳದೆ ತಾವು ಒಲಿದವರೊಡನೆ ಓಡಿಹೋಗುವುದು ಮುಖ್ಯ ಘಟನೆಯಾಗುತ್ತದೆ.

'ಹೆಗ್ಗಡಿತಿ' ಕಾದಂಬರಿಯಲ್ಲಿ ಬರುವ ಸುಬ್ಬಮ್ಮ ಮತ್ತು ಸೀತೆಯರು "ಗ್ರಾಮದ ಸಂಪ್ರದಾಯಸ್ಥ ಆವರಣದಲ್ಲಿ ನೆಲೆನಿಂತ ಎಲ್ಲ ಶಕ್ತಿಗಳಿಂದಲು ಬಂಧಿಸಲ್ಪಟ್ಟವರೆ. ಸುಬ್ಬಮ್ಮನಿಗೆ ಬಡತನವಿದ್ದದ್ದರಿಂದ ಒರಟುತನ, ಕ್ರೌರ್ಯ, ಮಾತ್ಸರ್ಯ, ದುರಹಂಕಾರ, ದಬ್ಬಾಳಿಕೆಯ ಜೊತೆ ಕಾಮವು ಸೇರಿ ಸಂಯಮವಿಲ್ಲದ ತೀರಾ ಪ್ರಾಕೃತಿಕ ಬದುಕಿನ ದುರಂತಕ್ಕೆ ಅವಳು ಪ್ರತಿನಿಧಿಯಂತೆ ತೋರುತ್ತಾಳೆ. ಅವಳ ಸ್ವಭಾವದ ವೈಪರೀತ್ಯಗಳಿಗೆ ಪರಿಸರವೇ ಕಾರಣವೆಂಬುದರ ಪ್ರಜ್ಞಾಪೂರ್ವಕ ನಿರೂಪಣೆ ಕೃತಿಯಲ್ಲಿದೆ".[೮] ಈ ರೀತಿ ಸುಬ್ಬಮ್ಮ ಚಿಕ್ಕವಯಸ್ಸಿನಲ್ಲಿಯೇ ವಿಧುರನನ್ನು ಮದುವೆಯಾದರು ಗಂಡನಿಂದ ನಾನಾ ರೀತಿಯ ಹಿಂಸೆಗೆ ಗುರಿಯಾಗುತ್ತಾಳೆ. ಆರಂಭದ ಕಾದಂಬರಿಕಾರರಂತೆ ಕುವೆಂಪು ಅವರು ಸ್ತ್ರೀಬದುಕಲ್ಲಿ ಸುಧಾರಣೆ ತರುವ ಆಶಯಕ್ಕಿಂತ ಸುತ್ತಲ ಪರಿಸರದಿಂದ ಹೆಣ್ಣಿನ ಬದುಕು ಹೇಗೆ ದುರಂತಕ್ಕೀಡಾಗುತ್ತದೆ ಎಂಬುದನ್ನು ಸೂಕ್ಷ್ಮವಾಗಿ

ಚಿತ್ರಿಸಿದ್ದಾರೆ. ಆದರೆ ಸೀತೆಯಲ್ಲಿ ಸ್ವಾಭಿಮಾನ ದಿಟ್ಟತನಗಳಿರುವುದರಿಂದ ಆಕೆ ಚಂದ್ರಯ್ಯಗೌಡನಿಗೆ ಅಧೀನಳಾಗುವುದಿಲ್ಲ ರಾಮಯ್ಯನಿಗೆ ಹೆಂಡತಿಯೂ ಆಗುವುದಿಲ್ಲ. "ಈ ರೀತಿ ವಿವಾಹವನ್ನು ಪವಿತ್ರ ಬಂಧನವೆಂದು, ನಾಡಿನ ಕೌಟುಂಬಿಕ ಬದುಕಿನ ಭದ್ರತೆಯ ಮೂಲವೆಂದು ಗ್ರಹಿಸಿ, ದಾಂಪತ್ಯದ ಚೌಕಟ್ಟಿನೊಳಗೆ ಆದರ್ಶ ಪ್ರೇಮದ ಪ್ರತಿಪಾದನೆಗೆ ತೊಡಗುವುದು ನವೋದಯದ ಪ್ರಮುಖ ಲಕ್ಷಣಗಳಲ್ಲೊಂದು" ಎನ್ನುವ ಮಾತನ್ನು ಜಿ.ಎಸ್.ಶಿವರುದ್ರಪ್ಪನವರು ಹೇಳಿರುವುದು ನವೋದಯ ಕಾದಂಬರಿಕಾರರ ಆಶಯವನ್ನು ತಿಳಿಸುತ್ತದೆ.

ಕನ್ನಡ ಕಾದಂಬರಿ ಪರಂಪರೆಯಲ್ಲಿ ಮೊದಲಿಗರಾದ ಕಾರಂತರು ವೈಚಾರಿಕ ನೆಲೆಯಿಂದ ಹೆಣ್ಣು ಗಂಡಿನ ಸಂಬಂಧವನ್ನು ತಮ್ಮ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ಕಾರಂತರ ಕಾದಂಬರಿಗಳಲ್ಲಿ ಗ್ರಾಮೀಣ ಸಂಸ್ಕೃತಿಯನ್ನ, ಗ್ರಾಮೀಣ ಮಹಿಳೆಯರ ಕಷ್ಟಸುಖಗಳನ್ನು, ಹಾಗೂ ಗ್ರಾಮೀಣ ಮಹಿಳೆಯರ ಬದುಕಿನ ಮೌಲ್ಯಗಳನ್ನು ಕಾಣುತ್ತೇವೆ. ಮುಂದುವರೆದು ವಿವಾಹದ ಸ್ವರೂಪಗಳು, ಆ ಚೌಕಟ್ಟಿನಲ್ಲಿ ಬರುವ ಗರತಿಯರು ಮತ್ತು ಆ ಚೌಕಟ್ಟಿನಾಚೆ ಬರುವ ವೇಶ್ಯೆಯರು ಇವರ ಬದುಕಿನ ಅವ್ಯವಸ್ಥೆಯ ಬಗ್ಗೆ ಹೆಚ್ಚಿನ ಗಮನ ಹರಿಸಿದೆ. ಅವರ ಪ್ರಾಮಾಣಿಕ ಬದುಕಿನ ಕಡೆಗೆ ಹೆಚ್ಚಿನ ಒತ್ತುಕೊಟ್ಟಿದ್ದಾರೆ.

'ಮರಳಿ ಮಣ್ಣಿಗೆ' ಮದುವೆಯ ವರ್ಣನೆಯಿಂದ ಆರಂಭವಾಗುತ್ತದೆ. ಹೆಣ್ಣಿನ ಬದುಕನ್ನು, ಭವಿಷ್ಯವನ್ನು ನಿರ್ಧಾರಮಾಡುವ ಮದುವೆ ಕಾದಂಬರಿಯಲ್ಲಿ ಸಂಕೇತವಾಗಿ ಬಳಕೆಯಾಗಿದೆ. ರಾಮಐತಾಳ, ಪಾರೋತಿಯರ ಮದುವೆಯಿಂದ ಆರಂಭವಾಗುವ ಪಾರೋತಿಯ ಜೀವನ ಹೋರಾಟದಲ್ಲಿ ಕಹಿಯೇ ಕಂಡುಬರುತ್ತದೆ. ಕುಟುಂಬದಲ್ಲಿ ಸರಸ್ವತಿ ಮತ್ತು ಪಾರೋತಿಗಿಂತ ನಾಗವೇಣಿ ಗೌರವಿಸಲ್ಪಡುವ ಪಾತ್ರ. ಎಲ್ಲ ಗರತಿಯರಂತೆ ತಾನೊಂದು ಕೂಸನ್ನು ಪಡೆಯಬೇಕೆಂಬ ಪಾರೋತಿಯ ಬಯಕೆ ಸಹಜವಾದದ್ದೆ. ಆ ಬಯಕೆ ಈಡೇರದಿದ್ದಾಗ ಗಂಡನ ಮರುಮದುವೆಗೆ ಸಮ್ಮತಿಸುತ್ತಾಳೆ. ಪಾರೋತಿಯ ಕಷ್ಟಮಯ ಬದುಕನ್ನು ಕಾದಂಬರಿ ಚಿತ್ರಿಸುತ್ತದೆ. ಆಧುನಿಕ ಪ್ರಕ್ರಿಯೆಗೆ ಒಳಗಾದ ಶೋಕಿಯ ಲಕ್ಷ್ಮಣನನ್ನು ಮದುವೆಯಾಗುವ ನಾಗವೇಣಿ ತನ್ನ ಹಿಂದಿನ ತಲೆಮಾರಿನವರಿಗಿಂತ ಹೆಚ್ಚು ತೊಂದರೆ ಅನುಭವಿಸುತ್ತಾಳೆ. ನಾಗವೇಣಿ ವಿದ್ಯಾವಂತಳಾಗಿದ್ದರು, ಹೆತ್ತವರ ಬೆಂಬಲವಿದ್ದರೂ ತಾನು ಮದುವೆಯಾದ ಮನೆಯ ಬದುಕಿಗೆ ಹೊಂದಿಕೊಳ್ಳುತ್ತಾಳೆ. ಮೂರನೆಯ ತಲೆಮಾರಿನ ಮಹಿಳೆ ರಾಮನ ಹೆಂಡತಿಯಾಗಿ ಗೋಚರಿಸುತ್ತಾಳೆ.

ಸರಸೋತಿ, ಪಾರೋತಿ, ಸತ್ಯಭಾಮೆ, ನಾಗವೇಣಿಯರ ಬದುಕಿನ ಹಲವು ಮಗ್ಗುಲುಗಳನ್ನು, ನೋವಿನ ಪದರುಗಳನ್ನು ತೀರ ಆಪ್ತವಾಗಿ ಕಾರಂತರು ಚಿತ್ರಿಸಿದ್ದಾರೆ.

'ಮೈಮನಗಳ ಸುಳಿಯಲ್ಲಿ' ವೇಶ್ಯೆಯ ಬದುಕು ವಿವಿಧ ತಲೆಮಾರಿನಲ್ಲಿ ಪಡೆದುಕೊಂಡ ಅರ್ಥವಂತಿಕೆಯನ್ನು ಚಿತ್ರಿಸುತ್ತದೆ. "ನಾವಿರುವುದು ಮೈಮಾರಿಕೊಳ್ಳುವುದಕ್ಕೇ ಹೊರತು

ಮಸಸ್ಸನ್ನಲ್ಲ" ಎಂದು ತನ್ನ ಕಸುಬನ್ನು ನಂಬಿರುವ ಮಂಜುಳೆಯ ತಾಯಿ ಭವಾನಿ ಗರತಿಯಂತೆ ಬಾಳುತ್ತಾಳೆ. ಬಾಳು ಕೊಟ್ಟವನಿಗೆ ಮೈಮನಸ್ಸುಗಳೆರಡನ್ನು ಧಾರೆಯೆರೆಯುತ್ತಾಳೆ. ಆದರೆ ತಾಯಿಗಿಂತಲೂ ಸಮೃದ್ಧವಾದ ಶ್ರೀಮಂತ ಬದುಕನ್ನು ನಡೆಸುವ ಮಂಜುಳೆ, ಮೈ ಮತ್ತು ಮನಸ್ಸುಗಳೆರೆಡರ ಮೇಲು ನಿಯಂತ್ರಣ ಸಾಧಿಸುತ್ತಾಳೆ. ತನ್ನ ಮೈಯನ್ನು ಬಯಸಿದ ಮತ್ತು ಮನಸ್ಸನ್ನು ಆಶಿಸಿದ ವ್ಯಕ್ತಿಯನ್ನು ಆಯ್ಕೆಮಾಡಿಕೊಳ್ಳುವ ಸ್ವಾತಂತ್ರ್ಯ ಪಡೆದಿದ್ದಾಳೆ. ಮರ್ಯಾದೆಯಿಂದ ಬದುಕು ನಡೆಸಬೇಕೆನ್ನುವ ಚಂದ್ರಿಯ ಮನಸ್ಸು ಆಕೆಯ ಬಾಳಿನ ಆಶಯವನ್ನು ತಿಳಿಸುತ್ತದೆ. ಹೆಣ್ಣು ಗರತಿಯಿರಲಿ,ವೇಶ್ಯೆಯಿರಲಿ, ಆ ಪಾತ್ರಗಳನ್ನು ಒಳಹೊಕ್ಕು ಗೌರವದಿಂದ ನೋಡುವ ಕಾರಂತರ ಮನಸ್ಸು ತುಂಬಾ ಸಮರ್ಥವಾದದ್ದು.

'ಸರಸಮ್ಮನ ಸಮಾಧಿ' ವಿವಾಹ ಜೀವನದ ಸಮಸ್ಯೆಯ ಮಗ್ಗುಲನ್ನು ತಿಳಿಸುವಂತದ್ದು. ವಿದ್ಯಾವಂತಳಾದ ಸುನಾಲಿಗೆ ತನ್ನ ಗಂಡನಿಂದ ದಾಂಪತ್ಯ ಸುಖ ಸಿಕ್ಕುವುದಿಲ್ಲ. ಗಂಡನ ಮತ್ತು ಅತ್ತೆಯ ಕಾಟದಿಂದ ರೋಸಿ ಸರಸಮ್ಮನ ಗುಡಿಗೆ ಮೊರೆಹೋಗುತ್ತಾಳೆ. ಸ್ವಾಭಿಮಾನಿ ಭಾಗೀರಥಿ ಗಂಡನಿಂದ ಪ್ರೀತಿಯನ್ನು ನಿರೀಕ್ಷಿಸಿ ವಿಫಲಳಾಗಿ ಮಾವನ ಕೀಳುಧೋರಣೆಯ ಮಾತಿಗೆ ಬೇಸತ್ತು ತವರನ್ನು ಸೇರುತ್ತಾಳೆ. ಇಂತಹ ಹೆಣ್ಣುಗಳ ಬದುಕೆ ವೇಶ್ಯೆ ಬೆಳ್ಳಮ್ಮನ ಬದುಕಿಗೆ ಬಂಡವಾಳವಾಗುತ್ತದೆ. ಯುವಕ ಚಂದ್ರಯ್ಯ ಕೂಡ ಸರಸಮ್ಮನ ನೆರಳಿಗೆ ಬಂದವನೆ. ಹೀಗೆ ಎಲ್ಲ ವೈವಾಹಿಕ ಸಮಸ್ಯೆಗಳನ್ನು ಪರಿಹರಿಸಬಲ್ಲ ಖ್ಯಾತಿ ಹೊಂದಿದ ಸರಸಮ್ಮ ಕೂಡ ವಿಷಮ ದಾಂಪತ್ಯದ ಫಲವಾಗಿ ರೋಗಿಷ್ಠ ಪತಿಯು ಮರಣಿಸಿದಾಗ ಬಲವಂತವಾಗಿ ಅವನೊಡನೆ ಚಿತೆಯೆರುತ್ತಾಳೆ. ತಮ್ಮ ವೈಚಾರಿಕ ಪ್ರಜ್ಞೆ ಮತ್ತು ಮಾನವೀಯ ನೆಲೆಯಿಂದ ಸಂಪ್ರದಾಯ ಸಮಾಜವನ್ನು, ರೂಢಿಗತ ಬದುಕನ್ನು ಕಾರಂತರು ಸುಧಾರಣಾ ಮನೋಭಾವದಿಂದ ನೋಡಿರುವುದನ್ನು ಕಾದಂಬರಿಯಲ್ಲಿ ಕಾಣುತ್ತೇವೆ.

ಕಾರಂತರ ಕಾದಂಬರಿಗಳಲ್ಲಿನ ಮಹಿಳಾ ಸಂವೇದನೆಯನ್ನು ಗ್ರಾಮೀಣ ಮತ್ತು ನಗರ ಪ್ರದೇಶದ ಮಹಿಳೆಯರೆಂದು ವಿಂಗಡಿಸಿ ನೋಡಬಹುದಾಗಿದೆ. "ಈ ಗ್ರಾಮೀಣ ಮಹಿಳೆಯರು ಪರಂಪರಾಗತವಾಗಿ ಬಂದ ಸಾಮಾಜಿಕ ಮೌಲ್ಯಗಳನ್ನು ಒಪ್ಪಿದವರು. ಸ್ವಇಚ್ಛೆಯಿಂದಲ್ಲದಿದ್ದರೂ ಸಾಮಾಜಿಕ ಒತ್ತಡಗಳಿಂದ ಹಾಗೆ ಒಪ್ಪಬೇಕಾಗಿ ಬಂದಿದೆ. ವೈವಾಹಿಕ ಜೀವನದಲ್ಲಿ ಕಹಿಯನ್ನೇ ಹೆಚ್ಚಾಗಿ ಉಂಡಿದ್ದರೂ ತಮ್ಮ ಹೆಣ್ಣು ಮಕ್ಕಳಿಗೆ ಹನ್ನೆರಡೋ, ಹದಿನಾಲ್ಕೋ ವಯಸ್ಸಾಗುವ ಮುಂಚೆಯೇ ಅವರ ಮದುವೆಗೆ ಚಡಪಡಿಸಬೇಕಾಗುತ್ತದೆ. ಅವರು ಅಂತರ್ಜಾತಿ ವಿವಾಹವಾದರೆ ತಮ್ಮ ಸಂಬಂಧಗಳನ್ನು ತಾತ್ಕಾಲಿಕವಾಗಿಯಾದರೂ ಕಡಿದುಕೊಂಡವರಿದ್ದಾರೆ".[೬] ಅಂದರೆ ಕಾರಂತರ ಕಾದಂಬರಿಗಳಲ್ಲಿನ ಸ್ತ್ರೀಸಂವೇದನೆಯನ್ನು ಗುರುತಿಸಲು ಟಿ.ಪಿ.ಅಶೋಕ ಅವರು ಸರಿಯಾಗಿ ಗುರುತಿಸಿದ್ದಾರೆ. ಗ್ರಾಮೀಣ ಮಹಿಳೆಯರ ಬದುಕಿನ ಇತ್ಯಾತ್ಮಕ ಮುಖಗಳನ್ನು ಕಾರಂತರ ಕಾದಂಬರಿಗಳು ಪ್ರತಿಬಿಂಬಿಸುತ್ತವೆ. ಬದಲಾಗುತ್ತಿರುವ ಪರಿಸ್ಥಿತಿ ಮತ್ತು

ಮನೋಭಾವಗಳನ್ನು ಕಾರಂತರು ಗಮನಿಸುತ್ತಾರಾದರೂ ಹಿಂದಿನ ತಲೆಮಾರುಗಳ ಬಗ್ಗೆ ತೋರುವ ನಂಬಿಕೆ, ಆದರಗಳನ್ನು ಈಚಿನ ತಲೆಮಾರುಗಳ, ನಾಗರಿಕತೆಗಳಿಗೆ ತೆರೆದುಕೊಂಡ ಮಹಿಳೆಯರ ಬಗ್ಗೆ ತೋರುತ್ತಿಲ್ಲವೆಂದು,ಟಿ.ಪಿ.ಅಶೋಕ ಅವರು ಹೇಳಿದ್ದಾರೆ.

ಕಾರಂತರ ಕಾದಂಬರಿಗಳ ಸ್ತ್ರೀಯರು ಪರಂಪರೆಯಿಂದ ಬೆಳೆದುಬಂದ ಚೌಕಟ್ಟೊಂದನ್ನು ಹೊಂದಿದ್ದಾರೆ. ಪುರುಷರ ಹಿತಾಸಕ್ತಿಗನುಗುಣವಾಗಿ, ಸಾಂಸ್ಕೃತಿಕವಾದ ಒತ್ತಡಗಳಿಂದ ರೂಪುಗೊಂಡ ಮೌಲ್ಯಗಳು-ಕಷ್ಟವನ್ನೆ ನುಂಗಿ ಬದುಕುವ ವೃದ್ಧೆಯರು, ಹಗಲಿರುಳೂ ದುಡಿಯುವ ಮಹಿಳೆಯರು, ತ್ಯಾಗ, ಸೇವೆ, ದುಡಿಮೆ, ಅಂತಃಕರಣಗಳ ಪರಂಪರಾಗತ ಮೌಲ್ಯಗಳ ಸಾಕಾರ ಮೂರ್ತಿಗಳು. ಸಂಪ್ರದಾಯದಲ್ಲಿ ಅಚಲವಾದ ನಿಷ್ಠೆ ತಳೆದಿರುವವರು. ತಮ್ಮ ಕುಟುಂಬಗಳನ್ನು, ಮಕ್ಕಳನ್ನು ಕಾಪಾಡಿ ಬೆಳೆಸುವ ಕೆಚ್ಚೆದೆಯ ಸ್ತ್ರೀಯರ ತ್ಯಾಗವನ್ನು ಕಾರಂತರು ಗೌರವ, ಅನುಕಂಪದಿಂದ ಚಿತ್ರಿಸಿದ್ದಾರೆ. ಉದಾ: 'ಮರಳಿಮಣ್ಣಿಗೆ'ಯ ನಾಗವೇಣಿ, ಗಂಡನಿದ್ದೂ ಒಂಟಿತನವನ್ನು ಅನುಭವಿಸುವ ಸ್ತ್ರೀಯರು, ವಿವಾಹ ಚೌಕಟ್ಟನ್ನು ಮೀರಿದ ಮಹಿಳೆಯರು, ಅನ್ಯಾಯ ವಂಚನೆಗೊಳಗಾದವರು ಕಾರಂತರ ಕಾದಂಬರಿಗಳಲ್ಲಿ ಕಂಡುಬರುತ್ತಾರೆ. ಉದಾ: 'ಸರಸಮ್ಮನ ಸಮಾಧಿ'ಯ ಭಾಗೀರಥಿ ಮುಂತಾದವರು. ಅಲ್ಲದೆ ಕಾರಂತರ ಕಾದಂಬರಿಗಳಲ್ಲಿ ವಿಧವಾವಿವಾಹ,ವಿಚ್ಛೇದನ,ಸ್ವತಂತ್ರವಾದ ಏಕಾಂತ ಬದುಕು, ಬಡತನ, ಮುಖ್ಯವಾಗುತ್ತವೆ.ಉದ್ಯೋಗ ಕ್ಷೇತ್ರದ ಮಹಿಳೆಯರಾಗಲಿ, ದುಡಿಯುವ ಮಹಿಳೆಯರಾಗಲಿ, ಆಧುನಿಕ ಸಮಾಜದ ಮಹಿಳೆಯರ ಸಮಸ್ಯೆಗಳಾಗಲಿ ಇವರ ಕಾದಂಬರಿಗಳಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ. ಇವರ ಸ್ತ್ರೀ ಪಾತ್ರಗಳಲ್ಲಿ ಕೊರತೆ, ಅಸಹನೆ ಪರದಾಟಗಳು, ಪ್ರತಿಭಟನಾತ್ಮಕ ಅಂಶಗಳು ಕಂಡುಬರುತ್ತವೆ.

ಪ್ರಗತಿಶೀಲ ಸಾಹಿತ್ಯ ಚಳವಳಿ ಸಂದರ್ಭದಲ್ಲಿ ಕಾದಂಬರಿ ಬರೆದ ಮಹಿಳಾ ಲೇಖಕಿಯರಲ್ಲಿ ಸಾಮಾಜಿಕ ಸಮಸ್ಯೆಗಳನ್ನೊಳಗೊಂಡಂತೆ ಕಾದಂಬರಿಗಳನ್ನು ಬರೆದವರೆಂದರೆ ಎಚ್.ವಿ.ಸಾವಿತ್ರಮ್ಮ, ತ್ರಿವೇಣಿ, ಮತ್ತು ಡಾ.ಅನುಪಮಾ ನಿರಂಜನ ಅವರು. ಪುರುಷಪ್ರಧಾನ ವ್ಯವಸ್ಥೆಯಲ್ಲಿ ಸ್ತ್ರೀ ಅನುಭವಿಸುವ ಸಂಕಟಗಳನ್ನು ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ. ಸಮಕಾಲೀನ ಸಾಮಾಜಿಕ ಸಂದರ್ಭಗಳ ಸಾಂಸ್ಕೃತಿಕವಾದ ಅಂಶಗಳನ್ನು ತಮ್ಮ ಬರಹದಲ್ಲಿ ಮೂಡಿಸಿದ್ದಾರೆ.

ಎಚ್.ವಿ.ಸಾವಿತ್ರಮ್ಮನವರು ಸಣ್ಣಕತೆಗಳನ್ನು ಹೆಚ್ಚಾಗಿ ಬರೆದಿದ್ದಾರೆ. ತಮ್ಮ ಕತೆಗಳಲ್ಲಿ ಸಾಮಾಜಿಕ ಮತ್ತು ಸ್ತ್ರೀಯರ ಕೌಟುಂಬಿಕ ಸ್ಥಿತಿ-ಗತಿ, ಸ್ತ್ರೀ ಪುರುಷರ ಸಂಬಂಧಗಳಲ್ಲಿನ ಬಿರುಕು, ಆಧುನಿಕತೆ ಬಯಸುವ ಸ್ತ್ರೀಯರು ಇವರ ಕತೆಗಳಲ್ಲಿನ ಪಾತ್ರಗಳು. ಸ್ವಾತಂತ್ರ್ಯ ನಂತರದ ದಿನಗಳಲ್ಲಿ ವರದಕ್ಷಿಣೆ, ಇಂಗ್ಲಿಷ್ ವಿದ್ಯಾಭ್ಯಾಸ, ಹೆಣ್ಣುಮಕ್ಕಳ ವಿವಾಹ ಸಮಸ್ಯೆಗಳು, ಕುಟುಂಬ ವ್ಯವಸ್ಥೆ, ಹಳೆಯ ನಂಬಿಕೆಗಳು ಹಿಂದೆ ಸರಿಯುವುದು ಮುಂತಾದ ಸಮಸ್ಯೆಗಳನ್ನು ತಮ್ಮ

ಕತೆಗಳಲ್ಲಿ ಚಿತ್ರಿಸಿದ್ದಾರೆ. ಉದಾ: ಪಶ್ಚಾತ್ತಾಪ ಮತ್ತು ಮೇನಕೆಯಂತಹ ಕತೆಗಳನ್ನು ಹೆಸರಿಸಬಹುದು.

ತ್ರಿವೇಣಿಯವರು ತಮ್ಮ ಬರಹಗಳಲ್ಲಿ ಹೆಣ್ಣಿನ ಸ್ವತಂತ್ರ ವ್ಯಕ್ತಿತ್ವದ ಆಸೆ, ಆಕಾಂಕ್ಷೆಗಳನ್ನು ಹತ್ತಿಕ್ಕುವ ಪುರುಷ ಸಮಾಜವನ್ನು ಚಿತ್ರಿಸಿದ್ದಾರೆ. ಹಲವಾರು ಸಾಮಾಜಿಕ ಸಮಸ್ಯೆಗಳನ್ನು ಆಕರ್ಷಕವಾಗಿ ಚಿತ್ರಿಸಿರುವ ಕಾದಂಬರಿಕಾರರು ಸ್ತ್ರೀ ಪಾತ್ರಗಳ ದಿಟ್ಟತನವನ್ನು ಮನಸೆಳೆಯುವಂತೆ ಚಿತ್ರಿಸಿದ್ದಾರೆ. ಹರೆಯದ ಸೆಳೆತಕ್ಕೆ ಸಿಲುಕಿರುವ ಬದಲಾವಣೆ ಬಯಸುವ ಯುವತಿಯರು, ಅವರ ಬದುಕನ್ನು ನಿಯಂತ್ರಿಸುವ ಸಂಪ್ರದಾಯನಿಷ್ಠ ಹಿರಿಯರನ್ನು, ಮಧ್ಯಮವರ್ಗದ ಜನತೆಯನ್ನು, ಕುಟುಂಬ ಮತ್ತು ಸಾಮಾಜಿಕ ಘರ್ಷಣೆಗಳನ್ನು ತಮ್ಮ ಕಾದಂಬರಿಗಳಲ್ಲಿ ತಂದಿದ್ದಾರೆ. ಬಹುಮಟ್ಟಿಗೆ ತ್ರಿವೇಣಿಯವರ ಕಾದಂಬರಿಗಳಲ್ಲಿ ಸ್ತ್ರೀಸಮಸ್ಯೆಗಳು ಮಾನಸಿಕವಾದ ಸಹಾನುಭೂತಿ ಗಿಟ್ಟಿಸುವಂತಹವು. 'ಕೀಲುಗೊಂಬೆ' ಕಾದಂಬರಿಯ ಅಜ್ಜ, ತಾಯಿ, ಮಗಳು ಇಂತಹ ಪಾತ್ರಗಳು. ಬಡ ಮಧ್ಯಮವರ್ಗದ ತಂದೆ ತಾಯಿಗೆ ಒಬ್ಬಳೇ ಮಗಳಾದ ಸೀತೆ, ಮೃದು ಮನಸ್ಸಿನ ಚುರುಕು ಬುದ್ಧಿಯ ಹುಡುಗಿ. ಬಡತನ ಒಂದುಕಡೆ, ಹೆಚ್ಚು ಓದಿದ ಹುಡುಗಿಗೆ ಗಂಡು ಸಿಗುವುದು ಕಷ್ಟವೆಂಬ ಆತಂಕ ಮುಂದೆ ಓದಬೇಕೆಂಬ ಆಸೆಗೆ ತಣ್ಣೀರೆರಚುವ ಅಜ್ಜಿ ಹೇಳುವ ಮಾತು "ಸಂಸಾರ ಮಾಡೋಕೆ ಓದು ಬೇಕಾಗಿಲ್ಲ ಸೀತು. ಈಗ ನಾವೆಲ್ಲ ಓದಿಯೇ ಸಂಸಾರ ಮಾಡಿದೆವೆ? ಈಗಿನಿಂದಲೆ ಮನೇಲಿ ಕೆಲಸಕಾರ್ಯ ಕಲಿತುಕೋ" ಎಂದು ಸಾವಿತ್ರಿಗೆ ಹಿರಿಯರು ಹೇಳುವ ಮಾತು ಮುತ್ತೈದೆ ಸಾವಿತ್ರಿಯಾಗಿ ಗಂಡ ಹೇಳಿದ ಹಾಗೆ ಕೇಳಿಕೊಂಡಿರು ಎಂಬುದು. ಗಂಡನ ಮಾತಿಗೆ ಎದುರಾಡಬೇಡ, ಗಂಡನ ಸೇವೆಯಿಂದ ದೇವರನ್ನು ಮೆಚ್ಚಿಸಬಹುದೆಂದು ಉಪದೇಶಿಸುತ್ತಾರೆ. ಗಂಡನಿಗೆ ವಿಧೇಯಳಾಗಿ ಅವನ ಕಾಮಕ್ಕೆ ತನ್ನನ್ನು ತೆರೆದುಕೊಳ್ಳುವ ವೇಳೆಗೆ ಸೀತೆಗೆ ಹದಿನಾಲ್ಕು ವರ್ಷ. ಹೀಗೆ ಹದಿನಾಲ್ಕರ ಹರೆಯದ ಸೀತೆ ತನ್ನ ಗಂಡನ ಹಿಂಸೆ, ಕ್ರೌರ್ಯಗಳಿಂದ ನೂರಾರು ಬಾರಿ ನೊಂದಿರುತ್ತಾಳೆ. ಸ್ತ್ರೀಶಿಕ್ಷಣದ ಆವಶ್ಯಕತೆಯನ್ನು ಕುರಿತಂತೆ ಹಲವು ಕಾದಂಬರಿಗಳಲ್ಲಿ ತ್ರಿವೇಣಿಯವರು ಚಿತ್ರಿಸಿದ್ದಾರೆ.

ಸ್ತ್ರೀಯರ ವಿವಾಹಪೂರ್ವ ಮತ್ತು ವಿವಾಹನಂತರದ ಸಮಸ್ಯೆಗಳನ್ನು 'ಮೊದಲಹೆಜ್ಜೆ' 'ಸೋತುಗೆದ್ದವಳು', 'ತಾವರೆಯಕೊಳ' ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ. ಪ್ರಗತಿಶೀಲರು ಪ್ರಮುಖವಾಗಿ ಎತ್ತಿಕೊಂಡು ಚರ್ಚಿಸುವ ಸಮಸ್ಯೆಗಳು ತ್ರಿವೇಣಿಯವರ ಕಾದಂಬರಿಗಳಲ್ಲೂ ಕಂಡುಬರುತ್ತವೆ. ಇವರ ಕಾದಂಬರಿಗಳ ನಾಯಕಿಯರು ಮನಃಶಾಸ್ತ್ರ, ಸಾಮಾಜಿಕ ವಿಷಯಗಳ ಅರಿವಿನ ಹಿನ್ನೆಲೆಯಿಂದ ಉದಾರವಾದ ಸಹಾನುಭೂತಿಯಿಂದ ಬದುಕನ್ನು ನಿರೀಕ್ಷಿಸುವವರು. ಒಟ್ಟಾರೆ ಸ್ತ್ರೀಯರನ್ನು ಬಲಿಪಶುವನ್ನಾಗಿ ಮಾಡುವ ಪುರುಷ ಸಮಾಜದ ವಿರುದ್ಧ ದನಿಯೆತ್ತುವ ಪ್ರಯತ್ನವನ್ನು ತ್ರಿವೇಣಿಯವರು ತಮ್ಮ ಕಾದಂಬರಿಗಳಲ್ಲಿ ಮಾಡಿದ್ದಾರೆ.

ಪ್ರಗತಿಶೀಲ ಸಂದರ್ಭದಲ್ಲಿ ಬರೆಯುತ್ತಿದ್ದ ಮಹಿಳಾ ಲೇಖಕಿಯರಲ್ಲಿ ಅನುಪಮಾ ನಿರಂಜನ ಅವರು ಪ್ರಮುಖರು. ಕಥೆ, ಕಾದಂಬರಿಗಳನ್ನು ಬರೆದಿದ್ದಾರೆ. ಇವರ ಕಾದಂಬರಿಗಳಲ್ಲಿ ವರ್ಗ, ಜಾತಿ, ಲಿಂಗಾಧಾರಿತ ವೈಷಮ್ಯಗಳು ವಸ್ತುವಾಗಿವೆ. 'ಅನಂತಗೀತ' ಅನುಪಮಾ ನಿರಂಜನ ಅವರ ಮೊದಲ ಕಾದಂಬರಿ. ಇದರ ವಸ್ತು ಪ್ರೇಮಕಥೆ. ಅನಂತರದ್ದು 'ಸಂಕೋಲೆಯೊಳಗಿಂದ' ಇಲ್ಲಿ ಗಂಡನ ಪ್ರೀತಿಯಿಂದ ವಂಚಿತಳಾದ ಹೆಣ್ಣೊಬ್ಬಳ ಚಿತ್ರಣವಿದೆ. ಕಾದಂಬರಿಕಾರರೇ ಮುನ್ನುಡಿಯಲ್ಲಿ "ಗಂಡು ಹೆಣ್ಣಿನ ಸ್ವಾತಂತ್ರ್ಯವನ್ನು ಕಸಿದುಕೊಂಡ ಪರಂಪರಾನುಗತ ಸಮಾಜ ವ್ಯವಸ್ಥೆ ಇಂದಿಗೂ ಇದೆ. ಇಂತಹ ಸಮಾಜದ ಗಾಲಿಯ ಕೆಳಗೆ ಸಿಕ್ಕಿ ನರಳುತ್ತಿರುವ ಹೆಣ್ಣು ಜೀವಗಳ ಕತೆಯೇ ಈ ಕೃತಿ. ಕಥನಕ್ರಮ ಹೊಸದು" ಎಂದಿದ್ದಾರೆ. ಮುಖ್ಯವಾಗಿ ಹೆಣ್ಣಿನ ಪರಿಸ್ಥಿತಿ ಬದಲಾಗಬೇಕು ಎನ್ನುವ ವಿಚಾರವನ್ನು ಕಾದಂಬರಿಯಲ್ಲಿ ಮೂಡಿಸಿದ್ದಾರೆ. ಮಹಿಳಾ ವಿಮೋಚನೆಗಾಗಿ ಅನುಪಮ ಅವರ ಮನಸ್ಸು ಮಿಡಿದಿದೆ.

'ಚಿತ್ರಮೋಹನ' ಕಾದಂಬರಿಯಲ್ಲಿ ವಿಧವೆಯೊಬ್ಬಳ ದಾರುಣ ಕತೆ ಇದೆ. ಇಲ್ಲಿನ ಜಾನಕಿಗೆ ಇಬ್ಬರು ಮಕ್ಕಳು. ಜೀವನದ ನಿರ್ವಹಣೆಗಾಗಿ ಕಂಪನಿಯೊಂದರಲ್ಲಿ ಕೆಲಸಕ್ಕೆ ಸೇರುತ್ತಾಳೆ. ವಿಧುರನಾದ ಕಂಪನಿ ಮಾಲಿಕ ಕಾಮತ್‌ನನ್ನು ಪ್ರೀತಿಸಿ ಮದುವೆಯಾಗುತ್ತಳೆ. ಈ ಸಂದರ್ಭದಲ್ಲಿ ದ್ವಂದ್ವಕ್ಕೆ ಸಿಲುಕುವ ಜಾನಕಿ ಅಪಘಾತವೊಂದರಲ್ಲಿ ಕಾಮತ್‌ನನ್ನೂ ಕಳೆದುಕೊಳ್ಳುತ್ತಾಳೆ. ವಿಧವೆಯಾದರೂ ಕೂಡ ಹೊಸಬದುಕನ್ನು ನಡೆಸಲು ಮರುವಿವಾಹವಾದರೂ ಅಂತಹ ಬದುಕಿನ ಅವಕಾಶ ತಪ್ಪಿಹೋಗುತ್ತದೆ. 'ಋಣ' ಕಾದಂಬರಿಯಲ್ಲಿ ತಾಯಿಯೊಬ್ಬಳ ಮನಸ್ಸಿನ ಆಂದೋಲನಗಳ ನೈಜ ಚಿತ್ರಣವಿದೆ, ಕಾಮುಕ ಗಂಡ ಮತ್ತು ಸ್ವಾರ್ಥ ಮಕ್ಕಳಿಂದಾಗಿ ಶೋಷಣೆಗೆ ಒಳಗಾಗುತ್ತಾಳೆ. ಹೆಣ್ಣಿನ ಶೋಷಣೆಯನ್ನೆ ಈ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ.

"ಸ್ತ್ರೀಪರ ಚಿಂತನೆ, ಸ್ತ್ರೀಯರಲ್ಲಿ ಆತ್ಮವಿಶ್ವಾಸ ಮೂಡಿಸುವುದು, ಸ್ತ್ರೀ ಅನ್ಯಾಯದ ವಿರುದ್ಧ ಹೋರಾಡುವುದಕ್ಕೆ ಚಾಲನೆ ಕೊಡುವುದು ಇವೇ ಮೊದಲಾದವನ್ನು 'ಘೋಷ', 'ಮುಕ್ತಿಚಿತ್ರ' ಕಾದಂಬರಿಗಳಲ್ಲೂ ನಿರೂಪಿಸಿದ್ದಾರೆ". ಎಂಬ ಬೆ.ಗೋ.ರಮೇಶ್ ಅವರ ಮಾತುಗಳಲ್ಲಿ ಅನುಪಮಾ ಅವರು ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿರುವ ಸ್ತ್ರೀಸಂವೇದನೆ ಎಂಥದ್ದು ಎಂಬುದರ ಸ್ಪಷ್ಟ ಧ್ವನಿಗಳಾಗಿವೆ.

### ೪.೪ ಆಧುನಿಕ ಸಮಾಜ ಮತ್ತು ತ.ರಾ.ಸು ಅವರ ಕಾದಂಬರಿಗಳು :

ಬದುಕನ್ನು ಅದು ಸಾಗುವ ದಾರಿಯಲ್ಲೇ ಚಿತ್ರಿಸಿದ ನವೋದಯ ಪಂಥವನ್ನು ವಿರೋಧಿಸಿ ಪ್ರಗತಿಶೀಲ ಪಂಥ ಹುಟ್ಟಿತು. ಆದರೂ ಪ್ರಗತಿಶೀಲ ಬರಹಗಳಲ್ಲಿ ಅನುಭವ, ವಿಚಾರವಂತಿಕೆ, ಕಲಾತ್ಮಕತೆ ಕಡಿಮೆಯೆಂದೇ ಹೇಳಬಹುದು. ಅಲ್ಲದೆ ಅಭಿವ್ಯಕ್ತಿಯ ಸಂಬಂಧದಲ್ಲಿ ಪೊಳ್ಳುತನ,

ಶಿಥಿಲತೆ, ಬಿರುಕುಗಳಿವೆಯೆಂಬುದನ್ನು ಒಪ್ಪಿಕೊಳ್ಳುತ್ತಾ ಪ್ರಗತಿಶೀಲ ಸಂದರ್ಭ ಮತ್ತು ಅಂದಿನ ಸಾಂಸ್ಕೃತಿಕ ಹಾಗೂ ಸಾಹಿತ್ಯಕವಾದ ವಾತಾವರಣವನ್ನ ತಿಳಿಯುವುದು ಸೂಕ್ತ.

ಹೊಸಗನ್ನಡ ಸಾಹಿತ್ಯದಲ್ಲಿ ನೊಂದವರ, ಮಹಿಳೆಯರ ಹಾಗೂ ಕೆಳಸ್ತರದ ಜನತೆಯ ಬದುಕನ್ನು ಕುರಿತು ಅಭಿವ್ಯಕ್ತಿಸಿದವರಲ್ಲೆ ಪ್ರಗತಿಶೀಲರೇ ಮೊದಲಿಗರು. ಜಾತಿ, ವರ್ಗ, ಲಿಂಗ ತಾರತಮ್ಯದ ಆಧಾರದ ಮೇಲೆ ರೂಪುಗೊಂಡ ಶ್ರೇಣಿಕೃತ ಸಾಮಾಜಿಕ ವ್ಯವಸ್ಥೆಯನ್ನು ಪ್ರಜ್ಞಾಪೂರ್ವಕವಾಗಿ ಸಮಸ್ಯೀಕರಿಸುವ ಪ್ರಯತ್ನ ಮಾಡಿದರು. ಸ್ತ್ರೀಯರ ಮತ್ತು ಕೆಳಜಾತಿಯವರ ಪರವಾಗಿದ್ದೇವೆನ್ನುವ ಘೋಷಣೆಗಳನ್ನು ತಮ್ಮ ಬರಹದಲ್ಲಿ ಮೂಡಿಸಿದರು. ನಲವತ್ತರ ದಶಕದ ಊಳಿಗಮಾನ್ಯ ಪದ್ಧತಿಯಿಂದ ಬಂಡವಾಳಶಾಹಿ ವ್ಯವಸ್ಥೆ, ವಸಹಾತುಶಾಹಿಯಿಂದ ಸ್ವಾತಂತ್ರ್ಯದ ಕಡೆಗೆ ಹೊರಳಿದ ಪುರುಷಪ್ರಧಾನ ವ್ಯವಸ್ಥೆಯಿಂದ ಈ ಚಳವಳಿ ರೂಪು ತಾಳತ್ತದೆ. ಜಾಗತಿಕ ಮಟ್ಟದ ಸಾಮ್ರಾಜ್ಯಶಾಹಿ ಫ್ಯಾಸಿಸಂ, ನಾಸಿಸಂ ವಿರುದ್ಧ ರಷ್ಯಾ ನಡೆಸಿದ್ದ ಸಮಾಜವಾದಿ ಹೋರಾಟಗಳು, ದೇಶಿಯವಾಗಿ ಗಾಂಧಿ, ರೈತಾಪಿ ಮತ್ತು ಕಾರ್ಮಿಕ ಹೋರಾಟಗಳು ಪ್ರಗತಿಶೀಲ ಸಾಹಿತ್ಯಕ್ಕೆ ಮೂಲಪ್ರೇರಣೆ ನೀಡಿದವೆಂದು ಹೇಳಬಹುದು.

ಹೀಗೆ ವಿವಿಧ ರೀತಿಯ ಹೋರಾಟಗಳಿಂದ ಪ್ರೇರಣೆಗೊಂಡು ಹುಟ್ಟಿದ ಚಳವಳಿಯಲ್ಲಿ ನಾನಾ ರೀತಿಯ ಸ್ವಭಾವದವರು ಸೇರಿದ್ದರು. "ಕಮ್ಯೂನಿಷ್ಟ್ ಸಿದ್ಧಾಂತ ಅಥವಾ ಹೋರಾಟ ಮಾರ್ಗಗಳನ್ನು ನಂಬಿದ್ದವರು, ರಷ್ಯಾದ ಸಾಧನೆಗಳ ಬಗ್ಗೆ ಮೆಚ್ಚುಗೆ ಅಭಿಮಾನಗಳಷ್ಟೇ ಇದ್ದವರು, ಭಾರತೀಯ ಸಂಸ್ಕೃತಿಯ ಪುನರುಜ್ಜೀವನ ತತ್ವವನ್ನು ನಂಬಿದವರೂ ಪ್ರಗತಿಶೀಲರ ಒಕ್ಕೂಟದಲ್ಲಿದ್ದರು". ಎಂದು ಬಿ.ಎನ್.ಸುಮಿತ್ರಾಬಾಯಿ ಅವರು ಹೇಳುವ ಮಾತು ಪ್ರಗತಿಶೀಲ ಬರಹಗಾರರಿಗಾದ ಪ್ರೇರಣೆ ಯಾವ ರೀತಿಯದು ಎಂಬುದನ್ನು ತಿಳಿಯಲು ಸಹಕಾರಿಯಾಗುತ್ತದೆ.

ನವೋದಯವನ್ನು ವಿರೋಧಿಸುತ್ತಲೇ ಜನಿಸಿದ ಪ್ರಗತಿಶೀಲ ಪಂಥಕ್ಕೆ ನವೋದಯ ಬರಹಗಾರರಿಗಿದ್ದಂತಹ ಸಾಂಸ್ಕೃತಿಕವಾದ ಮತ್ತು ಸಾಹಿತ್ಯಕವಾದ ವಾತಾವರಣವಿರಲಿಲ್ಲ. ನವೋದಯದವರಿಗೆ ಸಮಗ್ರ ಭಾರತೀಯ ಮತ್ತು ಪಾಶ್ಚಾತ್ಯ ತತ್ವಶಾಸ್ತ್ರದ ಪ್ರಭಾವವಾಗಿತ್ತು. ಜೊತೆಗೆ ಬ್ರಿಟಿಷರ ಆಡಳಿತದಿಂದಾದ ಬದಲಾವಣೆ, ಇಂಗ್ಲಿಷ್ ವಿದ್ಯಾಭ್ಯಾಸ ಮತ್ತು ಸುಧಾರಣಾವಾದದ ಎಲ್ಲ ಅಂಶಗಳು ನವೋದಯದವರಿಗಿದ್ದವು. ಇವಿಷ್ಟೇ ಅಲ್ಲದೆ ಸ್ವತಂತ್ರ ಚಳವಳಿಯ ತೀವ್ರತೆಯೂ ಕೂಡ ಇವರಿಗೆ ಪೂರಕವಾಯಿತು. ಪುನರುಜ್ಜೀವನದ ಮೌಲ್ಯಗಳು ಮತ್ತು ಸುಧಾರಣಾವಾದಿಗಳ ಪ್ರಭಾವವನ್ನು ನವೋದಯದ ಬರಹಗಾರರಲ್ಲಿ ಕಾಣುತ್ತೇವೆ. ಉದಾ: ಕುವೆಂಪು ಮತ್ತು ಕಾರಂತರ ಕಾದಂಬರಿಗಳಲ್ಲಿ ಬೇಂದ್ರೆಯವರ ಕವನಗಳಲ್ಲಿ, ಮಾಸ್ತಿಯವರ ಕತೆಗಳಲ್ಲಿ. ಆದರೆ ಪ್ರಗತಿಶೀಲ ಬರಹಗಾರರಿಗೆ ನವೋದಯದವರಿಗಿದ್ದಂತಹ ವಾತಾವರಣವಾಗಲಿ, ಪ್ರೇರಣೆಯಾಗಲಿ ಕಡಿಮೆಯೆಂದೇ ಹೇಳಬಹುದು. ಭೌಗೋಳಿಕವಾದ ದ್ರವ್ಯಗಳು

ನವೋದಯದವರಿಗಿದ್ದವು. ಪ್ರಗತಿಶೀಲರಿಗೆ ಇವ್ಯಾವೂ ಇರಲಿಲ್ಲ. ಅಲ್ಲದೆ ಪ್ರಗತಿಶೀಲರಿಗೆ ಅನುಭವದ ಸತ್ವ, ವೈಚಾರಿಕ ಪ್ರಜ್ಞೆ, ಸೈದ್ಧಾಂತಿಕ ನಿಲುವು ಮತ್ತು ನಂಬಿಕೆ, ಶ್ರದ್ಧೆಗಳಲ್ಲೇ ಭಿನ್ನತೆಗಳಿದ್ದವು. ಪ್ರಗತಿಶೀಲ ಸಾಹಿತ್ಯ ಏಕರೂಪದ ತಾತ್ತ್ವಿಕತೆಯಿಲ್ಲದ ಅವರವರದೇ ಕವಲು ದಾರಿಗಳಲ್ಲಿ ಸಾಗಿ ಚಲನಶೀಲತೆಗೆ ಬದಲಾಗಿ ಸ್ಥಗಿತತೆಯನ್ನು ಪಡೆಯಿತು.

ಪ್ರಗತಿಶೀಲರಿಗೆ ಕಮ್ಯೂನಿಷ್ಟ್, ಮಾರ್ಕ್ಸಿಸ್ಟ್ ಪ್ರಭಾವ ತುಂಬಾ ಕಡಿಮೆಯೇ. ನಿರಂಜನ ಅವರನ್ನು ಹೊರತು ಪಡಿಸಿದರೆ ಮ್ಯಾಕ್ಸಿಂಗೋರ್ಕಿಯ 'ತಾಯಿ' ಯಂತಹ ಕಾದಂಬರಿ ಕನ್ನಡದಲ್ಲಿ ಬರಲು ಸಾಧ್ಯವಾಗಲಿಲ್ಲ. ಉದಾ: ಕಟ್ಟೀಮನಿಯವರ 'ಮಾಡಿಮಡಿದವರು' ಕಾದಂಬರಿ ಸ್ವತಂತ್ರ ಚಳವಳಿಗಷ್ಟೇ ಸೀಮಿತವಾಗುತ್ತದೆ. ಸ್ವತಂತ್ರ ಹೋರಾಟದ ಕೆಲವು ಘಟನೆಗಳನ್ನು ನೆನಪಿಸುತ್ತದೆ. ಮಹಿಳಾ ಆಂದೋಲನದ ಯಾವುದೇ ತೆರನಾದ ಸಂವೇದನೆಯನ್ನು ಕಟ್ಟಿಕೊಡುವುದಿಲ್ಲ. ಕಟ್ಟೀಮನಿಯವರ ಕತೆಗಳೂ ಈ ತರಹದ ಅಂಶಗಳನ್ನು ಒಳಗೊಂಡಿವೆ. ಉದಾ, 'ಅಜ್ಞಾತವಾಸಿ' ಕತೆಯಲ್ಲಿ ಮಹಿಳೆಯ ಮೇಲಿನ ದೌರ್ಜನ್ಯವನ್ನಷ್ಟೇ ಕಾಣುತ್ತೇವೆ. ಪೋಲೀಸರ ಹಿಂಸೆ, ಕ್ರೌರ್ಯ ಪ್ರಧಾನವಾಗಿ ಕಂಡುಬರುತ್ತದೆ.

ಬಂಡವಾಳಶಾಹಿ ವ್ಯವಸ್ಥೆಯ ಪ್ರಭಾವ ತ.ರಾ.ಸು. ಅವರ ಕಾದಂಬರಿಗಳಲ್ಲಿ ಕಂಡುಬಂದರೂ, ಸಂಪೂರ್ಣವಾಗಿ ಮಹಿಳಾ ಆಂದೋಲನದ ಪರಿಣಾಮ ಅಷ್ಟೊಂದು ತೀವ್ರವಾಗಿ ಕಂಡುಬರುವುದಿಲ್ಲ. ಕಾರಣ ನವೋದಯದವರಿಗಿದ್ದಂತಹ ಸಾಹಿತ್ಯ ಮತ್ತು ಸಾಂಸ್ಕೃತಿಕವಾದ ಹಿನ್ನೆಲೆ ಇವರಿಗಿರಲಿಲ್ಲ. ತ.ರಾ.ಸು. ಅವರು ಸಾಮಾಜಿಕ ಅಸಮಾನತೆ, ರೊಚ್ಚು, ಕೆಚ್ಚುಗಳು, ಸ್ತ್ರೀಯರ ಮೇಲಿನ ದೌರ್ಗನ್ಯಗಳನ್ನು ತಮ್ಮ ಬರಹದಲ್ಲಿ ತಂದಿದ್ದಾರೆ. ಮಧ್ಯಮವರ್ಗದ ಸ್ತ್ರೀಯರನ್ನು ಕುರಿತು ತ.ರಾ.ಸು. ಅವರು ಬರೆಯಬೇಕಾಗಿತ್ತು. ಅಲ್ಲದೆ ಇವರ ಸಾಹಿತ್ಯ ಸವಿಯುತ್ತಿದ್ದವರು ಕೂಡ ಮಧ್ಯಮವರ್ಗದವರೇ. ಆದಾಗಿಯು ನವೋದಯದವರ ಹಾಗೆ ಓದುಗ ವರ್ಗವನ್ನು ಆಕರ್ಷಿಸಲಿಲ್ಲ. ಓದುಗ ವರ್ಗವನ್ನು ಹೆಚ್ಚಾಗಿ ಸೃಷ್ಟಿಸಿಕೊಂಡುವರು ಎಂದರೆ ಅ.ನ.ಕೃ. ಆದರೆ ಆ ಓದುಗ ವರ್ಗ ಉತ್ತೇಜಿತ ನೆಲೆಯದು. ಹಾಗಾಗಿಯೇ ಏನೋ ಹೆಚ್ಚಾಗಿ ಉದ್ದೀಪಿಸಿದ ತ.ರಾ.ಸು. ಅವರಿಗೆ ದೊಡ್ಡ ಮಧ್ಯಮ ವರ್ಗದ ಓದುಗರು ಸಿಕ್ಕಲಿಲ್ಲ. ಅಲ್ಲದೇ ಇವರದು ಭಾವುಕ ಬರವಣಿಗೆ. ಪ್ರಗತಿಶೀಲ ಸಂದರ್ಭದಲ್ಲಿ ತೀವ್ರವಾದ ಯಾವ ಚಳವಳಿಯೂ ಕೂಡ ಇರಲಿಲ್ಲ. ಎಪ್ಪತ್ತರ ದಶಕದಲ್ಲಿ ಇದ್ದಂತಹ ದಲಿತ ಚಳವಳಿಯಾಗಲಿ, ಎಂಬತ್ತರ ದಶಕದ ಮಹಿಳಾ ಚಳವಳಿಯಾಗಲಿ ಪ್ರಗತಿಶೀಲ ಸಂದರ್ಭದಲ್ಲಿ ಕಾಣಿಸಿಕೊಳ್ಳಲಿಲ್ಲ. ಹಾಗಾಗಿ ತ.ರಾ.ಸು. ಅವರು ಮಹಿಳಾ ಆಂದೋಲನದ ಪ್ರಭಾವಕ್ಕೆ ಒಳಗಾಗಲಿಲ್ಲ ಎನ್ನುವುದಕ್ಕಿಂತ ಅಪ್ರಜ್ಞಾಪೂರ್ವಕವಾಗಿ ತ.ರಾ.ಸು. ಅವರ ಕಾದಂಬರಿಗಳಲ್ಲಿ ಮಹಿಳಾ ಆಂದೋಲನದ ವಿವಿಧ ರೀತಿಯ ನೆಲೆಗಳನ್ನು ಗುರುತಿಸುವ ಪ್ರಯತ್ನ ಮಾಡಿದ್ದೇನೆ.

ಈ ರೀತಿ ತ.ರಾ.ಸು. ಅವರ ಬರಹದಲ್ಲಿ ದುರ್ಬಲತೆ ಮತ್ತು ಸಬಲತೆಗಳೆರಡನ್ನು ಕಾಣುತ್ತೇವೆ. 'ಮಸಣದ ಹೂವು' ಕಾದಂಬರಿಯಲ್ಲಿ ವೇಶ್ಯಾಸಮಸ್ಯೆ, ಅದಕ್ಕೆ ಕಾರಣ ಮತ್ತು ಅದರ ಪರಿಣಾಮವನ್ನು ಚಿತ್ರಿಸಿದ್ದಾರೆ. ವೇಶ್ಯಾಸಮಸ್ಯೆ ಕುರಿತಂತೆ ಸಮಕಾಲೀನರಾದ ಅ.ನ.ಕೃ. ಕಟ್ಟೀಮನಿಯವರಿಗಿಂತ ಭಿನ್ನವಾದ ರೀತಿಯಲ್ಲಿ ತ.ರಾಸು. ಬರೆದಿದಾರೆ. ವೇಶ್ಯೆಯರ ರಂಜನೀಯವಾದ ಬದುಕನ್ನು ಅ.ನ.ಕೃ. ಕಟ್ಟೀಮನಿ ಚಿತ್ರಿಸಿದರೆ ತ.ರಾ.ಸು.ಹೆಣ್ಣು ವೇಶ್ಯೆಯಾಗುವುದಕ್ಕೆ ಬಡತನವೊಂದೇ ಕಾರಣವಲ್ಲ. ಮೈಯನ್ನು ಮಾರಾಟಮಾಡಿಕೊಂಡು ಹಣಗಳಿಸುವುದೇ ಮುಖ್ಯವಲ್ಲ. ಈ ಸಮಸ್ಯೆಗೆ ಪುರುಷ ಸಮಾಜವೂ ಕಾರಣವೆಂದು ಹೇಳುತ್ತಾರೆ. ನಿರುದ್ಯೋಗಿ ಯುವಕರಿಗೆ ಬದುಕಲು ದಾರಿಯಾಗುತ್ತದೆ. ಸಿರ್‌ಪಕಡು ಸಿಂಗಾರುವಿನಂತಹವರು. ಅಲ್ಲದೆ ಅತೃಪ್ತಕಾಮ, ಮೋಸ, ವಂಚನೆಗೊಳಗಾಗುವ ಸ್ತ್ರೀಯು ಕೂಡ ಈ ವೃತ್ತಿಗಿಳಿಯುತ್ತಾಳೆ. ಕಾಲೇಜು ಹುಡುಗಿಯರು, ಶಿಕ್ಷಕಿಯರೂ ಈ ಮಾಯಜಾಲಕ್ಕೆ ಸಿಲುಕುತ್ತಾರೆ. ಅಂದರೆ ಕಾದಂಬರಿಕಾರರೆ ಹೇಳುವಂತೆ ರಾಜಮಹಾರಾಜರ ಕಾಲದಿಂದಲೂ ಪ್ರತಿಷ್ಠೆಗಾಗಿಯೋ ಅಥವಾ ಇನ್ನಾವುದೋ ಕಾರಣಕ್ಕಾಗಿಯೋ ಪೋಷಿಸುತ್ತಾ ಬಂದಿರುವ ಪುರುಷನೇ ಇದಕ್ಕೆ ಕಾರಣವೆನ್ನುತ್ತಾರೆ. ಪುರುಷ ಪ್ರಧಾನ ಕುಟುಂಬದಲ್ಲಿ ಪುರುಷನೇ ಮೇಲುಗೈ ಸಾಧಿಸಿ ಸ್ತ್ರೀ ಅವನ ಅಡಿಯಾಳಾಗಿರುವುದನ್ನು ಇಂದಿಗೂ ಕಾಣುತ್ತೇವೆ.

ಹೆಣ್ಣು ವೇಶ್ಯೆಯಾಗುವುದಕ್ಕೆ ಪುರುಷನದೂ ಪಾಲಿದೆ ಎನ್ನುವುದಕ್ಕೆ 'ಮಸಣದಹೂವು' ಕಾದಂಬರಿಯಲ್ಲಿನ ಸರಸ್ವತಿಯ ಪಾತ್ರವೇ ನಿದರ್ಶನ. ಹೆಂಚಿನ ಕಾರ್ಖಾನೆಯಲ್ಲಿ ಕೆಲಸ ಕಳೆದುಕೊಂಡ ಸರಸ್ವತಿಯ ಗಂಡ ಜೀವನ ನಿರ್ವಹಣೆಗೆ ತನ್ನ ಹೆಂಡತಿ ಸರಸ್ವತಿಯನ್ನೇ ತನ್ನ ಕಾರ್ಖಾನೆ ಮಾಲಿಕನಿಗೆ ಹೆಂಡತಿಯಾಗುವಂತೆ ಒತ್ತಾಯಿಸುತ್ತಾನೆ. ಕೊನೆಗೊಂದು ದಿನ ಹೆಂಡತಿಯನ್ನು ಬಿಟ್ಟು ಕಾಣೆಯಾಗುತ್ತಾನೆ. ಅನಂತರ ಪುರುಷ ಸಮಾಜ ಅವಳನ್ನು ಕಾಮುಕ ದೃಷ್ಟಿಯಿಂದ ನೋಡಿದಾಗ ಅನಿವಾರ್ಯವಾಗಿ ಸರಸ್ವತಿ ವೇಶ್ಯೆಯಾಗುತ್ತಾಳೆ. ಧಣಿಗಳ ಹೆಂಡತಿಯಾಗಲು ಸರಸ್ವತಿ ಒಪ್ಪದಿದ್ದಾಗ ರೇಗಿದ ಗಂಡ ಹೇಳುವ ಮಾತು– ನೀನೇನು ಸೀತೆಯಾ, ಸಾವಿತ್ರಿನಾ. ಉಪವಾಸ ಸಾಯೋದಕ್ಕಿಂತ ಅದೇನು ತಪ್ಪು? '(ಪುಟ–೮೫). ಈ ರೀತಿ ನಿರುದ್ಯೋಗಿಯಾದ ಗಂಡನ ಬಾಯಿಂದ ಬರುವ ಮಾತುಗಳು. ಮುಂದುವರೆದು ಬಡತನದ (ಹಣವಿಲ್ಲದ) ಬಾಳನ್ನು ಕುರಿತಂತೆ ಸರಸ್ವತಿ ಹೇಳುವ ಮಾತುಗಳೆಂದರೆ "ಹಣವಿಲ್ಲದವರಾರೂ ಈ ಜಗತ್ತಿನಲ್ಲಿ ಬಾಳಲಾರರು ಚೆನ್ನಮ್ಮ, ಮನುಷ್ಯ ಅನ್ನದಿಂದ ಬದುಕುತ್ತಾನೆ ಎನ್ನುತ್ತಾರೆ. ಸುಳ್ಳು! ಈ ಜಗತ್ತಿನಲ್ಲಿ ಮನುಷ್ಯ ಬದುಕುವುದಿರಲಿ, ಮನುಷ್ಯ ಮನುಷ್ಯನಾಗುವುದು ಹಣದಿಂದ. ನನಗದು ಇರದಿದ್ದರಿಂದ ನನ್ನ ಬಾಳು ಹೀಗಾಯಿತು. –––– ನನ್ನ ಮಗ ಬದುಕಿ ಬಾಳಬೇಕು ಅದಕ್ಕೆ ನನ್ನ ಬಾಳು,ದುಡಿತ ಎರಡೂ ಮೀಸಲು". (ಮಸಣದಹೂವು. ಪುಟ.೮೭). ಈ ರೀತಿ ಬಡತನ ಕುರಿತು ಸರಸ್ವತಿ ಹೇಳುವ ಮಾತು.

ಹಾಗೆಯೇ ಈ ಜಗತ್ತಿನಲ್ಲಿ ಹೆಣ್ಣಿರುವವರಿಗೆ ಮಾತ್ರ ಗೌರವ ಸಿಗುತ್ತದೆನ್ನುತ್ತಾಳೆ. 'ಈ ಜಗತ್ತಿನಲ್ಲಿ ಕ್ರೋಧವಿಲ್ಲಾ,ಕರುಣೆಯಿಲ್ಲ,ಕಂಬನಿಯಿಲ್ಲ. ಅದೆಲ್ಲ ದುಡ್ಡಿರುವವರ ವಿಲಾಸವತ್ತು' ಎಂದು ಸರಸ್ವತಿ ಹೆಳುತ್ತಾಳೆ. 'ಬಿಡುಗಡೆಯಬೇಡಿ' ಕಾದಂಬರಿಯಲ್ಲಿ ಸಾಂಪ್ರದಾಯಿಕ ಸಮಾಜದಿಂದ ಬಿಡುಗಡೆ ಹೊಂದುವ ಹೆಣ್ಣಿನ ಮಾನಸಿಕ ತುಡಿತಗಳು ಮತ್ತು ಆಕೆಯ ಹೋರಾಟದ ವಿರುದ್ಧ ಪ್ರಜ್ಞಾಪ್ರವಾಹ ತಂತ್ರವನ್ನು ಬಳಸಿ ಪುರುಷನು ತನ್ನ ಹಿಡಿತವನ್ನು ಸಾಧಿಸುವ ಚಿತ್ರಣ ಕಂಡುಬರುತ್ತದೆ. ಸ್ತ್ರೀಸ್ವಾತಂತ್ರ್ಯ ಪಡೆಯುವುದಕ್ಕಾಗಿ ಹೋರಾಡುವ ಪ್ರಭಾವತಿ ಇಲ್ಲಿ ಮುಖ್ಯಳಾಗುತ್ತಾಳೆ. ಪುರುಷ ಸಮಾಜದ ವಿರುದ್ಧ ಸೆಟೆದು ನಿಲ್ಲುತ್ತಾಳೆ. ಸಾಂಪ್ರದಾಯಿಕ ಬದುಕಿನ ಮಟ್ಟಗಳನ್ನೆಲ್ಲಾ ಧಿಕ್ಕರಿಸುತ್ತಾಳೆ. ಪುರುಷನ ಬಂಧನದಿಂದ ಬಿಡುಗಡೆ ಬಯಸುತ್ತಾಳೆ. ಆದರೆ ಆ ಬಿಡುಗಡೆಯೇ ಪ್ರಭಾಳಿಗೆ ಬಂಧನವಾಗುತ್ತದೆ. ಇಂತಹದೇ ಮತ್ತೊಂದು ಕಾದಂಬರಿ 'ಹಂಸಗೀತೆ' ಕಾದಂಬರಿಯಲ್ಲಿ ಬರುವ ಚಂದ್ರಲೇಖೆ ವೇಶ್ಯೆಯಾದರೂ ಕಲಾವಿದ ಸಂಗೀತಗಾರ ವೆಂಟಸುಬ್ಬಯ್ಯನಿಗೆ ಮನಸೋಲುತ್ತಾಳೆ. ಅವನ ಸಂಗೀತ ಕಲೆಗೆ ಮಾರುಹೋಗುತ್ತಾಳೆ. ವೆಂಕಟಸುಬ್ಬಯ್ಯನಿಗೆ ತನ್ನನ್ನು ಸಂಪೂರ್ಣ ಅರ್ಪಿಸಿಕೊಂಡ ತ್ಯಾಗಜೀವಿ. ವೆಂಕಟಸುಬ್ಬಯ್ಯನ ಭೈರವಿರಾಗ ಉಳಿಯಬೇಕಾದರೆ ವೆಂಕಟಸುಬ್ಬಯ್ಯ ಮದುವೆಯಾಗಲೆಂದು ಬಯಸಿ ತಾನು ಸಾವನ್ನಪ್ಪುತ್ತಾಳೆ. ವೇಶ್ಯೆಯಾದ ಚಂದ್ರಲೇಖೆಗೆ ಹಣಕ್ಕಿಂತ ಪ್ರೀತಿ ಮುಖ್ಯವಾಗುತ್ತದೆ. ಸಿರಿತನಕ್ಕಿಂತ ನೆಮ್ಮದಿಯ ಬಡತನದ ಬದುಕೇ ಲೇಸೆಂದು ಬಯಸುವ ಅಕ್ಕಮ್ಮನಂತಹವರನ್ನು 'ಅಕ್ಕಮ್ಮನಭಾಗ್ಯ' ಕಾದಂಬರಿಯಲ್ಲಿ ಕಾಣುತ್ತೇವೆ. ಹೆಣ್ಣು ವಿಧಿವಂಚಿತಳಾಗಿ ನೋವು ದ್ರೋಹಗಳ ಮಧ್ಯದಲ್ಲೂ ಬದುಕಬಲ್ಲಳೆಂಬುದಕ್ಕೆ ಈ ಕಾದಂಬರಿಯೇ ಸಾಕ್ಷಿ. ಇಂತಹ ಹೆಣ್ಣಿನ ಬಗ್ಗೆ ಓದುಗರಿಗೆ ಸಹನೆ ಮೂಡದಿರದು. ಹೆಣ್ಣಿನ ಬಗ್ಗೆ ತ.ರಾ.ಸು. ಅವರಿಗಿರುವ ಇಂಥ ಸಾಮಾಜಿಕ ಕಳಕಳಿ ಮೆಚ್ಚಬೇಕಾದ್ದೆ.

ನಿರ್ದೋಷಿಯೊಬ್ಬಳು ಗಾಳಿಮಾತಿಗಾಗಿ ತನ್ನ ಜೀವವನ್ನೆ ದಂಡತೆರುವ ದುರಂತಚಿತ್ರ 'ಗಾಳಿಮಾತು' ಕಾದಂಬರಿಯಲ್ಲಿ ಕಂಡುಬರುತ್ತದೆ. ಶಾಂತ ಸ್ವಭಾವದ ಗಂಭೀರ ವ್ಯಕ್ತಿತ್ವದವಳು ಸುನಂದೆ. ಇವಳ ಬದುಕಲ್ಲಿ ಬಿರುಗಾಳಿ ತಂದು, ಅವ್ಯಕ್ತ ಪತ್ರವೊಂದು ನೆಮ್ಮದಿ ಹಾಳುಮಾಡುತ್ತದೆ. ಸುನಂದೆಳ ವ್ಯಕ್ತಿತ್ವ ಮತ್ತು ಸೌಂದರ್ಯಕ್ಕೆ ಮಾರುಹೋದ ವ್ಯಕ್ತಿಯೊಬ್ಬ ಪತ್ರ ಬರೆಯುತ್ತಾನೆ. ಕಾಗದದ ವಿಷಯವೇನೆಂದು ತಿಳಿಸದ ಕಾರಣಕ್ಕಾಗಿ ಸುನಂದ ಜಂಬದ ಕೋಳಿ ಕನಕಳ ವಿರಸ ಕಟ್ಟಿಕೊಳ್ಳುತ್ತಾಳೆ. ಕನಕ ಸುನಂದಗೆ ಬರುವ ಪತ್ರದ ಬಗ್ಗೆ ಇಲ್ಲ ಸಲ್ಲದ ಗಾಳಿಸುದ್ದಿ ಹಬ್ಬಿಸಿ ಅವಳನ್ನು ಮದುವೆ ಮಾಡಿಕೊಳ್ಳುವುದಕ್ಕೆ ಬಂದವರ ಮುಂದೆಯೂ ಕಾಗದದ ವಿಷಯ ಪ್ರಸ್ತಾಪಿಸಿತ್ತಾ ಅವಳ ಶೀಲದ ಬಗ್ಗೆ ಸಂಶಯ ಬರುವಂತೆ ಮಾಡುತ್ತಾಳೆ. ಇದನ್ನು ಪ್ರತಿಭಟಿಸಲಾಗದ ಸುನಂದೆ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಗಾಳಿಸುದ್ದಿ ವಿರುದ್ಧ, ಪುರುಷನ ಅವ್ಯಕ್ತ ಪತ್ರದ ವಿರುದ್ಧ ಹೋರಾಟಮಾಡದೆ ಆತ್ಮಹತ್ಯೆಗೆ ಶರಣಾಗುತ್ತಾಳೆ.

ತ.ರಾ.ಸು. ಅವರ ಕಾದಂಬರಿಗಳ ಸ್ತ್ರೀಯರೆಲ್ಲರೂ ಒಂದಲ್ಲ ಒಂದು ರೀತಿಯ ಹೋರಾಟದಲ್ಲಿ ಅಂತ್ಯವನ್ನು ಕಾಣುವವರು. 'ಮಸಣದಹೂವು' ಕಾದಂಬರಿಯ ವೇಶ್ಯೆಯರಿಗೆ ಅನೇಕ ಸಮಸ್ಯೆಗಳಿರಬಹುದು. ಆದರೆ ಆ ಸಮಸ್ಯೆಗಳಾಚೆಗೂ ಹೆಣ್ಣಿನಲ್ಲಿರಬಹುದಾದ ಸಹಜ ಪ್ರೀತಿಯನ್ನು ಪಾರ್ವತಿಯಲ್ಲಿ ಕಾಣುತ್ತೇವೆ. ಇಲ್ಲಿ ಸಾಮಾಜಿಕ ಸಮಸ್ಯೆಯ ರೊಚ್ಚು, ಮತ್ತು ಭಾವುಕತೆ ಕಂಡುಬರುತ್ತದೆ. 'ಬಿಡುಗಡೆಯ ಬೇಡಿ' ಕಾದಂಬರಿಯಲ್ಲಿನ ಪ್ರಭಾವತಿ ಆಧುನಿಕ ಪ್ರಪಂಚದ ಥಳುಕು ಬಳುಕಿಗೆ ಮಾರುಹೋದವಳು. ಸ್ತ್ರೀಸ್ವಾತಂತ್ರ್ಯಕ್ಕಾಗಿ ಹೋರಾಟಮಾಡುವವಳು ಪ್ರಭಾವತಿ. ಇಲ್ಲಿ ಸಾಮಾಜಿಕ ಸಮಸ್ಯೆಯೊಳಗೇ ಸ್ತ್ರೀಸಂಬಂಧಿತ ನೆಲೆಗಳಿಗಾಗಿ ಆದ್ಯತೆ ನೀಡುವಂತಹ ಕಾದಂಬರಿಯಿದು. ಪ್ರಭಾವತಿ ಪಾತ್ರದ ಮೂಲಕ ವೈಚಾರಿಕತೆಯನ್ನು ಗುರುತಿಸಲು ಸಾಧ್ಯವಿದೆ. ಸ್ತ್ರೀಸ್ವಾತಂತ್ರ್ಯದ ವಿಷಯವನ್ನು ಸಾಹಿತ್ಯದ ಚೌಕಟ್ಟಿನೊಳಗೆ ಕಾದಂಬರಿಕಾರರು ಚರ್ಚೆಗೆ ತರುತ್ತಾರೆ. ತಾನು ನಂಬಿದ ಸಿದ್ಧಾಂತಕ್ಕಾಗಿ ಪ್ರಭಾವತಿ ಸಂಪ್ರದಾಯ ಸಮಾಜದ ಎಲ್ಲ ಇತಿಮಿತಿಗಳನ್ನು ಮೀರುತ್ತಾಳೆ.

ಪ್ರಗತಿಶೀಲ ಲೇಖಕರಿಗಿದ್ದ ಬಹುದೊಡ್ಡ ಗೊಂದಲವೆಂದರೆ ಹಳೆಯ ಮೌಲ್ಯಗಳನ್ನು ಸ್ವೀಕರಿಸುತ್ತಲೆ ಹೊಸ ಸಮಾಜದ ಚೌಕಟ್ಟೊಂದನ್ನು ಓದುಗರಿಗೆ ಸಿದ್ಧಪಡಿಸಬೇಕಾಗಿತ್ತು. ಆದರೆ ನವೋದಯದವರಿಗೆ ಈ ತರಹದ ಬಿಕ್ಕಟ್ಟಿರಲಿಲ್ಲ. ಉದಾ: ಕಾರಂತರ ಕಾದಂಬರಿಗಳ ಸ್ತ್ರೀಯರೆಲ್ಲರು ಸಂಪ್ರದಾಯ ಕುಟುಂಬದವರೇ. ಹಳೆಯ ನಂಬಿಕೆ ಮತ್ತು ಧರ್ಮದ ಚೌಕಟ್ಟನ್ನು ಮೀರುವವರಲ್ಲ. ಆದರೆ ಪ್ರಗತಿಶೀಲರಿಗೆ ಈ ತರಹದ ವಾತಾವರಣವಿರಲಿಲ್ಲ. ಪ್ರಗತಿಶೀಲರ ಬರಹದಲ್ಲಿ ಮಧ್ಯಮವರ್ಗದ ಮೊದಲ ಸ್ವರೂಪವನ್ನು ಕಾಣುತ್ತೇವೆ. ಅಂದು ಓದುವ ವರ್ಗ ಕೂಡ ಮಧ್ಯಮವರ್ಗವೇ ಆಗಿತ್ತು. ಈ ತರಹದ ಒಂದು ವರ್ಗಸಂಘರ್ಷವನ್ನು ಪ್ರಗತಿಶೀಲರ ಕಾದಂಬರಿಗಳಲ್ಲಿ ಕಾಣಬಹುದು. ಉದಾ: ಮಧ್ಯಮ ವರ್ಗದಿಂದ ಬಂದ ಕೈಲಾಸಂ ಅವರ ನಾಟಕಗಳ ಸ್ತ್ರೀಯರೆಲ್ಲರೂ ನಗರ ಪ್ರದೇಶದ ಮಧ್ಯಮ ವರ್ಗದ ಸ್ತ್ರೀಯರೇ. ಸಾಂಪ್ರದಾಯಿಕ ಬದುಕಿನ ನಾಗತ್ತೆಯಾಗಿರಬಹುದು, ಆಧುನಿಕ ಪ್ರಪಂಚದ ಸಾತು ಮತ್ತು ಪಾತು ಆಗಿರಬಹುದು. ಸಂಪ್ರದಾಯವನ್ನು ಕೈಬಿಡಲಾರದ, ಆಧುನಿಕತೆಗೆ ಒಗ್ಗಿಕೊಳ್ಳಲಾರದ ಇಬ್ಬಂದಿತನದಲ್ಲಿ ಸಿಲುಕಿರುವ, ಬಿಕ್ಕಟ್ಟನ್ನು ಎದುರಿಸುವ ಸ್ತ್ರೀಯರು ಕೈಲಾಸಂ ಅವರ ನಾಟಕಗಳಲ್ಲಿ ಕಂಡುಬರುತ್ತಾರೆ. ಅದೇ ರೀತಿಯಲ್ಲಿ ಪ್ರಗತಿಶೀಲ ಬರಹಗಾರರು ಈ ತರಹದ ಒಂದು ಬಿಕ್ಕಟ್ಟಿಗೆ ಸಿಲುಕಿದ್ದರೆಂದರೂ ತಪ್ಪಾಗಲಾರದು. ಪ್ರಗತಿಶೀಲ ಚಳವಳಿ ಸಂದರ್ಭದಲ್ಲಿ ಸಾಮಾಜಿಕವಾದ ಚಳವಳಿಗಳ ತೀವ್ರತೆ ಅಷ್ಟಾಗಿ ಇರಲಿಲ್ಲ. ಎಪ್ಪತ್ತರ ದಶಕದಲ್ಲಿ ದಲಿತ ಚಳವಳಿ ಎಂಬತ್ತರ ದಶಕದಲ್ಲಿ ಮಹಿಳಾ ಚಳವಳಿ ತೀವ್ರವಾಗಿದ್ದಂತೆ, ಪ್ರಗತಿಶೀಲರಿಗೆ ಆ ತರಹದ ಚಳವಳಿಗಳ ಪ್ರಭಾವವಾಗಿರುವುದು ತುಂಬಾ ಕಡಿಮೆಯೇ. ಕಮ್ಯೂನಿಷ್ಟ್ ಸಿದ್ಧಾಂತದಿಂದ ಪ್ರೇರಿತರಾದರೂ ಕೂಡ ಪ್ರಗತಿಶೀಲ ಸಂದರ್ಭದಲ್ಲಿ ನಿರಂಜನ ಅವರ 'ಚಿರಸ್ಮರಣೆ' ಹೊರತುಪಡಿಸಿದರೆ ರೈತ ಚಳವಳಿಯನ್ನೊಳಗೊಂಡ ಕಾದಂಬರಿಗಳು ತುಂಬಾ ವಿರಳವೇ. ಈ ರೀತಿ ಚಳವಳಿಯೊಂದರ ಮೂಲಕ ಸಮಾಜಕ್ಕೆ

ಕೊಡಬಹುದಾದ ಸಂದೇಶದಂತೆ ಪ್ರಗತಿಶೀಲರು ಕಾದಂಬರಿಗಳ ಮೂಲಕ ಆ ತರಹದ ಒಂದು ಸಂದೇಶವನ್ನು ಕೊಡುವಲ್ಲಿ ವಿಫಲರಾದರು.

ತ.ರಾ.ಸು. ಅವರ ಕಾದಂಬರಿಗಳಲ್ಲಿನ ಸ್ತ್ರೀಯರು ಸಾಮಾಜಿಕವಾದ ಅನೇಕ ಸಮಸ್ಯೆಗಳಿಗೆ ಸಿಲುಕಿರುವವರೇ. ಜಾತಿ ವ್ಯವಸ್ಥೆಯಾಗಿರಬಹುದು, ವರ್ಗಸಂಘರ್ಷವಾಗಿರಬಹುದು, ಹೆಣ್ಣಿನ ಶೋಷಣೆ, ಲೈಂಗಿಕವಾದ ದೌರ್ಜನ್ಯ, ಕಾಮಸಮಸ್ಯೆ, ಗ್ರಾಮೀಣ ಸ್ತ್ರೀಯರ ಸಮಸ್ಯೆ, ನಗರ ಪ್ರದೇಶದ ಸ್ತ್ರೀಯರು, ಬಡತನ ಇನ್ನು ಹತ್ತು ಹಲವಾರು ಸಮಸ್ಯೆಗಳ ಸುಳಿಗೆ ಸಿಲುಕಿರುವ ಸ್ತ್ರೀಯರನ್ನು ತಮ್ಮ ಕಾದಂಬರಿಗಳಲ್ಲಿ ತಂದಿದ್ದಾರೆ.

ಜಾತಿಭೇದದ ವಿರುದ್ಧ ಸಿಡಿದೇಳುವ ಬಂಡಾಯವನ್ನು ಸಾರುವ ಕಾದಂಬರಿ ಮಾಲೆ 'ನಾಗರಹಾವು'. ಹೆಣ್ಣಿನ ವಿರುದ್ಧವಾಗಿ ಹೊಂದಿರುವ ಸಮಾಜದ ವಿಚಿತ್ರ ಆಕ್ರೋಶ, ಅನ್ಯಾಯಗಳನ್ನು ದಾಖಲಿಸುವ 'ಚಂದನದಗೊಂಬೆ', ಸ್ವಂತ ಭೂಮಿ ಹೊಂದಲಾರದ ಬಡರೈತನೊಬ್ಬನ ಬದುಕಿನ ಸುತ್ತಲೂ ನಡೆಯುವ ಶೋಷಣೆ, ಅವನ ಬವಣೆ, ದಾಖಲಿಸುವ 'ಚಂದವಳ್ಳಿಯ ತೋಟ', ಮುಂತಾದ ಕಾದಂಬರಿಗಳಲ್ಲಿ ತ.ರಾ.ಸು. ಅವರು ಸಮಕಾಲೀನ ಸಮಾಜದಲ್ಲಿ ಬೇರುಬಿಟ್ಟಿರುವ ಅಸಮಾನತೆಗಳ ವಿರುದ್ಧ ತೀವ್ರವಾದ ಸಿಟ್ಟನ್ನು, ಆಕ್ರೋಶವನ್ನು ವ್ಯಕ್ತಪಡಿಸಿದ್ದಾರೆ. ಇಂತಹ ಸಂದರ್ಭದಲ್ಲಿ ತ.ರಾ.ಸು. ಅವರ ಕಾದಂಬರಿಗಳ ಪಾತ್ರಗಳು ಗಟ್ಟಿತನವನ್ನು ಪ್ರದರ್ಶಿಸದೆ ಸಹಾನುಭೂತಿಯ ಪಾತ್ರಗಳಾಗಿ, ರೋಚಕತೆಯಲ್ಲಿ ಮುಳುಗಿಬಿಡುತ್ತವೆ. ಮಾನವೀಯ ನೆಲೆಗಟ್ಟಿನಲ್ಲಿ ಚಿತ್ರಿಸುವ ಸಾರ್ವತ್ರಿಕ ಪಾತ್ರಗಳಾಗುವುದಿಲ್ಲ. ಕಾದಂಬರಿಕಾರರು ಇಂತಹ ಸಂದರ್ಭದಲ್ಲಿ ಭಾವುಕತೆಯನ್ನಷ್ಟೆ ವ್ಯಕ್ತಪಡಿಸುತ್ತಾರೆ. ಪರಂಪರಾನುಗತವಾಗಿ ಆರಂಭಿಸುತ್ತಾ ಬಂದಿರುವ ಮಾತೃಆರಾಧನಾ ಶ್ರದ್ಧೆಯನ್ನು 'ಮೊದಲನೋಟ' ಕಾದಂಬರಿ ಮಾಲೆಯ ವೆಂಕಟದಾಸಪ್ಪನ ಮೂಲಕ ದೇವಿಯ ಅನುಗ್ರಹವನ್ನು ಎತ್ತಿಹಿಡಿಯುತ್ತಾರೆ. ಸ್ತ್ರೀಯಲ್ಲಿ ಜಗನ್ಮಾತೆಯನ್ನು ಕಾಣಬೇಕೆಂಬ ಅಧ್ಯಾತ್ಮದ ನಂಬಿಕೆಯನ್ನೂ ಇಲ್ಲಿ ತಂದಿದ್ದಾರೆ. "ಒಂದೆಡೆ ದೇವಿ ತತ್ವದ ರೂಪದಲ್ಲಿ ಹೆಣ್ಣನ್ನು ಆರಾಧಿಸುತ್ತಾ, ಮತ್ತೊಂದು ನೆಲೆಯಲ್ಲಿ ಊಳಿಗದ ವಸ್ತುವಿನ ನೆಲೆಯಲ್ಲೇ ಆಕೆಯನ್ನು ಉಳಿಸಿಬಿಡುವ ಯಥಾಸ್ಥಿತಿಯ ದ್ವಂದ್ವವೇ ಇಲ್ಲಿ ವಿಜೃಂಭಿಸುತ್ತದೆ".[೧೦] ಎನ್ನುವ ಬಿ.ಎಸ್.ಸುಮಿತ್ರಬಾಯಿ ಅವರ ಹೇಳಿಕೆ ತ.ರಾ.ಸು.ಅವರ ಕಾದಂಬರಿಗಳಲ್ಲಿನ ಸ್ತ್ರೀಯರ ವಿವಿಧ ನೆಲೆಗಳನ್ನು ಸೂಕ್ಷ್ಮವಾಗಿ ಅಧ್ಯಯನಮಾಡಲು ಪ್ರೇರೇಪಿಸುತ್ತವೆ.

ತ.ರಾ.ಸು. ಅವರ ಕಾದಂಬರಿಗಳಲ್ಲಿನ ಸ್ತ್ರೀಯರು ಉಚ್ಚಶಿಕ್ಷಣ ಪಡೆದ ವಿಚಾರವಂತರು, ಬುದ್ಧಿವಂತರು. ತಾವು ನಂಬಿದ ಕ್ರಾಂತಿಕಾರಕವಾದ ವಿಚಾರಗಳಿಗಾಗಿ ತಾವು ಮೆಚ್ಚಿದ ಗೆಳೆಯರನ್ನೂ ಬಿಟ್ಟುಕೊಡುವಂತಹವರು. 'ಕೇದಿಗೆವನ' ಕಾದಂಬರಿಯ ರಾಜಶೇಖರ ತನಗಿಂತಲೂ ಬುದ್ಧಿವಂತೆಯಾದ, ಪ್ರತಿಭಾವಂತಳಾದ ಕಾತ್ಯಾಯಿನಿಯನ್ನು ಮದುವೆಯಾಗಿ

ಇಬ್ಬರೂ ಜನಸೇವೆ ಮಾಡುವ ಕನಸುಕಾಣುತ್ತಾರೆ. ವರದಕ್ಷಿಣೆ ತರುವಂತಹ ಸಂಪ್ರದಾಯದ ಮದುವೆ ಬಯಸಿದ್ದ ತನ್ನ ತಂದೆಯನ್ನು ದೂರಮಾಡಿಕೊಂಡು, ತನ್ನ ಪ್ರೇಮಕ್ಕಾಗಿ ಈ ತ್ಯಾಗ ಮತ್ತು ಹೋರಾಟ ಮಾಡುತ್ತೇನೆಂದು ಅಂದುಕೊಳ್ಳುತ್ತಿರುವಾಗಲೇ ಕಾತ್ಯಾಯಿನಿ ರಾಜಶೇಖರನ ಈ ತರಹದ ಸಮಾಜ ಸುಧಾರಣೆ ಅರ್ಥಹೀನವೆಂದು ಭಾವಿಸುತ್ತಾಳೆ. ಆದರ್ಶವಾದ ಒಂದು ಕನಸೆಂದು ಉದ್ಧರಿಸುತ್ತಾಳೆ. ರಾಜಶೇಖರನ ಸಂಗಾತಿಯಾಗಿರಲು ಇಷ್ಟಪಡುವುದಿಲ್ಲ. ಪ್ರಚಲಿತ ಸಾಮಾಜಿಕ ವ್ಯವಸ್ಥೆಯಲ್ಲಿ ಬದಲಾವಣೆ ಉಂಟಾಗದ ಹೊರತು, ನಿಜವಾದ ಕ್ರಾಂತಿಯಾಗಲಿ, ಮಾನವೀಯತೆಗಳಾಗಲಿ ನೆಲೆಸಲು ಸಾಧ್ಯವಿಲ್ಲವೆಂದು ನಂಬಿರುವ ಕಾತ್ಯಾಯಿನಿಗೆ ರಾಜಶೇಖರನ ಜೊತೆಗೆ ಪ್ರೇಮದಾಂಪತ್ಯ ತುಂಬಾ ಬಾಲಿಶವಾಗಿ ಕಾಣುತ್ತದೆ. ಕೌಟುಂಬಿಕ ವ್ಯವಸ್ಥೆಯ ಹಿನ್ನೆಲೆಯೇ ಹೆಣ್ಣಿನ ಬದುಕಿಗೆ ಸುಭದ್ರವಾದ ನೆಲೆ ಎಂಬುದನ್ನು ತಾನು ನಂಬಿರುವ ತತ್ವ ಸಿದ್ಧಾಂತಗಳಿಗಾಗಿ ಕೌಟುಂಬಿಕ ನೆಲೆಯಿಂದ ದೂರ ಉಳಿಯುವ ಮಹಿಳೆಯರನ್ನೂ ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿರುವುದು ವಿಶೇಷವೆಂದೇ ಭಾವಿಸಬೇಕು.

### ಅಡಿ ಟಿಪ್ಪಣಿಗಳು:

೧) ಬರಗೂರು ರಾಮಚಂದ್ರಪ್ಪ : ಕನ್ನಡ ಸಾಹಿತ್ಯದಲ್ಲಿ ಸ್ತ್ರೀಸಂವೇದನೆಯ ಸ್ವರೂಪ ಪುಟ. ೩೯

೨) ಅದೇ : ಪುಟ.೪೬

೩) ಅದೇ : ಪುಟ.೨೧೧

೪) ಪ್ರೀತಿಶುಭಚಂದ್ರ : ಮಹಿಳಾ ಅಧ್ಯಯನದ ತಾತ್ತ್ವಿಕ ನೆಲೆಗಳು ಮತ್ತು ಚಳವಳಿಗಳು, ಪುಟ ೨೦೧

೫) ಉಷಾ. ಎಂ. : ಮಹಿಳಾ ಚಳವಳಿ ಮತ್ತು ಮಹಿಳಾ ವಿಷಯಗಳು ಪುಟ ೦೩

೬) ಪ್ರಹ್ಲಾದ ಅಗಸನಕಟ್ಟೆ : ದಲಿತ–ಬಂಡಾಯಕಾವ್ಯ ಮತ್ತು ವಿಚಾರವಾದಗಳು ಪುಟ ೩೯೭

೭) ಪ್ರೀತಿ ಶುಭಚಂದ್ರ : ಮಹಿಳಾ ಅಧ್ಯಯನದ ತಾತ್ತ್ವಿಕ ನೆಲೆಗಳು ಮತ್ತು ಮಹಿಳಾ ಚಳವಳಿಗಳು. ಪು.೨೬೩–೨೬೪

೮). ತೇಜಸ್ವಿನಿ ನಿರಂಜನ(ಸಂ). ಸೀಮಂತಿನಿ ನಿರಂಜನ : ಸ್ತ್ರೀವಾದಿ ಸಾಹಿತ್ಯ ವಿಮರ್ಶೆ, ಪುಟ.೧೯೯

೯) ಅಶೋಕ.ಟಿ.ಪಿ. (ಸಂ) : ಕಾರಂತ ಮಂಥನ, ಪುತ್ತೂರು, ಪುಟ ೪೨೦

೧೦) ಬರಗೂರು ರಾಮಚಂದ್ರಪ್ಪ : ಕನ್ನಡ ಸಾಹಿತ್ಯದಲ್ಲಿ ಸ್ತ್ರೀಸಂವೇದನೆಯ ಸ್ವರೂಪ ಪುಟ ೧೪೧

## ಅಧ್ಯಾಯ-೫

# ತ.ರಾ.ಸು. ಅವರ ಕಾದಂಬರಿಗಳಲ್ಲಿ ಸ್ತ್ರೀಸಂವೇದನೆ

## ೫.೧ ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳಲ್ಲಿ ಸ್ತ್ರೀ ಸಂವೇದನೆ :

ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳಲ್ಲಿನ ಸ್ತ್ರೀಸಂವೇದನೆಯನ್ನು ಅವಲೋಕಿಸುವ ಮುನ್ನ ಸಾಮಾಜಿಕ ಕಾದಂಬರಿಗಳ (ಪಕ್ಷಿನೋಟ) ಹಿನ್ನೆಲೆ ಗಮನಿಸುವುದು ಅಗತ್ಯ. ಅನೇಕ ಅವಸ್ಥಾಂತರಗಳನ್ನು ದಾಟಿ ಬಂದಿರುವ ಕನ್ನಡ ಕಾದಂಬರಿಗೆ ಸುಧೀರ್ಘವಾದ ಹಿನ್ನಲೆ ಇದೆ. ಇಂತಹ ಕಾದಂಬರಿ ಕ್ಷೇತ್ರ ಬೆಳೆದುಬಂದ ಬಗೆ, ಅದರ ವಿಕಾಸ ಮತ್ತು ಬೆಳವಣಿಗೆಯನ್ನು ಅವಲೋಕನ ಮಾಡುವುದು ಅತ್ಯಗತ್ಯ. ಆದುದರಿಂದ ಸಾಮಾಜಿಕ ಕಾದಂಬರಿಗಳ ಸ್ಥೂಲವಾದ ಪರಿಚಯದ ಜೊತೆ ಜೊತೆಯಲ್ಲಿಯೆ ಈ ಭಾಗದಲ್ಲಿ ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳಲ್ಲಿ ಸ್ತ್ರೀ ಸಂವೇದನೆಯನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಹತ್ತೊಂಬತ್ತನೆಯ ಶತಮಾನ ಆಧುನಿಕ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಪರಿವರ್ತನೆಯನ್ನು ನೀಡಿದೆ. ಇಂಗ್ಲಿಷ್ ವಿದ್ಯಾಭ್ಯಾಸ, ಕ್ರೈಸ್ತ ಮಿಷನರಿಗಳ ಕೊಡುಗೆ, ಬ್ರಿಟಿಷರ ಆಡಳಿತದಿಂದ ಮೂಡಿದ ಹೊಸತನಗಳಿಂದ ಭಾರತೀಯರ ಆಲೋಚನಾಕ್ರಮದಲ್ಲಿ ಹೊಸತನ ಮತ್ತು ಹುರುಪು ಮೂಡಲು ಸಾಧ್ಯವಾಯಿತು. ಭಾಷೆ ಮತ್ತು ಸಾಹಿತ್ಯ ನಾವೀನ್ಯತೆಯನ್ನು ಪಡೆದುಕೊಂಡಿತು. ಆ ವೇಳೆಗಾಗಲೆ ಇಂಗ್ಲಿಷ್‌ನ ಯಶಸ್ವಿ ಮಾದರಿಯೊಂದು ಜನರ ಮುಂದಿತ್ತು. ಆದರೂ ಭಾರತೀಯರಲ್ಲಿ ಪಾಶ್ಚಾತ್ಯರ ರೀತಿ, ನೀತಿಗಳನ್ನು ಯಥಾವತ್ತಾಗಿ ಅನುಕರಿಸುವ ವಿಚಾರಕ್ಕಷ್ಟೆ ಸೀಮಿತರಾಗದೆ ಸ್ವತಂತ್ರವಾದ ಆಲೋಚನೆ, ಸ್ವತಂತ್ರವಾದ ಸೃಷ್ಟಿಕ್ರಿಯೆಗಳು ಬೆಳೆದು ಬಂದವು. ಈ ರೀತಿಯ ಬೆಳವಣಿಗೆಗೆ ಅಂದಿನ ಸ್ಯಾಂಸ್ಕೃತಿಕ ಹಿನ್ನೆಲೆಯೂ ಇತ್ತೆಂಬುದು ಗಮನಾರ್ಹವಾದ ವಿಷಯ.

ಹದಿನೆಂಟನೆಯ ಶತಮಾನದ ವೇಳೆಗಾಗಲೆ ಕನ್ನಡದಲ್ಲಿ ಗದ್ಯಪ್ರಕಾರ ಬೆಳೆಯತೊಡಗಿತ್ತು. ಹೊಸಗನ್ನಡದ ಮುಂಗೋಳಿ ಮುದ್ದಣ (೧೮೬೯-೧೯೦೦) ಹಳೆಯ ಮತ್ತು ಹೊಸ ಸಂಧಿ ಸಮಯಗಳಿಗೆ ಸಂಕೇತ. ಬ್ರಿಟಿಷ್ ಆಡಳಿತ ಜಾರಿಗೆ ತಂದ ಇಂಗ್ಲಿಷ್ ವಿದ್ಯಾಭ್ಯಾಸ ಪದ್ಧತಿಯಿಂದ ಆ ಭಾಷೆ ಕಲಿತಂತಹ ಒಂದು ವರ್ಗ ತಮ್ಮ ಬಿಡುವಿನ ವೇಳೆಯಲ್ಲಿ ವಾಚನಾಭಿರುಚಿಯನ್ನು ಬೆಳಸಿಕೊಂಡಂತೆ ಕಾದಂಬರಿಗಳನ್ನು ಕನ್ನಡಕ್ಕೆ ಅನುವಾದಿಸತೊಡಗಿದರು. ಅಲ್ಲದೆ ಮರಾಠಿ, ಬಂಗಾಳಿ ಮತ್ತು ತೆಲುಗಿನಿಂದಲೂ ಅನುವಾದಗಳು ಬರತೊಡಗಿದವು. ಹೀಗೆ ಕನ್ನಡದಲ್ಲಿ ಕಾದಂಬರಿ ಪ್ರಕಾರ ಹೀಗೆ ಬೆಳೆದು ಬಂದಿರುವುದನ್ನೂ ಗಮನಿಸಬಹುದು. ಕಾದಂಬರಿ

ಪ್ರಕಾರವನ್ನು ಅಧ್ಯಯನದ ಅನುಕೂಲಕ್ಕಾಗಿ, ಐತಿಹಾಸಿಕ, ಪೌರಾಣಿಕ, ಸಾಮಾಜಿಕ, ಪತ್ತೇದಾರಿ ಪ್ರಕಾರವೆಂದು ವಿಭಾಗಿಸಬಹುದು. ಇವುಗಳಲ್ಲಿ ತನ್ನ ಸುತ್ತಲಿನ ಸಮಾಜ, ಸಮಾಜ ಜೀವಿಗಳು, ಸಾಮಾಜಿಕ ಬದುಕನ್ನು ಪ್ರತಿಬಿಂಬಿಸುವ ಕಾದಂಬರಿಯೇ ಸಾಮಾಜಿಕ ಕಾದಂಬರಿ.

ಸಾಮಾಜಿಕ ಕಾದಂಬರಿಗಳನ್ನು ವಿಶ್ಲೇಷಿಸುವಾಗ ಅದಕ್ಕಿರುವ ಅರ್ಥ, ವೈಶಾಲ್ಯತೆ ವ್ಯಾಪ್ತಿಯನ್ನೂ ಅವಲೋಕಿಸಬೇಕಾಗುತ್ತದೆ. ಸಾಮಾಜಿಕ ಕಾದಂಬರಿಯ ವೈಶಿಷ್ಟ್ಯವನ್ನು ಗುರುತಿಸುತ್ತಲೆ ಆರಂಭದ ಸಾಮಾಜಿಕ ಕಾದಂಬರಿಗಳನ್ನು ವಿಶ್ಲೇಷಿಸಬಹುದಾಗಿ. ಆದರೆ ಪ್ರಸ್ತುತ ನನ್ನ ಪ್ರಬಂಧದ ಎರಡನೆ ಅಧ್ಯಾಯದಲ್ಲಿ ಆರಂಭದ ಸಾಮಾಜಿಕ ಕಾದಂಬರಿಗಳಲ್ಲಿ ಸ್ತ್ರೀ-ಸಂವೇದನೆಯನ್ನು ಅವಲೋಕಿಸಲಾಗಿದೆ. ಸಮಾಜ ಮತ್ತು ಸಾಮಾಜಿಕ ಪರಿಸರವನ್ನು ಕೇಂದ್ರಬಿಂದುವಾಗಿ ಇಟ್ಟುಕೊಂಡ ಕಾದಂಬರಿಗಳು ಮಾತ್ರ ಸಾಮಾಜಿಕ ಕಾದಂಬರಿಗಳು ಎನಿಸಿಕೊಳ್ಳುತ್ತವೆ. ಮುಂದುವರೆದು ಸಾಮಾಜಿಕ ಕಾದಂಬರಿ ಜನಜೀವನದ ಪ್ರತಿಬಿಂಬವಾದರೂ ಬದುಕಿನ ಗತಿಯನ್ನು ನಿರ್ದೇಶಿಸುತ್ತದೆ. ದಿನನಿತ್ಯದ ಬದುಕಿನ ಚಿತ್ರಣವೇ ಅದರಲ್ಲಿ ಬಂದಿದ್ದರೂ ಕೃತಿಯನ್ನು ಅಭ್ಯಾಸಮಾಡಿದಾಗ ಆನಂದ ಉಂಟಾಗುತ್ತದೆ.

ಸಾಮಾಜಿಕ ಕಾದಂಬರಿ ರಚಿಸುವ ಲೇಖಕನ ಜವಾಬ್ದಾರಿ ಹೆಚ್ಚಿನದಾಗಿರುತ್ತದೆ. ಏಕಕಾಲಕ್ಕೆ ಆತ ಸಮಾಜಶಾಸ್ತ್ರಜ್ಞನೂ ಹಾಗೂ ಮನಃಶಾಸ್ತ್ರಜ್ಞನೂ ಆಗಿರುತ್ತಾನೆ. ಸಮಾಜ ರಚನೆ, ಸಾಮಾಜಿಕ ಅವಸ್ಥಾಂತರಗಳನ್ನು ಅವಲೋಕಿಸುವಾಗ ಸಮಾಜಶಾಸ್ತ್ರಜ್ಞನಾದರೆ, ಸಮಾಜದ ಘಟಿಸಿದ ಘಟಾನಾವಳಿಗಳಲ್ಲಿ ಸಂಕೀರ್ಣ ಪರಿಸ್ಥಿತಿಯಲ್ಲಿ, ಸಂಘರ್ಷಮಯ ವಾತಾವರಣದಲ್ಲಿ, ಭಾವನಾತ್ಮಕ ಸಂದರ್ಭಗಳಲ್ಲಿ ವ್ಯಕ್ತಿಯ ಮನಸ್ಸಿನ ಸೂಕ್ಷ್ಮತೆಯನ್ನು ಗ್ರಹಿಸುವಾಗ ಮನಃಶಾಸ್ತ್ರೀಯ ದೃಷ್ಟಿಕೋನ ಬೇಕಾಗುತ್ತದೆ. ಇವೆರಡರ ಅರಿವು ಇದ್ದಾಗ ಮಾತ್ರ ಉತ್ತಮವಾದ ಸಾಮಾಜಿಕ ಕಾದಂಬರಿ ರೂಪುಗೊಳ್ಳಲು ಸಾಧ್ಯವಾಗುತ್ತದೆ.

ಆರಂಭದ ಹಾಗೂ ನವೋದಯ ಸಂದರ್ಭದ ಸಾಮಾಜಿಕ ಕಾದಂಬರಿಗಳಲ್ಲಿ ನಮ್ಮ ಸಮಾಜದಲ್ಲಿದ್ದ ಗೊಡ್ಡು ನಂಬಿಕೆಗಳು, ಅರ್ಥವಿಲ್ಲದ ಸಂಪ್ರದಾಯಗಳು, ವಿಚಾರಹೀನ ಆಚರಣೆಗಳು ಚಿತ್ರಿಸಲ್ಪಟ್ಟವು. ಅಲ್ಲದೆ ಸ್ವಾತಂತ್ರ್ಯ ಹೋರಾಟವನ್ನೂ ಬಿಂಬಿಸುವಂತಹ ಕಾದಂಬರಿಗಳು ರೂಪುಗೊಂಡವು. ಉದಾ: ಕಟ್ಟೀಮನಿಯವರ 'ಮಾಡಿಮಡಿದವರು', ಶಿವರಾಮ ಕಾರಂತರ 'ಔದಾರ್ಯದ ಉರುಳಲ್ಲಿ' ಮುಂತಾದುವು. ಅಸ್ಪೃಶ್ಯತೆ, ದೇವದಾಸಿ ಪದ್ದತಿ, ಧಾರ್ಮಿಕ ಶೋಷಣೆ ಮೊದಲಾದ ಸಾಮಾಜಿಕ ಸಮಸ್ಯೆಗಳು ಕಾದಂಬರಿಗಳಲ್ಲಿ ಚಿತ್ರಿಸಲ್ಪಟ್ಟವು. ಉದಾ: ಕಾರಂತರ 'ಚೋಮನದುಡಿ', ಕಟ್ಟೀಮನಿಯವರ 'ಜರತಾರಿ ಜಗದ್ಗುರು', ಆನಂದಕಂದರ 'ಸುದರ್ಶನ', ಕುವೆಂಪು ಅವರ 'ಕಾನೂರು ಹೆಗ್ಗಡಿತಿ' ಮುಂತಾದುವು.

ಪ್ರಗತಿಶೀಲ ಸಾಹಿತ್ಯ ಪಂಥದಲ್ಲಿ ಪ್ರಧಾನವಾಗಿ ಕಾದಂಬರಿ ಮತ್ತು ಕಥಾ ಪ್ರಕಾರಗಳು ಬೆಳೆದುಬಂದವು. ಪ್ರಗತಿಶೀಲ ಸಾಹಿತ್ಯ ಸಮಾಜದಲ್ಲಿ ಹಾಸುಹೊಕ್ಕಾಗಿ ಬೆರೆತಿದ್ದ ಭೀಕರ ಸಮಸ್ಯೆಗಳಾದ ವೇಶ್ಯಾಸಮಸ್ಯೆ, ಭಿಕ್ಷಾಟನೆ, ಲೈಂಗಿಕಸಮಸ್ಯೆ ಮುಂತಾದವುಗಳಿಗೆ ಹೆಚ್ಚು

ಮಹತ್ವನೀಡಿತು. ಉದಾ: ಅ.ನ.ಕೃ, ತ.ರಾ.ಸು ಮೊದಲಾದವರು ಬರೆದ ಕಾದಂಬರಿಗಳು. ನನ್ನ ಸಂಶೋಧನೆಯ ಉದ್ದೇಶ ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳಲ್ಲಿ ಸ್ತ್ರೀಸಂವೇದನೆಯ ಸ್ವರೂಪವನ್ನು ಕುರಿತು ಅವಲೋಕನ ಮಾಡಬೇಕಾಗಿರಿವುದರಿಂದ ಇಲ್ಲಿ ಪ್ರಧಾನವಾಗಿ ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳನ್ನಷ್ಟೆ ಕುರಿತು ಅವಲೋಕಿಸಲಾಗುತ್ತದೆ. ತ.ರಾ.ಸು ಅವರು ೫೩ ಸಾಮಾಜಿಕ ಕಾದಂಬರಿಗಳನ್ನು ರಚಿಸಿದ್ದಾರೆ. ಇವುಗಳಲಿ ಸ್ತ್ರೀಸಂವೇದನೆಯನ್ನು ಪ್ರಧಾನವಾಗಿ ಹೊಂದಿರುವ ಪ್ರಾತಿನಿಧಿಕವಾದ ಕಾದಂಬರಿಗಳನ್ನು ನನ್ನ ಸಂಶೋಧನಾ ಪ್ರಬಂಧದ ವ್ಯಾಪ್ತಿಗೆ ಒಳಪಡಿಸಿದ್ದೇನೆ.

ಸಾಮಾಜಿಕ ಕಾದಂಬರಿಗಳಲ್ಲಿ ಸಮಾಜದ ಚಿತ್ರಣವೇ ಮುಖ್ಯ ಉದ್ದೇಶವಾಗಿದ್ದರೂ ಎಲ್ಲ ಸಾಮಾಜಿಕ ಕಾದಂಬರಿಗಳ ದೃಷ್ಟಿಕೋನ ಒಂದೇ ರೀತಿಯಾಗಿರುವುದಿಲ್ಲ. ಉದಾ: ಇಂದಿರಾಬಾಯಿ ಯಲ್ಲಿನ ವಿಧವಾವಿವಾಹ ಯಶಸ್ವಿಯಾದ ರೀತಿಯಲ್ಲಿ ಭೈರಪ್ಪನವರ ವಂಶವೃಕ್ಷದಲ್ಲಿ ಯಶಸ್ವಿಯಾಗುವುದಿಲ್ಲ. ಅದೇ ರೀತಿ ಕಾರಂತರ ಮಾಸ್ತಿಯಮ್ಮ (ಸರಸಮ್ಮ)ನೆ ಬೇರೆ ಕುವೆಂಪು ಅವರ ಹೆಗ್ಗಡಿತಿಯೇ ಬೇರೆ. ಆದ್ದರಿಂದ ಎಲ್ಲ ಲೇಖಕರೂ ಒಂದೇ ತೆರನಾದ ಸಮಾಜ ಚಿತ್ರಣವನ್ನು ನೀಡಬೇಕೆಂದಿಲ್ಲ. ಅಲ್ಲಿ ಸಮಾಜವನ್ನು ನೋಡುವ ಲೇಖಕನ ದೃಷ್ಟಿಕೋನ ಮಾತ್ರ ಮುಖ್ಯವಾಗಿರುತ್ತದೆ.

ಸಾಹಿತಿ ಎಂದೂ ಪರಿಸರಕ್ಕೆ ವಿಮುಖನಾಗಿರಬಾರದು. ಸಾಮಾಜಿಕ ಅಸೌಖ್ಯದ ಚಿಹ್ನೆಗಳಾದ ಶೋಷಣೆ, ದಬ್ಬಾಳಿಕೆ, ತಾರತಮ್ಯ ಅಸಮಾನತೆಗಳ ವಿರುದ್ಧ ತನ್ನ ನಿಲುವನ್ನು ಕೃತಿಗಳಿಂದ ಸ್ಪಷ್ಟಪಡಿಸಬೇಕು. ದೀನದಲಿತರ ಬಗ್ಗೆ ನಿಶ್ಚಿತವಾದ ಒಲವು, ಅನುಕಂಪಗಳಿದ್ದು ಅವರ ಶ್ರೇಯಸ್ಸಿನ ಮಾರ್ಗ ಸೂಚಿಸಬೇಕು. ಇದುವರೆಗೆ ಸಾಹಿತ್ಯಕ್ಕೆ ಒಳಪಡದಿರುವ ಅನಕ್ಷರಸ್ಥರು, ಅವಿದ್ಯಾವಂತರು, ಶ್ರಮಜೀವಿಗಳ ಬದುಕನ್ನು ಚಿತ್ರಿಸುವ ಪ್ರತಿಯೊಬ್ಬ ಲೇಖಕನ ಮೂಲಕ ಸಾಹಿತ್ಯದ ಸಾಮಾಜಿಕ ಉಪಯುಕ್ತತೆಯನ್ನು ವಿಸ್ತರಿಸುವುದೂ ಕರ್ತವ್ಯವೇ. ತಾನು ಬದುಕಿರುವ ಸಮಾಜಕ್ಕೆ ಹೊಣೆಗಾರನಂತಿದ್ದು ಸಮಾಜದ ವಿಕಾಸಕ್ಕೆ ಕಾರಣವಾಗುವ ಅಂಶಕ್ಕೆ ಶೋಷಣೆ ನೀಡುವುದೂ ಮತ್ತು ಅಡ್ಡಿಯುಂಟುಮಾಡುವ ವಸ್ತುವಿಷಯಗಳನ್ನು ನಿರ್ಮತ್ಸರ ಭಾವನೆಯಿಂದ ನಿರ್ದೇಶಿಸುವುದೂ ಸಾಹಿತಿಯ ಕರ್ತವ್ಯವಾಗಿರುತ್ತದೆ.

ಈ ಮೇಲಿನ ಮಾತುಗಳು ಸಾಹಿತಿಗಿರಬೇಕಾದ ಸಾಮಾಜಿಕ ಜವಾಬ್ದಾರಿಯನ್ನು ತಿಳಿಸುವುದರ ಜೊತೆಗೆ ಪರೋಕ್ಷವಾಗಿ ಆತನಿಗಿರಬೇಕಾದ ಸಾಮಾಜಿಕ ಬದ್ದತೆಯನ್ನು ತಿಳಿಸುತ್ತವೆ. ಅಲ್ಲದೆ ' ಉದ್ದೇಶ ಮತ್ತು ಆಶಯವನ್ನು ತಿಳಿಸುತ್ತಲೆ ಈ ರೀತಿ ಸಾಮಾಜಿಕ ಕಾದಂಬರಿಕಾರ ಸಾಮಾಜಿಕ ಸಮಸ್ಯೆಗಳನ್ನು ಚಿತ್ರಿಸುವ ಮುಖ್ಯ ಕರ್ತವ್ಯವನ್ನು ಕೂಡ ಹೊಂದಿರುತ್ತಾನೆ. ಅಂತೆಯೇ ಸಮಸ್ಯೆಗೆ ಕಾರಣವಾದ ಮೂಲಶಕ್ತಿಯನ್ನೂ ಗುರುತಿಸಬೇಕಾಗುತ್ತದೆ. ಚೋಮ ಕೊನೆಗೂ ತುಂಡುಭೂವಿಯೂ ಸಿಗದೆ ನಿರಾಶನಾಗಿಯೇ ಉಳಿಯುತ್ತಾನೆ. 'ಮಸಣದಹೂ' ಕಾದಂಬರಿಯಲ್ಲಿನ ಅರಳಿ ನಳನಳಿಸಬೇಕಾದ ಹೆಣ್ಣು ವೇಶ್ಯೆಯಾಗುವುದಕ್ಕೆ ಸಾಮಾಜಿಕ

ಪರಿಸ್ಥಿತಿಗಿಂತ ವ್ಯಕ್ತಿಗಳೇ (ಪುರುಷರು) ಕಾರಣವಾಗುತ್ತಾರೆ. ಈ ತರಹದ ಅಂಶಗಳನ್ನು ಕಾದಂಬರಿ ಗುರುತಿಸಿದಾಗ ಅಂತಹವಳ ಬದುಕಿಗೆ ಒಂದು ಸ್ಪಷ್ಟ ಹಿನ್ನೆಲೆ ದೊರೆತಂತಾಗುತ್ತದೆ. ಸಮಾಜವನ್ನು ನಿಯಂತ್ರಿಸುವ ಶಕ್ತಿಯೇ ಸಾಮಾಜಿಕ ಸಮಸ್ಯೆಗಳಿಗೆ ದಾರಿಮಾಡಿ ಕೊಡುತ್ತದೆ. ಈ ತರಹದ ಅಂಶಗಳನ್ನು ಗಮನಿಸದೆ ಬರೀ ಸಮಸ್ಯೆಯನ್ನೆ ಚಿತ್ರಿಸಿದರೆ ಸಮಸ್ಯೆಯ ಮೇಲ್ಪದರವನ್ನಷ್ಟೆ ಚಿತ್ರಿಸಿದಂತಾಗುತ್ತದೆ. ಅ.ನ.ಕೃ ಅವರ ನಗ್ನಸತ್ಯ 'ಸಂಜೆಗತ್ತಲು' ಮೇಲಿನ ಮಾತಿಗೆ ಉದಾಹರಣೆಗಳಾಗುತ್ತವೆ. ಈ ಕಾದಂಬರಿಗಳು ಸಮಸ್ಯೆಯ ಆಳಕ್ಕಿಳಿಯುವುದೇ ಇಲ್ಲ. ಶಬ್ಧಾಡಂಬರದಲ್ಲಿ ವೇಶ್ಯಾವಾಟಿಕೆ ವರ್ಣನೆಯೊಂದಿಗೆ ಕೊನೆಗಾಣುತ್ತವೆ. ಹಾಗಾಗಿ ಸಾಮಾಜಿಕ ಕಾದಂಬರಿಗಳು ಯಶಸ್ವೀ ಪ್ರಯೋಗಗಳಾಗದೆ ವ್ಯರ್ಥ ಪ್ರಯತ್ನವಾಗಿ ಕೇವಲ ಕಾದಂಬರಿಗಳಾಗುತ್ತವೆ.

ಸ್ತ್ರೀಸಂವೇದನೆಯನ್ನೆ ಪ್ರಧಾನವಾಗಿ ಬಿಂಬಿಸುವ ತ.ರಾ.ಸು ಅವರ ಸಾಮಾಜಿಕ ಹಾಗೂ ಇತರೆ ಕಾದಂಬರಿಗಳೆಂದರೆ 'ಪಂಜರದ ಪಕ್ಷಿ', 'ಒಮ್ಮೆನಕ್ಕನಗು', 'ನಾಗರಹಾವು', 'ಚಂದನದಗೊಂಬೆ', 'ಎರೆಡು ಹೆಣ್ಣು ಒಂದು ಗಂಡು', 'ಬಿಡುಗಡೆಯ ಬೇಡಿ', 'ಸರ್ಪ ಮತ್ಸರ', 'ಚಂದವಳ್ಳಿಯ ತೋಟ', 'ಹೆಣ್ಣುಕಟ್ಟಿದಮನೆ', 'ಮಸಣದಹೂ', 'ಗಾಳಿಮಾತು', 'ಬೆಂಕಿಯ ಬಲೆ', 'ಅಕ್ಕಮ್ಮನ ಭಾಗ್ಯ' ಮುಂತಾದವು. ಸಮಾಜದ ಸಂಕೀರ್ಣ ಸಮಸ್ಯೆಗಳನ್ನು ವಾಸ್ತವ ನೆಲೆಗಟ್ಟಿನಲ್ಲಿ ಚಿತ್ರಿಸುವ ಆಶಯ ತ.ರಾ.ಸು ಅವರದಾಗಿತ್ತು. ಸಾಮಾಜಿಕ ಸಮಸ್ಯೆಯ ಚಿತ್ರಣವಷ್ಟೆ ಪ್ರಗತಿಪರವೆನಿಸಿಕೊಳ್ಳುವುದಿಲ್ಲ. ಸಮಸ್ಯೆಯ ಮೂಲ ನೆಲೆಯನ್ನು ಗುರುತಿಸುವ ಪ್ರಯತ್ನಕ್ಕಿಂತ ಎಷ್ಟೋ ಬಹಿರ್ಮುಖ ಚಿತ್ರಣವೇ ಪ್ರಾಮುಖ್ಯತೆಯನ್ನು ಪಡೆದಿರುತ್ತದೆ. ಮಾನಸಿಕ ಸಂಘರ್ಷ, ವೈವಿಧ್ಯಮಯ ಬದುಕು, ಸಶಕ್ತಬರವಣಿಗೆ ಕೃತಿಯ ಗುಣಮಟ್ಟವನ್ನು ಎತ್ತಿಹಿಡಿಯುತ್ತವೆ. ಈ ತರಹದ ಸಮತೋಲನ ಗುಣ ಉಳಿದ ಲೇಖಕರಿಗಿಂತ ತ.ರಾ.ಸು ಅವರಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಕೃತಿಯ ಭಾವುಕತೆ, ರಂಜಕತೆ, ಮತ್ತು ರೋಚಕ ಗುಣಗಳು ಓದುಗ ವರ್ಗವನ್ನು ವಿಪುಲವಾಗಿ ಸೃಷ್ಟಿಸಿವೆ.

ಸಾಮಾಜಿಕ ಪರಿಸರದಲ್ಲಿ ಉದ್ಭವಿಸುವ ಸಮಸ್ಯೆಗಳು ಬಹುಮುಖಿಯಾದವು. ಸಾಮಾಜಿಕ ಮೌಲ್ಯಗಳಾದ ತ್ಯಾಗ, ಪ್ರಾಮಾಣಿಕತೆ, ಅನುಕಂಪ, ಪ್ರೇಮ, ದೇಶಪ್ರೇಮಗಳನ್ನು ಎತ್ತಿಹಿಡಿದ ತ.ರಾ.ಸು ಅವರು ಅದೇ ಹೊತ್ತಿನಲ್ಲಿಯೆ ಸಮಾಜವನ್ನು ಕಾಡುವ ಜ್ವಲಂತ ಸಮಸ್ಯೆಗಳಾದ ಲೈಂಗಿಕ ಸಮಸ್ಯೆ, ಸ್ತ್ರೀಸ್ವಾತಂತ್ರ್ಯ, ವೇಶ್ಯಾ ಸಮಸ್ಯೆಗಳನ್ನು ಕುರಿತು ಚಿತ್ರಿಸಿದ್ದಾರೆ. ಅಲ್ಲದೆ ಸಾಂಸಾರಿಕ ಸಮಸ್ಯೆಗಳು, ಬಡತನ, ಗ್ರಾಮೀಣ ಪರಿಸರ, ರಾಜಕೀಯ ಪರಿಸರ, ನಾಗರೀಕ ಪರಿಸರ, ಧಾರ್ಮಿಕ ಪರಿಸರ ಕುರಿತಂತಹ ವಿಚಾರಗಳನ್ನು ತಮ್ಮ ಸಾಮಾಜಿಕ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ. ಸಾಮಾಜಿಕ ಆಯಾಮದಲ್ಲಿ ರೂಪುಗೊಂಡ ಈ ತರಹದ ಸಮಸ್ಯೆಗಳಿಗೆ ಕಾದಂಬರಿ ಸುಲಭ ಪರಿಹಾರ ನೀಡಬಹುದಾದರೂ ಅದು ಅಂತಿಮ ನಿರ್ಣಯವೆನಿಸಿಕೊಳ್ಳುವುದಿಲ್ಲ. ಬದುಕಿನ ಅನೇಕ ರೀತಿಯ ಮಜಲುಗಳನ್ನು ಮತ್ತು ಸಮಸ್ಯೆಗಳನ್ನು ಗುರುತಿಸಿದಾಗ ಕಾದಂಬರಿ

ವೈವಿಧ್ಯತೆಯನ್ನು ಪಡೆದುಕೊಳ್ಳುತ್ತದೆ. ಇಂತಹ ವೈವಿಧ್ಯತೆಯನ್ನು ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳಲ್ಲಿ ಕಾಣುತ್ತೇವೆ.

"ಆತನಲ್ಲಿ (ಸಾಹಿತಿಯಲ್ಲಿ) ಮಾನವತೆ, ದಿವ್ಯತೆ, ಮತ್ತು ಸಭ್ಯತೆ ಹಾಸು ಹೊಕ್ಕಾಗಿಯೇ ಇರುತ್ತವೆ. ದಲಿತರನ್ನು ನೊಂದವರನ್ನು ಮತ್ತು ವಂಚಿತರನ್ನು ಅವರು ವ್ಯಕ್ತಿಯಾಗಿರಲಿ ಅಥವಾ ಸಮುದಾಯವಾಗಿರಿಲಿ, ಬೆಂಬಲಿಸುವುದು ಮತ್ತು ಅವರ ಪರವಾಗಿ ವಾದಿಸುವುದು ಆತನ ಕರ್ತವ್ಯವಾಗಿರುತ್ತದೆ...."[೨]. ಪ್ರೇಮಚಂದ್ ಅವರ ಈ ಹೇಳಿಕೆ ಬರಹಗಾರನಿಗಿರಬೇಕಾದ ಜವಾಬ್ದಾರಿಯನ್ನು ತಿಳಿಸುತ್ತದೆ. ಹಾಗೆಯೇ ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳಲ್ಲಿ ಮೇಲೆ ತಿಳಿಸಿರುವ ಎಲ್ಲ ತರಹದ ಸ್ತ್ರೀಯರೂ ಬಂದು ಹೋಗುತ್ತಾರೆ.

ಗುಪ್ತಗಾಮಿನಿಯಾಗಿದ್ದು ವ್ಯಕ್ತಿಯನ್ನು ಸುಷುಪ್ತಿ ಹಾಗೂ ಜಾಗೃತಾವಸ್ಥೆಯಲ್ಲಿ ಕಾಡುವ ಪ್ರಮುಖ ಸಮಸ್ಯೆ ಲೈಂಗಿಕ ಸಮಸ್ಯೆಯಾಗಿದೆ. ಲೈಂಗಿಕ ತೃಪ್ತಿ, ಅತೃಪ್ತಿಗಳೆರಡೂ ವ್ಯಕ್ತಿಯ ಬದುಕನ್ನು ನಿರ್ದೇಶಿಸುತ್ತವೆ. ದೈಹಿಕ ಕಾಮನೆಯನ್ನು ಅವಲಂಬಿಸಿದ ಮಾನವನ ಜೀವನವು ಏಳು, ಬೀಳುಗಳಿಗೆ ಸಿಲುಕುತ್ತದೆ. ಬದುಕು ಅಶಾಂತಿಯ ತಾಣವಾಗಿರುತ್ತದೆ. ಇದನ್ನು ಮುಖ್ಯ ವಸ್ತುವಾಗಿಸಿಕೊಂಡ ಕಾದಂಬರಿಗಳೆಂದರೆ 'ಯಕ್ಷಪ್ರಶ್ನೆ', 'ಬಯಕೆಯ ಬಂಧಿ', 'ಪರಿಮಳದ ಉರುಳು', 'ಮನೆಗೆ ಬಂದ ಮಹಾಲಕ್ಷ್ಮಿ', 'ಚದುರಂಗದ ಮನೆ" ಮುಂತಾದುವು. ಲೈಂಗಿಕ ಅತೃಪ್ತಿ ಕೌಟುಂಬಿಕ ವಿಘಟನೆಗೆ, ಸಾಂಸಾರಿಕ ವಿರಸ, ವಿಕೋಪಗಳಿಗೆ ಕಾರಣವಾಗುವುದನ್ನು ಮೇಲಿನ ಕಾದಂಬರಿಗಳು ಚಿತ್ರಿಸುತ್ತವೆ.

ಲೈಂಗಿಕ ಅತೃಪಿಯಿಂದ ಪತಿಪತ್ನಿಯರಲ್ಲಿ ವಿರಸ ಉಂಟಾಗುವುದೇ ಯಕ್ಷಪ್ರಶ್ನೆ ಕಾದಂಬರಿಯ ವಸ್ತು. ಕೃತಿಯ ಮುನ್ನುಡಿಯಲ್ಲಿ ಕಾದಂಬರಿಕಾರರೇ ಹೇಳಿರುವಂತೆ ಜನ್ನನ "ಮನಸಿಜನ ಮಾಯೆ ವಿಧಿವಿಳಸನದ ನೆರಂಬಡೆಯೆ ಕೊಂದು ಕೂಗದೆ ನರರಂ ಎಂಬ ಮಾತು ನಿತ್ಯ ಸತ್ಯ ಆ ಸತ್ಯವೇ ಇಲ್ಲಿ ಕಾದಂಬರಿ ರೂಪವಾಗಿ ಚಿತ್ರಿತವಾಗಿದೆ.."[೩]. ಮುನ್ನುಡಿಯ ಆಶಯಕ್ಕನುಗುಣವಾಗಿ ಕಾದಂಬರಿಯನ್ನು ಅವಲೋಕಿಸಿದಾಗ ಕಾಮದ ಪಾತ್ರ ಪ್ರಧಾನವಾಗುವುದಿಲ್ಲ. ಕಾಮಕ್ಕಿಂತಲೂ ಹೆಣ್ಣಿನ ಹಠಮಾರಿತನ, ದ್ವೇಷ, ಪತಿಪತ್ನಿಯರ ವಿರಸಕ್ಕೆ ಕಾರಣವಾಗುತ್ತದೆ."ಎಲ್ಲ ಹೆಂಗಸರ ಹಾಗೆ ಗಂಡನಿಗೆ ಬೇಕಾದವಳಾಗಿ, ನರೆಹೊರೆಯವರ ಕೈಯಲ್ಲಿ ಒಳ್ಳೆಯವಳು ಅಂತ ಅನ್ನಿಸಿಕೊಂಡು ಬದುಕಬೇಕೆಂಬ ಬಯಕೆ ನನಗೂ ಇದೆ". ಎಂದು ಈಗಿನ ವಿಷಯಕ್ಕೆ ನಾನು ಹೇಳುವುದಿಲ್ಲ. ನನ್ನ ಹೆಣ್ಣುತನದ ಸಂಪೂರ್ಣ ಅರಿವು ನನಗಿದೆ. ಉಳಿದ ಹೆಂಗಸರ ಹಾಗೆ ನನಗೂ, ಗಂಡ, ಸಂಸಾರ ಎಂಬ ಯೋಚನೆ ತಲೆಗೆ ಬಂದ ದಿನದಿಂದಲೂ ನಾನು ನನ್ನ ಸಂಸಾರದ ಬಗ್ಗೆ ಕನಸು ಕಂಡಿದ್ದೇನೆ". (ಯಕ್ಷ ಪ್ರಶ್ನೆ ಪುಟ-೩೩) ಈ ರೀತಿ ಮೀನಾಕ್ಷಿ ಹಠ, ದ್ವೇಷ, ಮನೋಭಾವ ತಳೆದಿದ್ದು ಪುರುಷ ದ್ವೇಷಿಯಾಗುತ್ತಾಳೆ. ವಿದ್ಯಾಭ್ಯಾಸದ ದಿನಗಳಲ್ಲಿ ಸ್ನೇಹಿತರ ಪ್ರಚೋದನೆಯಿಂದ ತನ್ನ ಮನೆಯಲ್ಲಿಯೇ ಇದ್ದ ಅನುಸೂಯಳನ್ನು

ಪ್ರೀತಿಸುವ ಆನಂದರಾಯ ವಿವಾಹದ ಅನಂತರವೂ ಅವಳನ್ನು ಮರೆಯುವುದಿಲ್ಲ. ಈ ಕಾರಣದಿಂದಲೇ ಆನಂದರಾಯ ಮತ್ತು ಮೀನಾಕ್ಷಿಯರ ವಿವಾಹ ಆರಂಭದಲ್ಲಿಯೇ ಬಿರುಕು ಬಿಡುತ್ತದೆ. ಶಕುಂತಲೆಯನ್ನು ಮರೆಯಲೆಂಬುದು ಮೀನಾಕ್ಷಿಯ ಬಯಕೆ. ಈ ಒಂದು ಸಣ್ಣಘಟನೆ ಪರಸ್ಪರ ವೈಮನಸ್ಯಕ್ಕೆ ಕಾರಣವಾಗುತ್ತದೆ. ಇದರಿಂದ ಮೀನಾಕ್ಷಿ ಬದುಕಲ್ಲಿ ಅತೃಪ್ತಳಾಗುತ್ತಾಳೆ. ಪತಿಯ ಭಾವನೆಗಳಿಗೆ ಮೀನಾಕ್ಷಿ ಸ್ಪಂದಿಸುವುದಿಲ್ಲ. ಇಲ್ಲಿ ಮೀನಾಕ್ಷಿಯ ಹಠವೇ ಮೇಲುಗೈ ಪಡೆಯುತ್ತದೆ. ಆನಂದರಾಯ ಶಕುಂತಲೆಯನ್ನು ಮರೆಯಲಿಲ್ಲ ಎನ್ನುವ ಕಾರಣದಿಂದ ತಾನಾಗಿಯೇ ದೈಹಿಕ ಸುಖಕ್ಕೆ ತಿಲಾಂಜಲಿ ಹೇಳುತ್ತಾಳೆ. ಆನಂದರಾಯನ ಪ್ರಾಮಾಣಿಕತೆಯನ್ನು ಅರ್ಥಮಾಡಿಕೊಳ್ಳುವಲ್ಲಿ ವಿಫಲಳಾಗುತ್ತಾಳೆ. ಇವರ ಹಠದ ಸ್ವಭಾವ ಬದುಕಿನ ದುರಂತಕ್ಕೆ ಕಾರಣವಾಗುತ್ತದೆ. ಇಲ್ಲಿ ಬರುವ ಲೈಂಗಿಕ ಅತೃಪ್ತಿ ಹಠದ ಕಾರಣದಿಂದಾಗಿಯೇ ಹೊರತು ನೈಸರ್ಗಿಕವಾದುದಲ್ಲ. ಮೀನಾಕ್ಷಿಯು ಹಠ, ದ್ವೇಷ, ಅಸಹನೆ, ಉದ್ರೇಕ ಭಾವಗಳನ್ನು ತ್ಯಜಿಸಿದ್ದರೆ ಸುಖ ದಾಂಪತ್ಯ ನಡೆಸಬಹುದಿತ್ತು. ಹೀಗಾಗಿ 'ಯಕ್ಷಪ್ರಶ್ನೆ' ಕಾದಂಬರಿಯಲ್ಲಿ ಲೈಂಗಿಕ ಅತೃಪ್ತಿಗಿಂತ ಹೆಣ್ಣಿನ ಹಠ, ದ್ವೇಷ, ಅಸೂಯೆಯೇ ಪ್ರಧಾನವಾಗುತ್ತದೆ.

ಇದೇ ತರಹದ ಲೈಂಗಿಕ ಸಮಸ್ಯೆಗಳನ್ನೊಳಗೊಂಡ ಕಾದಂಬರಿಗಳೆಂದರೆ 'ಪರಿಮಳದ ಉರುಳು', 'ಮನೆಗೆಬಂದ ಮಹಾಲಕ್ಷ್ಮಿ', 'ಬಯಕೆಯ ಬಂಧಿ', 'ಪರಿಮಳದ ಉರುಳು' ಕಾದಂಬರಿಯಲ್ಲಿನ ಲಕ್ಷ್ಮಿ ಲೈಂಗಿಕ ಅತೃಪ್ತಿಯಿಂದಾಗಿಯೇ ಹುಚ್ಚಿಯಾಗುತ್ತಾಳೆ. ಅತೃಪ್ತಕಾಮ ಮನೋವೈಪರೀತ್ಯಕ್ಕೆ ಎಡೆಮಾಡಿಕೊಡುತ್ತದೆಂಬ ವಿಚಾರ ಲಕ್ಷ್ಮಿಯ ಪಾತ್ರದ ಮೂಲಕ ನಿರೂಪಿಸಲ್ಪಟ್ಟಿದೆ. ಲಕ್ಷ್ಮಿ ಅತೃಪ್ತಿ ಕಾಮಿಯೆಂಬುದು ಮನಃಶಾಸ್ತ್ರ ಅಭ್ಯಾಸ ಮಡಿದ್ದ ರಾಜಣ್ಣನಿಗೆ ಮಾತ್ರ ತಿಳಿದಿರುತ್ತದೆ. ಲಕ್ಷ್ಮಿಯ ಅತೃಪ್ತ ಕಾಮದ ಹುಚ್ಚು ಮನಃಶಾಸ್ತ್ರ ತಿಳಿದಿದ್ದ ರಾಜಣ್ಣನಿಗೆ ಮಾತ್ರ ತಿಳಿದಿತ್ತು. ಒಮ್ಮೆ ಲಕ್ಷ್ಮಿಯ ಹುಚ್ಚನ್ನು ಪರೀಕ್ಷಿಸಲು ಬಂದ ರಾಜಣ್ಣನಿಗೆ ಆಕೆ ರಾಜಣ್ಣನನ್ನೆ ಬಯಸಿ ಮಾತನಾಡುವ ರೀತಿಯೆಂದರೆ, "ಇಷ್ಟು ದಿನದ ಮ್ಯಾಲೆ ನಿನಗೆ ನನ್ನ ಜ್ಞಪ್ತಿ ಬಂತಾ? ಅದಕ್ಕೆ ಹಳ್ಳದ ದಂಡೇಲಿ ಹೇಳಲಿಲ್ಲವಾ ನೀನು ಕೇಳಿದ್ದೆಲ್ಲಾನ ಕೊಡ್ತೀನಿ ಬಾಂತ. ಆಗ....ಆಗ ಬರ್ನಿಲ್ಲ ಇವತ್ತು ಬಂದ್ಯಾ? ಬಾ-ಇವತ್ತು ನಾನ್ಯಾವುದಕ್ಕೂ ಬ್ಯಾಡಾನ್ನೋಕಿಲ್ಲ. ನಿನ್ನ ಆಸೆ ಎಲ್ಲಾ ತೀರಿಸಿಕೊಂಡುಬಿಡು". (ಪರಿಮಳದ ಉರುಳು. ಪುಟ-೧೧೪) ಹೀಗೆ ಕಾಮದಿಂದ ಅತೃಪ್ತಳಾದ ಲಕ್ಷ್ಮಿಗೆ ಹುಚ್ಚು ಹಿಡಿದಿರುತ್ತದೆ. ಈ ರೀತಿ ಲಕ್ಷ್ಮಿ ಕಾಮೋದ್ರಿಕ್ತಳಾಗಿ ರಾಜಣ್ಣನನ್ನು ಬಯಸಿ ತನ್ನ ಹತ್ತಿರ ಬರಸಳೆಯುವ ಪ್ರಯತ್ನಮಾಡುತ್ತಾಳೆ. ಲಕ್ಷ್ಮಿಯ ಅತೃಪ್ತ ಕಾಮದ ಹುಚ್ಚು ಕಡಿಮೆಯಾಗಬೇಕಾದರೆ ಪುರುಷನ ಸಾನ್ನಿಧ್ಯದಿಂದ ಮಾತ್ರ ಸಾಧ್ಯವೆಂಬುದನ್ನು ರಾಜಣ್ಣ ಕಂಡುಕೊಳ್ಳುತ್ತಾನೆ. ರಾಜಣ್ಣ ಮನಃಶಾಸ್ತ್ರವನ್ನು ಅಧ್ಯಯನ ಮಾಡಿದ್ದರಿಂದ ಇದು ಸಾಧ್ಯವಾಗುತ್ತದೆ. ಲಕ್ಷ್ಮಿಯ ಸೌಂಧರ್ಯಕ್ಕೆ ರಾಜಣ್ಣನೂ ಮನಸೋಲುತ್ತಾನೆ. ಆದರೆ ಅವನ ಬಯಕೆ ಈಡೇರುವುದಿಲ್ಲ. ಹೀಗೆ ಮೂಲಭೂತವಾದ ಹಾಗೂ ಪ್ರಬಲ ಪ್ರವೃತ್ತಿಯ ಕಾಮದ ನಿರಾಸೆ ವ್ಯಕ್ತಿಯ ಬದುಕಿನ ಮೇಲೆ ತೀವ್ರವಾದ ಪರಿಣಾಮ ಬೀರುತ್ತದೆಂಬುದನ್ನು, ಹೆಣ್ಣಿನ ಸೌಂದರ್ಯ

ಗಂಡಿನ ಸಂಯಮಕ್ಕೆ ಮಾರಕವಾಗುತ್ತದೆಂಬುದನ್ನು ಕಾದಂಬರಿಯಲ್ಲಿ ಕಾಣುತ್ತೇವೆ. ದೈಹಿಕ ಅತೃಪ್ತಿ ಮನೋವಿಕಾರಕ್ಕೆ ಎಡೆಮಾಡಿಕೊಡುತ್ತದೆಂಬುದಕ್ಕೆ ಇಲ್ಲಿನ ಲಕ್ಷ್ಮಿಯೇ ಸಾಕ್ಷಿ. ಅತೃಪ್ತಕಾಮಕ್ಕೆ ಸಿಲುಕಿದ ಹೆಣ್ಣಿನ ಬದುಕು ಈ ರೀತಿ ದುರಂತಕ್ಕೀಡಾಗುತ್ತದೆ.

ಮೇಲಿನ ಎರಡೂ ಕಾದಂಬರಿಗಳಲ್ಲಿ ಅತೃಪ್ತ ಲೈಂಗಿಕತೆಯಿಂದ ಹೆಣ್ಣಿನ ಬದುಕು ದುರಂತಕ್ಕಿಡಾದರೆ 'ಮನೆಗೆಬಂದ ಮಹಾಲಕ್ಷ್ಮಿ' ಕಾದಂಬರಿಯಲ್ಲಿ ಕಾಮ ಗುಪ್ತಗಾಮಿನಿಯಾಗಿ ಹರಿಯುತ್ತದೆ. ತನ್ನ ತಾಯಿಯ ಬಗೆಗಿನ ಸಂಶಯ ಸುಳಿಯೊಂದು ಕಾದಂಬರಿಯುದ್ದಕ್ಕೂ ಓಡಾಡುತ್ತದೆ. ತನ್ನ ತಾಯಿಯ ಅಕೃತ್ಯದ ಬಗೆಗೆ ಊರಿನವರು ಪಿಸುಮಾತಾಡುವುದನ್ನು ಕೇಳಿದ ಗೋಪಾಲ ತನ್ನ ತಾಯಿ ಬಗ್ಗೆ ಅನುಮಾನಿಸುತ್ತಾನೆ. ತನ್ನ ತಪ್ಪಿನ ಅರಿವಾದಾಗ ಪರಿತಪಿಸುವ ತಾಯಿ ಇಲ್ಲಿ ಮುಖ್ಯಳಾಗುತ್ತಾಳೆ. 'ಬಯಕೆಯ ಬಂದಿ' ಹಾಗು 'ಚದುರಂಗದ ಮನೆ' ಕಾದಂಬರಿಗಳಲ್ಲಿ ಮನುಷ್ಯನ ಪ್ರಬಲ ಪ್ರವೃತ್ತಿಯಾದ ಕಾಮದ ಪರಿಣಾಮವನ್ನು ಚಿತ್ರಿಸಲಾಗಿದೆ.

ಒಟ್ಟಾರೆ ಈ ಮೇಲಿನ ಕೃತಿಗಳನ್ನು ಅವಲೋಕಿಸಿದಾಗ ಗಮನಿಸಬಹುದಾದ ಅಂಶಗಳೆಂದರೆ ಮನುಷ್ಯ ಕಾಮದಿಂದ ಅತೀತನಾಗಲು ಸಾಧ್ಯವಿಲ್ಲ. ಲೈಂಗಿಕ ಅತೃಪ್ತಿ ಅಥವಾ ಬಯಕೆಯ ಹಿನ್ನೆಲೆಯಲ್ಲಿ ಹೆಣ್ಣಿನ ವರ್ತನೆಗಳು ರೂಪುಗೊಳ್ಳುತ್ತವೆಂಬುದು ನಿಜ. ಸಭ್ಯತೆಯ ಸೋಗಲಾಡಿತನದ ಹಿಂದೆ ವಿಕೃತ ಕಾಮನೆಗಳ ತಾಕಲಾಟವಿರುತ್ತದೆಂಬುದು ಗಮನಾರ್ಹ.

ಸಾಂಸಾರಿಕ ಜಂಜಾಟದಲ್ಲಿ ಹೆಣ್ಣಾಗಲಿ ಗಂಡಾಗಲಿ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಆಯಾ ಪರಿಸರ ಮತ್ತು ಪರಿಸ್ಥಿತಿಗಳು ಸಂಸಾರದ ಮೇಲೆ ಪ್ರಭಾವ ಬೀರುತ್ತವೆ. ಬದುಕಿನ ಸೋಲು-ಗೆಲುವುಗಳಿಗೆ ಸುತ್ತಮುತ್ತಲ ವಾತಾವರಣವೂ ಕಾರಣವಾಗುತ್ತದೆ. ಇಂತಹ ಅಂಶವನ್ನು ವಸ್ತುವಾಗಿಟ್ಟುಕೊಂಡ ತ.ರಾ.ಸು ಅವರ ಕಾದಂಬರಿಗಳು ಸಾಂಸಾರಿಕ ಸಮಸ್ಯೆಗಳನ್ನು ಯಶಸ್ವಿಯಾಗಿ ಚಿತ್ರಿಸಿವೆ. ಆ ತರಹದ ಸಾಂಸಾರಿಕ ಕಾದಂಬರಿಗಳೆಂದು ಗುರುತಿಸಬಹುದಾದುವೆಂದರೆ 'ಅಕ್ಕಮ್ಮನ ಭಾಗ್ಯ', 'ಬೆಂಕಿಯ ಬಲೆ', 'ಪಂಜರದ ಪಕ್ಷಿ', 'ಜೀತದ ಜೀವ', 'ಚಕ್ರತೀರ್ಥ', 'ಬಂಗಾರಿ' ಮುಂತಾದುವು. ಈ ಎಲ್ಲಾ ಕಾದಂಬರಿಗಳ ವಸ್ತು ಬೇರೆ ಬೇರೆಯಾದರೂ ಆಶಯ ಮಾತ್ರ ಒಂದೇ ಆಗಿದೆ. ಇಲ್ಲಿ ಪ್ರಧಾನವಾಗಿ ಗುರುತಿಸಬಹುದಾದ ಸ್ತ್ರೀಯರ ಸಮಸ್ಯೆಗಳೆಂದರೆ ಬಡತನದಲ್ಲಿ ನರಳುವ ಸ್ತ್ರೀಯರು, ಶೋಷಣೆಗೊಳಗಾದವರು, ಮಾನಸಿಕ ತೊಳಲಾಟದ ಸ್ತ್ರೀಯರು, ಸಾವು, ಕಾಮಾಸಕ್ತಿ ಯವರು ಇತ್ಯಾದಿ.

ಬಡತನದಲ್ಲಿ ನೆಮ್ಮದಿಯನ್ನು ಪಡೆದು ಶ್ರೀಮಂತ ಬದುಕಲ್ಲಿ ಕಷ್ಟವನ್ನು ಎದುರಿಸಬೇಕಾದ ಹೆಣ್ಣೊಬ್ಬಳ ಕಥೆ 'ಅಕ್ಕಮ್ಮನ ಭಾಗ್ಯ' ಕಾದಂಬರಿಕಾರರೇ ಮುನ್ನುಡಿಯಲ್ಲಿ ಹೇಳಿರುವಂತೆ. "ವಿಧಿಯಿಂದ ಅಷ್ಟೆ ಅಲ್ಲ ಸಹಮಾನವರಿಂದಲೂ ವಂಚಿತಳಾಗಿ, ಆ ನೋವು ದ್ರೋಹಗಳ ಮಧ್ಯದಲ್ಲೂ ಬಾಳಲೇಬೇಕಾಗಿ ಬಂದ ಹೆಣ್ಣೊಬ್ಬಳ ಕಥೆ"[9]. ಕಾದಂಬರಿಯಲ್ಲಿ ಎರಡು ವರ್ಗಗಳನ್ನು ಗುರುತಿಸಬಹುದು. ಅಕ್ಕಮ್ಮನಿಗೆ ಸಹಾಯ ಮಾಡುವ ವರ್ಗ ಒಂದಾದರೆ,

ತೊಂದರೆ ಕೊಡುವ ವರ್ಗ ಮತ್ತೊಂದು. ಕಾದಂಬರಿಯ ಮುಕ್ಕಾಲು ಭಾಗದ ವರೆಗೆ ಅಕ್ಕಮ್ಮ ಬಡತನದಿಂದಲೆ ನರಳುತ್ತಾಳೆ. ಅಕ್ಕಮ್ಮನ ಹತ್ತುಎಕರೆ ಜಮೀನನ್ನು ತನ್ನದಾಗಿಸಿಕೊಳ್ಳಲು ಯಜ್ಞನಾರಾಯಣ ಮಾಡುವ ಉಪಾಯ ಅಕ್ಕಮ್ಮನ ಮಾನಸಿಕ ತೊಳಲಾಟಕ್ಕೆ ಕಾರಣವಾಗುತ್ತದೆ. "ನೀನು ಹೇಳೋ ಮಾತು ನಿಜ, ಅಕ್ಕಮ್ಮನಂಥ ಜನ ಲಕ್ಷಕ್ಕೊಬ್ಬರು. ಆಕೆಗೆ ಏನು ಮಾಡಬೇಕು ಹೇಳು? ನೀನು ಬರೋವರೆಗೂ ತಿಂಗಳಿಗೆ ಹದಿನೈದು, ನೀನು ಬಂದ ಮೇಲೆ ಇಪ್ಪತ್ತು ರೂಪಾಯಿ ಅಂತ ಹೇಳಿದ್ದೆ. ಆಕೆ ಇವತ್ತಿನವರೆಗೂ ಒಂದು ಕಾಸೂ ಸಂಬಳ ತೆಗೊಂಡಿಲ್ಲ. ಅದಕ್ಕಿಂತ ಮಿಗಿಲಾಗಿ, ಹಡೆದ ತಾಯಿಗಿಂತ ಹೆಚ್ಚಾಗಿ ದುಡಿದಿದ್ದಾಳೆ. ಅದಕ್ಕೇ ನಾನು ಆಕೆ ಸಂಬಳಕ್ಕಿಂತ ಹೆಚ್ಚಾಗಿ ಐವತ್ತು ರೂಪಾಯಿ ಕೊಡಬೇಕು ಅಂತ ಅಂದು ಕೊಂಡಿದೀನಿ" ಎಂದರು ಶಂಕರಭಟ್ಟರು (ಅಕ್ಕಮ್ಮನ ಭಾಗ್ಯ ಪುಟ.೫೬) ಈ ರೀತಿ ಅಕ್ಕಮ್ಮನ ಪ್ರಾಮಾಣಿಕತೆ ಮತ್ತು ನಿಷ್ಠೆಯನ್ನು ಮೆಚ್ಚಿ ಸಹಾಯ ಮಾಡುವ ಜನತೆಯನ್ನು ಅವಳಲ್ಲಿ ಕಾಣುತ್ತೇವೆ. ಬದುಕಲ್ಲಿ ಸತ್ಯ ಪ್ರಮಾಣಿಕತೆ ಗೌರವಿಸುವ, ಒಪ್ಪುವ ಜನತೆ ಇಂದಿಗೂ ಇದ್ದಾರೆಂಬುದಕ್ಕೆ ಅಕ್ಕಮ್ಮನಿಗೆ ಸಹಾಯ ಮಾಡಲು ಮುಂದೆ ಬರುವ ಶಂಕರ ಭಟ್ಟರೆ ನಿದರ್ಶನ. ಅಬಲೆಯಾದ ಹೆಣ್ಣೊಬ್ಬಳ ನಿಷ್ಠೆ ಮತ್ತು ಸಾಮಾಜಿಕತೆಗೆ ಬೆಲೆ ಕೊಡುವ ಜೋಗಿಹಳ್ಳಿ ಒಂದೆಡೆಯಾದರೆ, ಅವಳ ಆಸ್ತಿಗೆ ಇಷ್ಟಪಟ್ಟು ಅಕ್ಕಮ್ಮನ ಮನಸ್ಸಿನ ನೆಮ್ಮದಿ ಹಾಳುಮಾಡುವ ನಾರಾಣಪ್ಪ ಮೊತ್ತೊಂದೆಡೆ. ಈ ಕಾರಣದಿಂದ ಅಕ್ಕಮ್ಮನಿಗೆ ಅತೃಪ್ತ ಸಿರಿತನಕ್ಕಿಂತ ತೃಪ್ತ ಬಡತನವೇ ಲೇಸು ಎಂಬಂತಾಗುತ್ತದೆ. ಅನಿರೀಕ್ಷಿತವಾಗಿ ಬರುವಭಾಗ್ಯ ಅವಳ ಬದುಕನ್ನೆ ವ್ಯಂಗ್ಯಾರ್ಥದಲ್ಲಿ ಧ್ವನಿಸುತ್ತದೆ.

ಬಡತನದ ಬದುಕಿನಲ್ಲಿ ಕಂಡುಕೊಳ್ಳುವ ನೆಮ್ಮದಿ ಶ್ರೀಮಂತಿಕೆಯ ಬದುಕಿನಲ್ಲಿ ಸಾಧ್ಯವಾಗುವುದಿಲ್ಲ. ಬಡತನವಿದ್ದಾಗ ವ್ಯಕ್ತಿಗೆ ಬೆಲೆಕೊಡುವ ಸಮಾಜ ಶ್ರೀಮಂತಿಕೆ ಬಂದಾಗ ಹಣಕ್ಕೆ ಬೆಲೆಕೊಡುತ್ತದೆ. ಆ ಕಾರಣದಿಂದ ವ್ಯಕ್ತಿ ಮಾನಸಿಕ ಅಶಾಂತಿಗೆ ಸಿಲುಕುತ್ತಾನೆಂಬುದಕ್ಕೆ ಅಕ್ಕಮ್ಮನ ಪಾತ್ರ ಉತ್ತಮವಾದ ನಿದರ್ಶನ.

ಬಡತನದ ಬವಣೆಗೆ ಸಿಲುಕಿದ ಶಾಲಾ ಅಧ್ಯಾಪಕನೊಬ್ಬನ ದಾರುಣ ಬದುಕಿನ ಚಿತ್ರಣ 'ಬೆಂಕಿಯ ಬಲೆ ' ಕಾದಂಬರಿಯಲ್ಲಿ ಬರುತ್ತದೆ. ದುರಂತಕ್ಕೀಡಾಗಬೇಕಿದ್ದ ರುಕ್ಮಿಣಿಯ ಬದುಕಿಗೆ ಆಸರೆ ಒದಗಿಸುವ ಉದಾರ ಮನೋಭಾವವನ್ನು ಜೋಯಿಸರು ಹಾಗೂ ಜಾನಕಮ್ಮನವರು ತೋರುತ್ತಾರೆ. ನರಸಿಂಹಮೂರ್ತಿಯ ಕೈಹಿಡಿದ ರುಕ್ಮಿಣಿ ಬಡತನದಲ್ಲಿಯೇ ಬದುಕನ್ನು ಸಾಗಿಸಬೇಕಾಗುತ್ತದೆ. ನಂದಿಹಳ್ಳಿ ಗ್ರಾಮದ ಜನತೆ ಸಹಾಯ ಮಾಡಿದರೆ, ದಾಸನ ಕೊಪ್ಪದ ಜನತೆ ತೊಂದರೆ ಕೊಡುತ್ತಾರೆ. ರುಕ್ಮಿಣಿ ತಂದೆಯ ಸಾವಿನ ದುಃಖವನ್ನು ಮರೆಯುವುದಕ್ಕಾಗಿ ದಾಸನಕೊಪ್ಪಕ್ಕೆ ವರ್ಗಾವಣೆ ಮಾಡಿಸಿಕೊಳ್ಳುತ್ತಾರೆ. ದುಃಖವನ್ನು ಸಹಿಸಿಕೊಳ್ಳುವ ಶಕ್ತಿ ರುಕ್ಮಿಣಿಗಿದ್ದಿದ್ದರೆ ತನ್ನ ಬದುಕಿನ ದುರಂತವನ್ನು ತಪ್ಪಿಸಿಕೊಳ್ಳಬಹುದಿತ್ತು. ರುಕ್ಮಿಣಿಯ ಬದುಕಲ್ಲಿ ದುಷ್ಟಶಕ್ತಿಗಳೇ ಹೆಚ್ಚಾಗಿ ಕೆಲಸಮಾಡುತ್ತವೆ. ಬದುಕು ಹಸನಾಗಲು ಕೆಲವರು ಶ್ರಮಿಸಿದರೆ ಮತ್ತೆ ಕೆಲವು ಹದಗೆಡಿಸಲು ಪ್ರಯತ್ನಿಸುತ್ತಾರೆಂಬ ಸತ್ಯವನ್ನು ಬೆಂಕಿಯ ಬಲೆ ಕಾದಂಬರಿ ಚಿತ್ರಿಸುತ್ತದೆ.

ಸಮಾಜದಲ್ಲಿ ದುಷ್ಟವ್ಯಕ್ತಿಗಳ ಕೈಗೆ ಸಿಕ್ಕಿ ಹೆಣ್ಣು ನಲುಗುತ್ತಾಳೆಂಬುದಕ್ಕೆ ನಿದರ್ಶನ ಕಾದಂಬರಿಯಲ್ಲಿ ಬರುವ ರುಕ್ಮಿಣಿ ಪಾತ್ರವೇ ಸಾಕ್ಷಿ.

ಹೆಣ್ಣಿನ ವಿಭಿನ್ನ ಮನೋಧರ್ಮವನ್ನು 'ಶುಕ್ರವಾರದ ಲಕ್ಷ್ಮಿ' ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ಅನ್ನಪೂರ್ಣಮ್ಮ ಹಾಗೂ ಅಚ್ಚುತಮ್ಮ ಇವರಿಬ್ಬರ ವಿರುದ್ಧ ಸ್ವಭಾವ ಇಲ್ಲಿ ಕಂಡುಬರುತ್ತದೆ. ಮನೆಗೆ ಬಂದ ಸೊಸೆಯಿಂದ ಕುಟುಂಬದಲ್ಲಿ ಉಂಟಾಗುವ ಮಾನಸಿಕ ತೊಳಲಾಟವನ್ನು ಈ ಕಾದಂಬರಿ ಚಿತ್ರಿಸಿದರೆ, ಮನೆಕಟ್ಟುವುದಕ್ಕೆ ಹಾಗೂ ಒಡೆಯುವುದಕ್ಕೆ ಸೊಸೆಯೇ ಕಾರಣ ಎಂಬುದನ್ನು 'ಹೆಣ್ಣುಕಟ್ಟಿದಮನೆ' ಕಾದಂಬರಿ ನಿರೂಪಿಸುತ್ತದೆ. ಬಂಗಾರಿ ಕಾದಂಬರಿಯಲ್ಲಿ ಹಿರಿಯರ ನಿರ್ಲಕ್ಷ್ಯದಿಂದ ಮಕ್ಕಳು ಹಾಳಾಗುವುದನ್ನು ವಿವರಿಸಲಾಗಿದೆ.

ಪುರುಷ ಪ್ರಧಾನವಾದ ಭಾರತೀಯ ಸಮಾಜದಲ್ಲಿ ಹೆಣ್ಣು ಅನೇಕ ರೀತಿಯ ತೊಂದರೆಗಳನ್ನು ಎದುರಿಸಬೇಕಾಗುತ್ತದೆ. ಸಮಸ್ಯೆಗಳ ಸುಳಿಗೆ ಸಿಲುಕಿ ಬದುಕನ್ನು ಸಾಗಿಸುವ ಸ್ತ್ರೀಯರದ್ದು ಒಂದು ವರ್ಗವಾದರೆ, ಸತಂತ್ರವಾಗಿ ಬದುಕನ್ನು ನಡೆಸುವ ವರ್ಗ ಮತ್ತೊಂದು. ಈ ರೀತಿ ಹಲವು ಬಗೆಯ ನರಳಾಟ, ಕೊರಗಾಟ, ಹೋರಾಟಗಳಲ್ಲಿಯೇ ಹೆಣ್ಣಿನ ಬದುಕು ಮುಕ್ತಾಯವಾಗುತ್ತದೆ. ಇದಕ್ಕೆ ಅಪವಾದವೆಂಬಂತೆ ತೃಪ್ತಿದಾಯಕ ಬದುಕನ್ನು ನಡೆಸುವವರೂ ಇದ್ದಾರೆ. ಈ ತರಹದ ಸ್ತ್ರೀ ಸಮಸ್ಯೆಗಳಿಗೆ ಒತ್ತುಕೊಡುವ ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳೆಂದರೆ 'ಗಾಳಿಮಾತು', 'ಬಿಡುಗಡೆಯ ಬೇಡಿ' ಮುಂತಾದುವು.

'ಗಾಳಿಮಾತು', ಕಾದಂಬರಿಯ ಶೀರ್ಷಿಕೆಯೇ ಅದರ ಆಂತರ್ಯವನ್ನು ಹೊರಗೆಡಹುತ್ತದೆ. ಸತ್ಯವಲ್ಲದ ಮಾತನ್ನು ನಂಬಿದ್ದರಿಂದ ಅದರ ಪ್ರತಿಫಲವನ್ನು ಮುಗ್ಧ ಹೆಣ್ಣೊಬ್ಬಳು ಅನುಭವಿಸಬೇಕಾಗುತ್ತದೆ. ಕಾದಂಬರಿ ಹೆಣ್ಣಿನ ಮಾನಸಿಕ ಹೊಯ್ದಾಟವನ್ನು ಪರಿಣಾಮಕಾರಿಯಾಗಿ ನಿರೂಪಿಸುತ್ತದೆ. ಸ್ನೇಹದ ನಡುವೆ ಉಂಟಾಗುವ ಸಂಶಯ ಹೆಣ್ಣಿನ ಬದುಕನ್ನೆ ಬಲಿತೆಗೆದುಕೊಳ್ಳುತ್ತದೆ. ಅಪರಿಚಿತ (ಅವ್ಯಕ್ತ) ವ್ಯಕ್ತಿಯ ಪತ್ರವೊಂದು ಸುಸಂಸ್ಕೃತ ಹೆಣ್ಣಿನ ಬಾಳಿನಲ್ಲಿ ಬಿರುಗಾಳಿಯೆಬ್ಬಿಸಿ ಅವಳ ಭವಿಷ್ಯವನ್ನೆ ಹಾಳುಮಾಡುತ್ತದೆ. ಸುನಂದೆಗೆ ಮಾರುಹೋದ ವ್ಯಕ್ತಿಯೊಬ್ಬ ಬರೆಯುವ ಪತ್ರಗಳು ಅವಳ ಬದುಕಿನ ಹಲವು ಮಜಲುಗಳನ್ನು ನಿರ್ಣಯಿಸುವ ಅಂಶವಾಗುತ್ತದೆ. ಅಪರಿಚಿತ ವ್ಯಕ್ತಿ ಪತ್ರದಿಂದುಂಟಾದ ಭಯ ಸುನಂದೆಯ ಬದುಕಿನ ದುರಂತಕ್ಕೆ ಕಾರಣವಾಗುತ್ತದೆ. ತನಗೆ ಬಂದ ಪತ್ರಗಳನ್ನು ಮನೆಯವರಿಗೆ ತೋರಿಸುವ ಧೈರ್ಯ ಅವಳಲ್ಲಿರುವುದಿಲ್ಲ. ಅವಳ ಹೆದರಿಕೆ ಪತ್ರವನ್ನು ಗುಪ್ತವಾಗಿಡುವಂತೆ ಪ್ರೇರೇಪಿಸುತ್ತದೆ. ಪದೇ ಪದೇ ಬರುವ ಪತ್ರ ಸುನಂದೆಯ ಬದುಕಿನಲ್ಲಿ ಪ್ರಶ್ನೆಯಾಗಿ ಕಾಡಿದರೆ ಅದು ಯಾರದ್ದು ಎಂಬ ಸಂಶಯ ಕನಕಳನ್ನು ಕಾಡುತ್ತದೆ. "ನಿನಗೆ ಆ ವ್ಯಕ್ತಿಯ ಪರಿಚಯವೇ ಇಲ್ಲ, ನೀನು ಅವನ ಮುಖವನ್ನು ನೋಡಿಲ್ಲ ಅಂದಮೇಲೆ ಅವನಿಗೆ ನಿನ್ನ ಪರಿಚಯ ಹೇಗಾಯಿತು?" ಎಂದು ವಸಂತ ಸುನಂದೆಯನ್ನು ಕೇಳಿದಾಗ "ಅದೇ, ಅದು ನನ್ನ ದುರಾದೃಷ್ಟ" ಎಂದು ಪ್ರಥಮವಾಗಿ

ಕಾಗದ ಬಂದಾಗ ಆ ಅವ್ಯಕ್ತ ವ್ಯಕ್ತಿ ಕುರಿತು ಹೇಳುವ ಮಾತು. ಇದು ನೋಡು ನನ್ನ ಪ್ರಾಚೀನ ಕರ್ಮ! ಇದಕ್ಕೆ ನಾನೇನು ಮಾಡಬೇಕೊ, ಏನು ಮಾಡಿದರೆ ಈ ಪೀಡೆ ನನ್ನನ್ನು ಬಿಟ್ಟು ಹೋಗುತ್ತದೆಯೋ ಅದೇ ನನಗೆ ತಿಳಿಯದಾಗಿದೆ. ಈ ನೀಚನ ಮೊದಲ ಕಾಗದ ಬಂದ ದಿನ ನಾನು ಅನುಭವಿಸಿದ ಯಾತನೆ, ಭಯ ಒಂದೊಂದಲ್ಲ ವಸಂತಾ. ಅವತ್ತಿನಿಂದ ಇದ್ದೂ ಸತ್ತವಳ ಹಾಗೆ ಬಾಳುತ್ತಿದ್ದೇನೆ" (ಗಾಳಿಮಾತು ಪುಟ-೭೫) ಹೀಗೆ ಸುನಂದೆ ಅವ್ಯಕ ಪತ್ರದ ಬಗ್ಗೆ ತನ್ನ ಭಯ ಆತಂಕವನ್ನು ವ್ಯಕ್ತಪಡಿಸುವುದಲ್ಲದೆ, ತನ್ನ ಅಂತರಂಗದಲ್ಲಿನ ಸತ್ಯವನ್ನು ಬಹಿರಂಗಪಡಿಸುತ್ತಾಳೆ. ಈ ಅಪರಿಚಿತ ಪತ್ರ ಎರೆಡು ಹೆಣ್ಣುಗಳು ವಿಭಿನ್ನ ರೀತಿಯಲ್ಲಿ ಯೋಚಿಸುವಂತೆ ಮಾಡುತ್ತದೆ. ಅವ್ಯಕ್ತ ಪತ್ರಕ್ಕೆ ವ್ಯಕ್ತಪಾತ್ರಗಳೆರಡರ ತೊಳಲಾಟ ಕಂಡು ಬರುತ್ತದೆ. ಕನ್ಯಾಪರೀಕ್ಷೆಗೆ ಸುನಂದೆಯ ಮನೆಗೆ ಬಂದಾಗ ಕನಕಳ ಹೊಟ್ಟೆಕಿಚ್ಚಿನ ಮಾತುಗಳು ಸುನಂದೆಯ ಚಾರಿತ್ರ್ಯವಧೆಗೆ ಕಾರಣವಾಗುತ್ತದೆ. ಇಂತಹ ಸಂಧಿಗ್ಧ ಪರಿಸ್ಥಿತಿಯಲ್ಲಿ ಸುನಂದೆ ಆತ್ಮಹತ್ಯೆಮಾಡಿ ಕೊಳ್ಳುತ್ತಾಳೆ. ಅರಳಿ ಬಾಳಬೇಕಾದ ಹೆಣ್ಣು ದುರುಂತಕ್ಕೆ ಈಡಾಗಿ ಎಲ್ಲರ ಅನುಕಂಪದಿಂದ ಕೂಡಿದ ಪಶ್ಚಾತ್ತಾಪಕ್ಕೆ ಕಾರಣವಾಗುತ್ತಾಳೆ.

ಸ್ತ್ರೀಸ್ವಾತಂತ್ರ್ಯದಂತಹ ಸಂಕೀರ್ಣ ಸಮಸ್ಯೆಯನ್ನು 'ಬಿಡುಗಡೆಯ ಬೇಡಿ' ಕಾದಂಬರಿ ಒಳಗೊಂಡಿದೆ. ಆರ್ಥಿಕ ಸ್ವಾತಂತ್ರ್ಯ ಬಯಸುವ ಹೆಣ್ಣು ಅದನ್ನು ತಿರಸ್ಕರಿಸುವ ಗಂಡು ಈ ವಿರೋಧಾಭಿಪ್ರಾಯಗಳೇ ಕುಟುಂಬವೊಂದರ ವಿಘಟನೆಗೆ ಕಾರಣವಾಗುತ್ತದೆ. ಇಲ್ಲಿನ ಬಿಡುಗಡೆಯು ತಕ್ಷಣದ್ದಾದರೂ ಯಾಂತ್ರಿಕವಾಗಿ ಅದೇ ಬಂಧನವಾಗುತ್ತದೆ. ನಾಯಕಿ ಪ್ರಭಾವತಿಯ ಒರಟು ಸ್ವಭಾವ ಅವಳ ಬದುಕಿನ ದುರಂತಕ್ಕೆ ಕಾರಣವಾಗುತ್ತದೆ. ಪ್ರಭಾವತಿಯ ಈ ಹಠಸ್ವಭಾವ ತನ್ನ ಬಾಳಸಂಗಾತಿ ಶಾಂತರಾಮನನ್ನು ತಾನೇ ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯವನ್ನು ಕಲ್ಪಿಸುತ್ತದೆ. ಈ ವಿಷಯದಲ್ಲಿ ಪ್ರಭಾವತಿ ತನ್ನ ತಂದೆಯ ಮಾತಿಗೆ ಬೆಲೆ ಕೊಡುವುದಿಲ್ಲ. ಎಲ್ಲ ವಿಷಯದಲ್ಲೂ ಮಗಳಿಗೆ ಸ್ವಾತಂತ್ರ್ಯವನ್ನು ಕೊಟ್ಟ ತಂದೆ ವಿವಾಹದ ವಿಷಯದಲ್ಲಿ ಹಠಮಾಡುತ್ತಾನೆ. ಶಾಂತರಾಮನಿಗಾಗಿ ಮನೆಯನ್ನು ತ್ಯಜಿಸುವ ಪ್ರಭಾವತಿ, ಬದುಕಿನಲ್ಲಿ ಎದುರಾಗುವ ಕಷ್ಟಗಳಿಗಾಗಿ ಬೆಂಗಳೂರನ್ನು ಬಿಟ್ಟು ಮುಂಬೈಗೆ ಬರುತ್ತಾಳೆ. ಪ್ರಭಾವತಿಗೆ ಪ್ರೀತಿಗಿಂತ ಸ್ವಚ್ಛಂದ ಬದುಕು ಮುಖ್ಯವಾಗುತ್ತದೆ. ನಿಸರ್ಗ ಸಹಜವಾದ ಈ ಗುಣವನ್ನು ಪರಸ್ಪರ ಅರಿಯದಿದ್ದರೆ ಹಠ ಮತ್ತು ದ್ವೇಷ ಪ್ರೀತಿಯ ಸ್ಥಾನವನ್ನು ಆಕ್ರಮಿಸುತ್ತವೆ. ಇದಕ್ಕೆ ಪ್ರಭಾವತಿ ಹೊರತಾದವಳಲ್ಲ. ಮುಂಬೈಗೆ ಬಂದ ಪ್ರಭಾವತಿ ಮತ್ತಷ್ಟು ಜಂಜಾಟ ಮತ್ತು ಸಂಘರ್ಷಕ್ಕೆ ಸಿಲುಕುತ್ತಾಳೆ. ವಿವಾಹಿತಳಾದ ತಾನು ಮಂಗಳಸೂತ್ರವನ್ನು ಹಾಕಿಕೊಳ್ಳಬೇಕೆಂಬ ಅರಿವು ಇಲ್ಲದಿದ್ದಾಗ, ಅದೊಂದು ಬಂಧನವೆಂದು ಭಾವಿಸಿದ ಪ್ರಭಾವತಿಗೆ, ಅದೊಂದು ರಕ್ಷೆ ಎಂದು ಅರಿವನ್ನು ಮೂಡಿಸುವವಳು ಲೀಲ. ಆರ್ಥಿಕ ಸ್ವಾವಲಂಬನೆಯ ಬಗೆಗೆ ಪ್ಲೋರಾ ನೀಡುವ ಸಲಹೆ ಪ್ರಭಾವತಿಗೆ ಇಷ್ಟವಾಗುತ್ತದೆ. ಪುರುಷ ಪ್ರಧಾನ ಸಮಾಜದ ಪ್ರಾಬಲ್ಯವನ್ನು

ಪ್ರತಿಭಟಿಸಿ, ಸ್ವಾವಲಂಬಿಯಾಗುವ ಹೆಣ್ಣಿನ ಸಂಘರ್ಷಮಯ ಹೋರಾಟದ ಸಂಕೀರ್ಣತೆ ಮತ್ತು ಸೂಕ್ಷ್ಮತೆಯನ್ನು ಕಾದಂಬರಿಕಾರರು ಯಶಸ್ವಿಯಾಗಿ ಚಿತ್ರಿಸಿದ್ದಾರೆ.

ಪ್ರಭಾವತಿ ವೈವಾಹಿಕ ಸ್ವಾತಂತ್ರ್ಯಕ್ಕಾಗಿ ಮನೆಯನ್ನು, ಆರ್ಥಿಕ ಸ್ವಾತಂತ್ರ್ಯಕ್ಕಾಗಿ ಪತಿಯನ್ನು ತ್ಯಜಿಸುತ್ತಾಳೆ. ಮಂಗಳಸೂತ್ರದ ಬೆಲೆಯೇ ಇವಳಿಗೆ ಗೊತ್ತಿಲ್ಲ. ಗೆಳತಿ ಫ್ಲೋರಾಳ ಮಾತಿಗೆ ಬೆಲೆಕೊಟ್ಟಷ್ಟು ಪತಿಯ ಮಾತಿಗೆ ಬೆಲೆಕೊಡುವುದಿಲ್ಲ. ಎಲ್ಲಕ್ಕಿಂತ ಮುಖ್ಯವಾಗಿ ಆರ್ಥಿಕ ಸ್ವಾತಂತ್ರ್ಯವೊಂದೇ ಅವಳಿಗೆ ಬೇಕಾದದ್ದು. ಪಾಶ್ಚಾತ್ಯ ಸಂಸ್ಕೃತಿಗೆ ಮನಸೋತ ಫ್ಲೋರಾಳಂತೆ ನಾನು ಬದುಕಬೇಕೆಂಬ ಆಸೆ ಇವಳದು. ಆದರೆ ಆ ಆಸೆ ಈಡೇರುವುದಿಲ್ಲ ಅತ್ತ ಪತಿಯ ಸಹಚರಿಯಾದ ಲೀಲಾಳಂತೆ ಬದುಕಲೂ ಆಗದೇ ಮಾನಸಿಕ ತೋಳಲಾಟಕ್ಕೆ ಸಿಲುಕುತ್ತಾಳೆ. ಸ್ವತಂತ್ರವಾಗಿ ಬದುಕುವ ಫ್ಲೋರಾ, ಆದರ್ಶ ಜೀವನಸಾಗಿಸುವ ಲೀಲ, ಇವರಿಬ್ಬರಿಗಿಂತಲೂ ಭಿನ್ನವಾದ ಶಾಲಿನಿ, ಹಠದ ಸ್ವಭಾವದ ಪ್ರಭಾವತಿ, ಹೀಗೆ ವಿಭಿನ್ನ ಮನೋಧರ್ಮದ ಸ್ತ್ರೀಯರು ಒಂದಾಗಿ ಬದುಕುವುದು ಆಶ್ಚರ್ಯವೆನಿಸುತ್ತದೆ. ಪಾಶ್ಚಾತ್ಯ ಸಂಸ್ಕೃತಿ ಪ್ರತೀಕವಾದ ಫ್ಲೋರಳದು ಸ್ವಚ್ಛಂದವಾದ ಬದುಕು ಭಾರತೀಯ ಸಂಸ್ಕೃತಿಯನ್ನು ಎತ್ತಿಹಿಡಿಯುವವಳು ಲೀಲ, ಕಮ್ಯೂನಿಸ್ಟ್ ಮನೋಭಾವದ ಶಾಲಿನಿ ಇವರ ಬದುಕು ಅರಿವಿಗೆ ಬರುವುದು ಪ್ರಭಾವತಿಯಿಂದ. ಟೈಂಪಾಸ್ ಕೆಲಸಕ್ಕೆ ಸೇರಿದ ಪ್ರಭಾವತಿಗೆ ಆರ್ಥಿಕಸ್ವಾತಂತ್ರ್ಯ ಸಿಕ್ಕರೂ ಮಾನಸಿಕ ನೆಮ್ಮದಿ ದೊರೆಯುವುದಿಲ್ಲ. ಫ್ಲೋರಾ ಮತ್ತು ಲೀಲ ಇವರಿಬ್ಬರೂ ಪ್ರಭಾವತಿಗೆ ಆತ್ಮೀಯರು. ಅತ್ತೆಯ ಕಾಟವನ್ನು ತಾಳಲಾರದೆ ಮೆಚ್ಚಿದ ಪತಿಯನ್ನು ತೊರೆದು ಕಮ್ಯೂನಿಸ್ಟ್‌ಪಕ್ಷ ಸೇರುವ ಶಾಲಿನಿ, ಸ್ತ್ರೀಸ್ವಾತಂತ್ರ್ಯದ ದೃಷ್ಟಿಯಿಂದ ಮಹತ್ತರವಾದ ಪಾತ್ರ.

ಭಾರತೀಯ ಸಮಾಜದಲ್ಲಿ ಸಾಂಪ್ರದಾಯಿಕ ಮಿತಿಯಲ್ಲಿ ಬದುಕುವ ಹೆಣ್ಣಿನ ವ್ಯಕ್ತಿಗತ ವಿಚಾರಗಳಿಗೆ 'ಬಿಡುಗಡೆಯ ಬೇಡಿ' ಒತ್ತು ಕೊಡುತ್ತದೆ. ಮಧ್ಯಮ ವರ್ಗದ ಸುಶಿಕ್ಷಿತ ಸ್ತ್ರೀಯ ಸ್ವಾತಂತ್ರ್ಯದ ಬಯಕೆ ಅದಕ್ಕೆ ಒಪ್ಪದಿರುವ ಪುರುಷನಿಂದಾಗಿ ಸಂಘರ್ಷವೇರ್ಪಟ್ಟು ಸಂಸಾರ (ಕುಟುಂಬ) ವಿಘಟನೆಯಾಗುವ ಚಿತ್ರಣವನ್ನು ಕಾದಂಬರಿಯಲ್ಲಿ ಪರಿಣಾಮಕಾರಿಯಾಗಿ ಚಿತ್ರಿಸಲಾಗಿದೆ. "ಬಿಡುಗಡೆಯ ಬೇಡಿ' ಅಂದರೆ ಪುರುಷನ ಬಂಧನದಿಂದ ಬಿಡುಗಡೆಹೊಂದಿ ಸ್ವತಂತ್ರ ಪಡೆಯುವುದು. ಬೇಡಿ ಅಂದರೆ ಕೋಳ ಎನ್ನುವ ಅರ್ಥ. ಬಿಡುಗಡೆ ಹೊಂದಿದರೂ ಮತ್ತೊಂದು ರೀತಿಯ ಬಂಧನಕ್ಕೊಳಗಾಗುವದು. ಕಾದಂಬರಿಕಾರರೇ ಮುನ್ನುಡಿಯಲ್ಲಿ ಹೇಳಿರುವಂತೆ, "ಸ್ವಾತಂತ್ರ್ಯವು ತನ್ನ ಸಹಜ ಸ್ವರೂಪವನ್ನು ಕಳೆದುಕೊಂಡು ವಿಕಾರವಾಗುವುದನ್ನು ಪ್ರತಿಬಿಂಬಿಸುವ ಯಶಸ್ವಿ ಕೃತಿ". ಒಟ್ಟಾರೆ ಚಲನಶೀಲವಾದ ಸಮಾಜದಲ್ಲಿ ಹೆಣ್ಣು ತನ್ನ ಬದುಕಲ್ಲಿ ಪರಿವರ್ತನೆಯನ್ನು ಬಯಸಿ ಹೋರಾಟ ಮಾಡುವುದು ಕಾದಂಬರಿಯಲ್ಲಿ ಮುಖ್ಯವಾಗುತ್ತದೆ.

ಪ್ರಗತಿಶೀಲ ಲೇಖಕರು ಪ್ರಧಾನವಾಗಿ ಹೆಣ್ಣಿನ ಸಮಸ್ಯೆಗಳನ್ನೇ ತಮ್ಮ ಕತೆ ಕಾದಂಬರಿಗಳಲ್ಲಿ ಬಿಂಬಿಸಿದ್ದಾರೆ. ಉದಾ: ಅ.ನ.ಕೃ ಅವರ 'ನಗ್ನಸತ್ಯ', 'ಶನಿಸಂತಾನ' ಮುಂತಾದುವು. ಅದರಲ್ಲೂ

ಮುಖ್ಯವಾಗಿ ವೇಶ್ಯಾಸಮಸ್ಯೆಯನ್ನು ಎತ್ತಿಕೊಂಡು ಕೃತಿಗಳನ್ನು ರಚಿಸಿದ್ದಾರೆ. ವೇಶ್ಯಾ ಸಮಸ್ಯೆ ಬಿಂಬಿಸುವ ತ.ರಾ.ಸು. ಅವರ ಸಾಮಾಜಿಕ ಕಾದಂಬರಿ 'ಮಸಣದ ಹೂವು'.

ಪುರುಷನ (ನರಸಿಂಹರೆಡ್ಡಿ) ಮೋಸಕ್ಕೆ ಬಲಿಯಾಗುವ ಪಾರ್ವತಿ ಅನಿವಾರ್ಯವಾಗಿ ವೇಶ್ಯಾಗೃಹ ಪ್ರವೇಶಿಸುತ್ತಾಳೆ. ಸ್ವಂತ ಬಯಕೆಗೆ ಪ್ರಾಮುಖ್ಯತೆ ನೀಡಿದ ಉನ್ನತ ವರ್ಗ ಹಾಗೂ ಶ್ರೀಮಂತ ವರ್ಗ ಮುಗ್ಧ ಹೆಣ್ಣುಗಳನ್ನು ದುರುಪಯೋಗಪಡಿಸಿಕೊಳ್ಳುತ್ತದೆ. ಹೆಣ್ಣನ್ನು ಬಲಾತ್ಕರಿಸುವ ವರ್ಗ ಒಂದೆಡೆಯಾದರೆ, ಅವಳನ್ನು ಕಂಡು ಅಪಹಾಸ್ಯ ಹಾಗೂ ಗೇಲಿ ಮಾಡುವ ವರ್ಗ ಮತ್ತೊಂದೆಡೆ, ಆ ಕಾರಣದಿಂದ ಹೆಣ್ಣು ವೇಶ್ಯೆಯಾಗುತ್ತಾಳೆ. ಸಾಮಾಜಿಕವಾಗಿ ಹೆಣ್ಣು ಕಂಡು ಕೊಳ್ಳುವ ಈ ದಾರಿಯೇ ಅವಳ ದುರಂತಕ್ಕೂ ಕಾರಣವಾಗುತ್ತದೆ. ಯಾರದೋ ಕಾಮನೆಗೆ ಬಲಿಯಾಗುವ ಹೆಣ್ಣು ನಡೆಸುವ ಅಸಹನೀಯ ಬದುಕೇ 'ಮಸಣದ ಹೂವು' ಕಾದಂಬರಿ ವಸ್ತು. ಇಲ್ಲಿನ ಪಾರ್ವತಿಯಷ್ಟೇ ಅಲ್ಲ ಉಳಿದೆಲ್ಲ ಹೆಣ್ಣುಗಳ ಜೀವನ ಕೆಟ್ಟ ಸಾಮಾಜಿಕ ವ್ಯವಸ್ಥೆಯಿಂದಲೇ ರೂಪುಗೊಳ್ಳುತ್ತವೆ. ಆದ ಕಾರಣ ಈ ಕಾದಂಬರಿಯಲ್ಲಿ ಬೇರೆ ಪಾತ್ರಗಳಂತೆ ಸಮಾಜವೂ ಒಂದು ಮುಖ್ಯ ಪಾತ್ರವಾಗುತ್ತದೆ.

ಬಡತನ, ನಿರುದ್ಯೋಗ, ಐಷಾರಾಮಿ ಬದುಕು, ಹೆಣ್ಣನ್ನು ಅಡ್ಡದಾರಿಗೆಳೆಯುತ್ತವೆ. ವೈಯಕ್ತಿಕ ಕಾರಣ ಮತ್ತು ಸಾಮಾಜಿಕ ಕಾರಣಗಳೆರಡೂ ಈ ಕಾದಂಬರಿಯಲ್ಲಿ ಹೆಣ್ಣಿನ ಬದುಕಿನ ಮೇಲೆ ಪ್ರಭಾವ ಬೀರುತ್ತವೆ. ಪಾರ್ವತಿ, ನಾಗಿ ಮುಂತಾದವರು. ವೇಶ್ಯೆಯರಾಗಲು ಅಧಿಕಾರ ವರ್ಗದ ದಬ್ಬಾಳಿಕೆ ಕಾರಣವಾದರೆ, ರೂಪವತಿಯಾದ ಸರಸ್ವತಿ ಕಾಮುಕರಿಗೆ ಬಲಿಯಾಗುತ್ತಾಳೆ. ಇಂತಹ ಸ್ತ್ರೀಯರಿಗೆ ವೇಶ್ಯಾವೃತ್ತಿ ಅನಿವಾರ್ಯವಾಗುತ್ತದೆ. ಗೌರವಾನ್ವಿತ ವೃತ್ತಿಯಲ್ಲಿರುವ ಶಾಂತ, ಮುಗ್ಧ ಹುಡುಗಿಯರನ್ನು ಬಲಿಕೊಡುವ ರಾಜಮ್ಮನಂತವಳೂ ವೇಶ್ಯಾವೃತ್ತಿ ಬೆಳೆಯಲು ಕಾರಣರಾಗುತ್ತಾರೆ. ಕಾಲೇಜಿನಲ್ಲಿ ಕಲಿಯುವ ಹುಡುಗಿಯರೂ ಈ ಮಾಯಾ ಜಾಲಕ್ಕೆ ಸಿಲುಕುತ್ತಾರೆ. ವೈಯಕ್ತಿಕ ಕಾರಣಕ್ಕಿಂತ ಹೆಚ್ಚಾಗಿ ಸಾಮಾಜಿಕ ಕಾರಣಗಳೇ ಹೆಣ್ಣು ಮಕ್ಕಳನ್ನು ವೇಶ್ಯೆಯರನ್ನಾಗಿ ಮಾಡುತ್ತವೆ. ಸುಂದರ ಹೆಣ್ಣು ಮಕ್ಕಳನ್ನು ಹುಡುಕಿ ತರುವ ಸೋಮ, ಪುರುಷರನ್ನು ಕರೆದು ತರುವ ಸಿಂಗಾರುವಿನಂತಹ ಸಿರಪಕಡುಗಳು ವೇಶ್ಯಾವೃತ್ತಿಯ ಅಭಿವೃದ್ಧಿಗೆ ಸಹಕರಿಸುತ್ತಾರೆ. ಈ ರೀತಿ ಹೆಣ್ಣನ್ನು ಮಾರಾಟಮಾಡುವ ದಂಧೆ ಅವ್ಯಾಹತವಾಗಿ ನಡೆಯುತ್ತಲೇ ಬಂದಿದೆ.

ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳಲ್ಲಿನ ಸ್ತ್ರೀಯರು ನಾನಾ ತರಹದ ಸಮಸ್ಯೆಗೆ ಸಿಲುಕಿರುವವರೇ. ಪ್ರಗತಿಶೀಲ ಸಂದರ್ಭದ ಬರಹಗಾರರೆಲ್ಲ ಪ್ರಧಾನವಾಗಿ ಹೆಣ್ಣಿನ ಸಮಸ್ಯೆಗಳನ್ನೆ ಪ್ರಧಾನವಾಗಿರಿಸಿಕೊಂಡು ಕತೆ ಕಾದಂಬರಿಗಳನ್ನು ರಚಿಸಿದರು. ಉದಾ: ಕಟ್ಟೀಮನಿಯವರ 'ಬೀದಿಯಲ್ಲಿಬಿದ್ದವಳು'. ಈ ಕಾದಂಬರಿ ವೇಶ್ಯೆಯೊಬ್ಬಳ ಬದುಕನ್ನು ಕುರಿತಾದದ್ದು. ನವೋದಯ ಸಂದರ್ಭದಲ್ಲಿ ಸಂಪ್ರದಾಯದ ಚೌಕಟ್ಟಿಲ್ಲಿಯೇ ಬೆಳೆದ ಹೆಣ್ಣು ಪ್ರಗತಿಶೀಲ ಸಂದರ್ಭದಲ್ಲಿ ಅದನ್ನು

ಧಿಕ್ಕರಿಸುತ್ತಾಳೆ. ಉದಾಃ ಕಾರಂತರು ತಮ್ಮ ಕಾದಂಬರಿಗಳಲ್ಲಿ ಚಿತ್ರಿಸುವ ಸ್ತ್ರೀಪ್ರಪಂಚ ಸಂಪ್ರದಾಯದ್ದು. 'ಮರಳಿಮಣ್ಣಿಗೆ' ಕಾದಂಬರಿಯಲ್ಲಿ ಸ್ತ್ರೀಯರು, 'ಸರಸಮ್ಮನ ಸಮಾಧಿ'ಯಲ್ಲಿನ ಸ್ತ್ರೀಯರು ಸಂಪ್ರದಾಯದ ಜಾಡನ್ನು ಮೀರದೆ ನಾಗರಿಕ ಪ್ರಪಂಚದ ಸಾತ್ವಿಕಳಾಗಿ ಕಂಡು ಬರುತ್ತಾಳೆ. ವೇಶ್ಯೆಯನ್ನು ಕಾರಂತರು ಚಿತ್ರಿಸುವ ರೀತಿಯು ಪ್ರಗತಿಶೀಲರಿಗಿಂತ ಭಿನ್ನವಾಗಿದೆ. ಪ್ರಗತಿಶೀಲ ಕಾದಂಬರಿಗಳಲ್ಲಿನ ವೇಶ್ಯೆ ಹಣಕ್ಕಾಗಿ, ಐಷಾರಾಮದ ಮೋಜಿಗಾಗಿ ತನ್ನ ದೇಹ ಮಾರಾಟ ಮಾಡುವವಳಾಗಿರುತ್ತಾಳೆ. ಮಾಸ್ತಿಯವರ ಸಾಮಾಜಿಕ ಕತೆಗಳಲ್ಲಿನ ಸ್ತ್ರೀ ಪ್ರಪಂಚಕ್ಕೂ, ಪ್ರಗತಿಶೀಲರ ಸ್ತ್ರೀ ಪ್ರಪಂಚಕ್ಕೂ ತುಂಬಾ ವ್ಯತ್ಯಾಸವಿದೆ. ಉದಾಃ ನಿಜಗಲ್ಲಿನ ರಾಣಿಯಲ್ಲಿ ತ್ಯಾಗದ ಸಂಕೇತವಾಗಿ ಸ್ತ್ರೀ ಕಂಡು ಬಂದರೆ ಕಟ್ಟೀಮನಿಯವರ ಅಜ್ಞಾತವಾಸಿ ಕಥೆಯಲ್ಲಿನ ಸ್ತ್ರೀ ಹೋರಾಟದ ಕೆಚ್ಚನ್ನು ಹೊಂದಿರುವ ಮಹಿಳೆಯಾಗಿ ಕಂಡುಬರುತ್ತಾಳೆ.

ಹೀಗೆ ಮೇಲಿನ ಅವಲೋಕನದಂತೆ ತ.ರಾ.ಸು ಅವರ ಕಾದಂಬರಿಗಳಲ್ಲಿನ ಸ್ತ್ರೀಸಂವೇದನೆ ಕುರಿತು ವಿಶ್ಲೇಷಿಸಿದರೆ, ಅಲ್ಲಿನ ಸ್ತ್ರೀಯರು ವಿವಿಧ ರೀತಿಯ ಸಮಸ್ಯೆಗೆ, ಬಂಧನಕ್ಕೆ ಸಿಲುಕಿರುವವರು. 'ಬಿಡುಗಡೆಯ ಬೇಡಿ' ಕಾದಂಬರಿಯಲ್ಲಿ ಹೆಣ್ಣು ಸ್ವಾತಂತ್ರ್ಯಕ್ಕಾಗಿ ಹಂಬಲಿಸುವ, ಪುರುಷನ ಬಂಧನದಿಂದ ಬಿಡುಗಡೆ ಬಯಸುವವಳು. ಮಂಗಳಸೂತ್ರ ಪವಿತ್ರವಾದುದೆಂಬುದನ್ನು ತಿರಸ್ಕರಿಸಿ ಅದನ್ನು ಬಂಧನವೆಂದು ಭಾವಿಸುತ್ತಾಳೆ. ವೈವಾಹಿಕ ಸ್ವಾತಂತ್ರ್ಯ ಮತ್ತು ಆರ್ಥಿಕ ಸ್ವಾತಂತ್ರ್ಯವನ್ನು ಬಯಸುವ ಹೆಣ್ಣು ಪ್ರಭಾವತಿ ಯಾವ ವಿವೇಚನಗೂ ಒತ್ತು ಕೊಡದೆ ಆರ್ಥಿಕ ಸ್ವಾತಂತ್ರ್ಯವಷ್ಟೆ ಅವಳಿಗೆ ಮುಖ್ಯವಾಗುತ್ತದೆ. ತನ್ನ ಪತಿಯ ಮಾತಿಗೆ ಬೆಲೆಕೊಟ್ಟಿದ್ದರೆ ಅವಳ ಬದುಕು ದುರಂತಕ್ಕೀಡಾಗುತ್ತಿರಲಿಲ್ಲವೇನೋ. ಆದರೆ ತನ್ನ ಹಠವೇ ಗೆಲ್ಲಬೇಕೆನ್ನುವ ಸ್ವಭಾವದ ಹೆಣ್ಣು ಪ್ರಭಾವತಿ, ಪ್ರಭಾವತಿಯ ಈ ಸ್ವಭಾವಕ್ಕೆ ಕಾರಣ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವ. ಪಾಶ್ಚಾತ್ಯ ಸಂಸ್ಕೃತಿ ಪ್ರಭಾವಕ್ಕೊಳಗಾದ ಶಾಲಿನಿ, ಹೀಗೆ ಮೂರು ಸಂಸ್ಕೃತಿಯನ್ನು ಬಿಂಬಿಸುವ ಸ್ತ್ರೀಯರು ಈ ಕಾದಂಬರಿಯಲ್ಲಿ ಕಂಡು ಬರುತ್ತಾರೆ. ಮೂಲತಃ ಕಮ್ಯೂನಿಸ್ಟ್ ಪ್ರಭಾವಕ್ಕೊಳಗಾಗಿದ್ದ ತ.ರಾ.ಸು ಅವರು ಅದೇ ಹೊತ್ತಿಗೆ ಭಾರತೀಯ ಸಂಸ್ಕೃತಿಯ ಮೌಲ್ಯಗಳನ್ನು ಎತ್ತಿ ಹಿಡಿಯಬೇಕಾಗಿತ್ತು. ಆ ವೇಳೆಗಾಗಲೇ ಪಾಶ್ಚಾತ್ಯ ಸಂಸ್ಕೃತಿ ನಿಧಾನವಾಗಿ ಭಾರತೀಯರ ಬದುಕಲ್ಲಿ ಪ್ರವೇಶಿಸಿತ್ತು. ಆರಂಭದ ಸ್ತ್ರೀಸಂವೇದನಾ ಪರವಾದ 'ಇಂದಿರಾ', 'ವಾಗ್ದೇವಿ' ಕಾದಂಬರಿಗಳಲ್ಲಿ ಹಾಗೂ ನವೋದಯದ 'ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳಲ್ಲಿ ಪಾಶ್ಚಾತ್ಯ ಸಂಸ್ಕೃತಿ ಮತ್ತು ಆಧುನಿಕ ಶಿಕ್ಷಣ, ಪ್ರಭಾವ, ಪ್ರವೇಶಿಕೆಯನ್ನು ಪಡೆದಿತ್ತು. ಹಾಗಾಗಿ ತ.ರಾ.ಸು ಅವರ ಸ್ತ್ರೀ ಸಂವೇದನಾ ಪರವಾದ ಸಾಮಾಜಿಕ ಕಾದಂಬರಿಗಳಲ್ಲಿ ಇಂತಹ ಪಾತ್ರಗಳನ್ನು ಸೃಷ್ಟಿಸುವುದರ ಅನಿವಾರ್ಯತೆ ಕೂಡ ಇತ್ತು.

ಮುಂದುವರೆದು ಪರುಷಪ್ರಧಾನ ಸಮಾಜದಲ್ಲಿ ಹೆಣ್ಣು ಎದುರಿಸಬೇಕಾದ ಸಮಸ್ಯೆಗಳು ಹಲವು. ಇಂತಹ ಸಮಸ್ಯೆಗಳ ಸುಳಿಗೆ ಸಿಲುಕಿ ತಮ್ಮ ಬದುಕಿನಲ್ಲಿ ಅಂತ್ಯಕಾಣುವವರೂ ಇವರ ಕಾದಂಬರಿಗಳಲ್ಲಿ ಬಂದು ಹೋಗುತ್ತಾರೆ. 'ಗಾಳಿಮಾತು' ಕಾದಂಬರಿಯಲ್ಲಿನ ಸುನಂದೆ ಸ್ನೇಹದ

ನಡುವಿನ ಸಂಶಯ ಸುನಂದೆಯ ಬದುಕು ಮತ್ತು ಭವಿಷ್ಯವನ್ನೇ ಹಾಳುಮಾಡುತ್ತದೆ. ಕನಕಳ ಹೊಟ್ಟೆಕಿಚ್ಚಿನ ಮಾತು ಈ ರೀತಿ ಕಾದಂಬರಿಯಲ್ಲಿ ಪ್ರಯೋಗವಾಗಿದೆ ಕನ್ಯಾ ಪರೀಕ್ಷೆಗೆ ಬಂದವರ ಎದುರಲ್ಲಿ ಸುನಂದೆಗೆ ಬರುತ್ತಿದ್ದ ಅವ್ಯಕ್ತ ಪತ್ರದ ವಿಷಯವನ್ನೆ ಸಂಶಯ ಬರುವ ರೀತಿಯಲ್ಲಿ ಹೇಳುತ್ತಾಳೆ. ಅದಕ್ಕೆ ಕಾರಣ ಕನಕಳ ಹೊಟ್ಟೆಕಿಚ್ಚು. "ಅದಕ್ಕೆ ಕನಕಮ್ಮ ಸುನಂದ ಮಾಡೋ ಕೆಲಸಾನ ಬಾಯಿಬಿಟ್ಟು ಹೇಳೋಕೆ ನನಗೇ ನಾಚಿಕೆಯಾಗುತ್ತೆ. ಮೊದ ಮೊದಲು ಅವಳು ಒಳ್ಳೋಳೇ ಆಗಿದ್ದಳು. ಈಚಿಚೆಗೆ ತುಂಬಾ ಕೆಟ್ಟು ಹೋಗಿದ್ದಾಳೆ. ಅವಳು ಯಾರನ್ನೋ ನೋಡಿಕೊಂಡಿದ್ದಾಳೆ. ಅವಳ ಲವರ್ ಅವಳಿಗೆ ಸ್ಕೂಲು ಅಡ್ರೆಸ್ಸಿಗೆ ದಿನಕ್ಕೊಂದು ಕಾಗದ ಬರಿತಿರ್‍ತಾನೆ. ನಾವೆಲ್ಲ ಅವಳಿಗೆ ಎಷ್ಟೋ ಬುದ್ಧಿ ಹೇಳಿದೆವು. ಆದ್ರೆ-ಮೂರು ಬಿಟ್ಟೋರು ದೇವರಗಿಂತ ದೊಡ್ಡೋರು ಅನ್ತಾರೆ. ನೋಡಿ ಆ ಮಾತು ಎಳ್ಳಷ್ಟೂ ಸುಳ್ಳಲ್ಲ. ಅವಳಿಗೆ ಬುದ್ಧಿ ಹೇಳಲಿಕ್ಕೆ ಹೋಗಿ ಅವಳ ಕೈಲಿ ಬೈಸಿಕೊಂಡಿದ್ದೂಂದೇ ಆಯಿತು. ಈಗ ನಮ್ಮ ಕೈಲಿ ಅವಳು ಮಾತು ಕೂಡ ಆಡೊಲ್ಲ ಅಂತ ಹೇಳಿದಳು"(ಗಾಳಿಮಾತು ಪುಟ ೧೨೧) ಈ ರೀತಿ ಕನಕಳಾಡುವ ಗಾಳಿಮಾತು (ಸುಳ್ಳು). ಕನ್ಯಾಪರೀಕ್ಷೆಗೆ ಬಂದವರು ಸುನಂದೆಯ ಮನಗೆ ಹೋಗದಂತೆ ತಡೆಯುತ್ತದೆ. ಅಪರಿಚಿತ ಪತ್ರವೊಂದು ಸುನಂದೆಯ ಬದುಕಲ್ಲಿ ಬಿರುಗಾಳಿಯೆಬ್ಬಿಸುತ್ತದೆ. ಎಲ್ಲಕಾಲಕ್ಕೆ ಕನಕಳಂತಹ ಹೊಟ್ಟೆಕಿಚ್ಚಿನ ಸ್ವಭಾವದವರು ನಮ್ಮ ಸಮಾಜದಲ್ಲಿ ಕಂಡು ಬರುತ್ತಾರೆ.

ಹೆಣ್ಣಿನ ಅನೇಕ ಸಮಸ್ಯೆಗಳಿಗೆ ಪುರುಷನೇ ಕಾರಣನಾಗುತ್ತಾನೆ. ಸ್ತ್ರೀಗೆ ತನಗೆ ಸರಿಸಮಾನವಾದ ಸ್ಥಾನಮಾನ ಕಲ್ಪಿಸಲಾರದ ಮನಸ್ಸುಗಳು ಒಂದೆಡೆಯಾದರೆ, ಸ್ತ್ರೀಯನ್ನು ಪರೋಕ್ಷವಾಗಿ ಮತ್ತು ಪ್ರತ್ಯಕ್ಷವಾಗಿ ಶೋಷಣೆ ಮಾಡುವ ವರ್ಗ ಮತ್ತೊಂದೆಡೆ. ತನ್ನ ಸ್ವಾರ್ಥಕ್ಕಾಗಿ ಸ್ತ್ರೀಯನ್ನು ಶೋಷಣೆ ಮಾಡುವ ವರ್ಗ ಇನ್ನೊಂದೆಡೆ. ಮಸಣದ ಹೂವು ಕಾದಂಬರಿಯಲ್ಲಿನ ಎಲ್ಲ ಸ್ತ್ರೀಯರೂ ಪುರುಷನ ವಂಚನೆ ಶೋಷಣೆಗೆ ಒಳಗಾಗಿರುವವರೇ. ವೇಶ್ಯಾಸಮಸ್ಯೆ ಬೃಹದಾಕಾರವಾಗಿ ಬೆಳೆಯಲು ಪುರುಷ ಸಮಾಜವೇ ಕಾರಣ. ರಾಜ ಮಹಾರಾಜರ ಕಾಲದಿಂದಲೂ ಪ್ರತಿಷ್ಠೆಗಾಗಿಯೋ, 'ಅಂತಸ್ತಿಗಾಗಿಯೋ ವೇಶ್ಯಾವೃತ್ತಿಯನ್ನು ಪೋಷಿಸುತ್ತಲೇ ಬಂದಿದ್ದಾರೆ. ಈ ವೃತ್ತಿ ಬೆಳೆಯಲು ಹೆಣ್ಣೊಬ್ಬಳೇ ಕಾರಣಳಲ್ಲ, ಪರುಷನದೂ ಪಾಲಿದೆ, ವೇಶ್ಯಾವೃತ್ತಿಗಿಳಿಯುವ ಸ್ತ್ರೀಯರು, ಸಹಕರಿಸುವ ಪುರುಷ ಮತ್ತು ಸ್ತ್ರೀಯರು, ಈ ವೃತ್ತಿಗೆ ತೊಡಗಿಸಿಕೊಂಡ ಸ್ತ್ರೀಯರ ನರಳಾಟ ಹೀಗೆ ನಾನಾ ರೀತಿಯ ಸ್ವಭಾವದವರು ಕಾದಂಬರಿಯಲ್ಲಿ ಕಂಡು ಬರುತ್ತಾರೆ. ಇಲ್ಲಿ ಸಮಸ್ಯೆ ಕಂಡು ಬರುವುದೇ ಮೇಲಿನ ಮೂರು ವರ್ಗದ ಜನತೆಯದು. ಕಾದಂಬರಿಕಾರರು ವೇಶ್ಯಾಸಮಸ್ಯೆಯ ಜೊತೆಯಲ್ಲಿ ಇನ್ನೂ ಅನೇಕ ಸಮಸ್ಯೆಗಳ ಕಡೆಗೆ ಓದುಗರ ಗಮನ ಸೆಳೆಯುತ್ತಾರೆ. ವೇಶ್ಯಾ ಕಸುಬನ್ನೆ ತನ್ನ ಬದುಕಿಗೆ ಆಧಾರವಾಗಿಟ್ಟುಕೊಂಡಿರುವ ಚಿನ್ನಮ್ಮನಿಗೆ ಬದುಕು ದುಸ್ಸರವೆನಿಸುವುದಿಲ್ಲ. ಆಕೆ ಹೇಳುತ್ತಾಳೆ" ಈ ಸುಬಿನಾಗೆ ಪ್ರಾಯ ಅನ್ನೋದು ಮುಂಗಾರಿನ ಬಿಸಿಲಿನ ಅಂಗೆ, ಅದ್ಯಾವಾಗ ಹೋಗ್ತದೋ ತಿಳಿಯಾಕಿಲ್ಲ. ಇನ್ನೂ

ವಯಸ್ಸಿದೆ ಅನ್ನೋವಾಗ್ಲೇ ಪ್ರಾಯ ಇಬ್ಬನಿ ಕರಗೋದ್ವಾಗೆ ಹೊಂಟೋಗ್ತದೆ. ಅದ್ಕೆ ಬಾಳ ಹುಸಾರಾಗಿರ್ಬೇಕು. ಏನು ಮಾಡ್ಕೊಳ್ಳೋದಿದ್ದರೂ ಪ್ರಾಯ ಇರೋವಾಗ್ಲೇ ಮಾಡ್ಕೋಬೇಕು. ಆ ಮಾತು ಮರೀಬ್ಯಾಡ. ಆದಷ್ಟು ದೇಹ ಕೆಡಿಸ್ಕೊಬಾರದು. ಅಂಗಂತ ಗಿರಾಕಿನೂ ಕೆಡಿಸ್ಕೋಬಾರ್ದು (ಮಸಣದ ಹೂವು ಪುಟ ೨೧) ಈ ರೀತಿ ಚೆನ್ನಮ್ಮ ತನ್ನ ತಾಯಿಯಿಂದ ಕಲಿತದ್ದು. ಹಾಗಾಗಿ ಈ ವೃತ್ತಿಯನ್ನು ಬದುಕಿನ ಒಂದಂಗವಾಗಿ ಸುಲಭವಾಗಿಯೇ ಸ್ವೀಕರಿಸುತ್ತಾಳೆ. ನಿರುದ್ಯೋಗಿ ಪುರುಷರಿಗೆ ಉದ್ಯೋಗ ನೀಡುವ ತಾಣವಿದು. ಸ್ತ್ರೀಯನ್ನು ಕಾಡುವ ಸಮಸ್ಯೆಗಳು ಅನೇಕ ರೀತಿಯವು. ಬಡತನ, ಐಷಾರಾಮದ ನಗರದ ನಾಗರಿಕ ಬದುಕಿನ ಆಕರ್ಷಣೆ, ಅತೃಪ್ತ ಲೈಂಗಿಕ ಸಮಸ್ಯೆ, ಮೋಸಕ್ಕೆ ಒಳಗಾದ ಸ್ತ್ರೀಯರು ಒಂದೆಡೆಯಾದರೆ, ಈ ನರಕದ ಕೂಪಕ್ಕೆ ಸಿಲುಕಿ ಯಾತನೆ ಅನುಭವಿಸುವ ಹೆಣ್ಣುಗಳು ಮತ್ತೊಂದೆಡೆ. ಗರ್ಭಧರಿಸಿ ಗರ್ಭಪಾತಕ್ಕೊಳಗಾಗುವ ಸ್ತ್ರೀಯರು ದುರ್ಬಲ ಪತಿಯನ್ನು ಹೊಂದಿ ಲೈಂಗಿಕ ತೃಪ್ತಿಗಾಗಿ ವೇಶ್ಯಾಗೃಹಕ್ಕೆ ಬರುವ ಶ್ರೀಮಂತ ಮತ್ತು ಮರ್ಯಾದಸ್ಥ ಕುಟುಂಬದ ಹೆಣ್ಣುಮಕ್ಕಳು ಮತ್ತೊಂದೆಡೆ. "ಹೀಗೆ ಇದು ಯಾರನ್ನು ಬಿಟ್ಟಿದ್ದಲ್ಲಾ ನಾಳೆ ನಮ್ಮ ಮನೆಯನ್ನು ಪ್ರವೇಶಿಸಬಹುದು. ಅದು ತಾಯಾಗಬಹುದಿತ್ತು. ಅಕ್ಕ ತಂಗಿಯಾಗಬಹುದಿತ್ತು, ಮೆಚ್ಚಿನ ಮಡದಿಯಾಗ ಬಹುದಿತ್ತು. ನಿಜ ಆಕೆಯೂ ಯಾರ ಅಕ್ಕ ತಂಗಿಯೋ, ತಾಯೋ, ಮಡದಿಯೋ, ಅಗಿದ್ದಿರಬಹುದು, ಆದರೂ ಇಂದಾಕೆ ಸೂಳೆ, ಅಷ್ಟೆ, ಅಷ್ಟೇ ನಾನು ಬಲ್ಲೆ".ಯೆಂದು ಕಾದಂಬರಿಕಾರರೇ ಮುನ್ನುಡಿಯಲ್ಲಿ ಈ ರೀತಿ ಹೇಳಿದ್ದಾರೆ.

ತ.ರಾ.ಸು ಅವರ ಸ್ತ್ರೀಸಂವೇದನಾ ಪರವಾದ ಸಾಮಾಜಿಕ ಕಾದಂಬರಿಗಳಲ್ಲಿ ಸ್ತ್ರೀಸಮಸ್ಯೆ ಮತ್ತು ಅವಳ ಬದುಕನ್ನಷ್ಟೆ ಅಲ್ಲದೆ ಬಡತನ, ಪತ್ರಿಕೋದ್ಯಮಿಗಳ ಸಮಸ್ಯೆ ಹಾಗೂ ಸಮಾಜವನ್ನು ಕಾಡುತ್ತಿದ್ದ ಬಾಲ್ಯವಿವಾಹ, ವಿಧವಾ ವಿವಾಹ, ಮಠಾಧೀಶರ ಅನೈತಿಕತೆ, ಅಧಿಕಾರ ವರ್ಗದ ದರ್ಪ ಹಾಗೂ ಸ್ವಾರ್ಥವನ್ನು ಕುರಿತಂತೆ ತಮ್ಮ ಕಾದಂಬರಿಗಳಲ್ಲಿ ಚರ್ಚಿಸಿದ್ದಾರೆ. ಈ ತರಹದ ಸಂವೇದನೆಗಳನ್ನು ಹೊಸಗನ್ನಡ ಸಾಹಿತ್ಯದ ಆರಂಭದ ಸ್ತ್ರೀಪ್ರಧಾನ ಕಾದಂಬರಿಗಳಲ್ಲಿ ಕಾಣುತ್ತೇವೆ. "ಹೆಣ್ಣಿನ ಮನಸ್ಸಿನ ಸೂಕ್ಷ್ಮ ಸಂವೇದನೆ, ಪಾರಂಪರಿಕವಾಗಿ ಆಕೆ ಅನುಭವಿಸುತ್ತಾ ಬಂದಿರುವ ನೋವು, ಶೋಷಣೆ, ಹಿಂಸೆ, ದುಃಖ ಅಸಹಾಯಕತೆ, ದೌರ್ಜನ್ಯ, ವಂಚನೆ, ಹೋರಾಟ, ತ್ಯಾಗ, ಆದರ್ಶ ಪ್ರತಿಕ್ರಿಯೆ, ಬಂಡಾಯ, ಸೋಲು, ಗೆಲುವು, ಹಳ್ಳಿಯ ಮುಗ್ಧ ಹೆಣ್ಣುಗಳು ನಗರದ ಹೆಣ್ಣುಗಳು, ಒಟ್ಟಿನಲ್ಲಿ ಹೆಣ್ಣು ಸಮಾಜದ ಸಮಸ್ಯೆಯ ಚಿತ್ರಣವಾಗಿದ್ದಾಳೆ." ಟಿ.ಗಿರಿಜ ಅವರ ಈ ಅಭಿಪ್ರಾಯ ತ.ರಾ.ಸು ಅವರ ಕಾದಂಬರಿಗಳಲ್ಲಿ ಸ್ತ್ರೀಸಂವೇದನೆ ಯಾವ ಯಾವ ಮಜಲುಗಳಲ್ಲಿ ಪ್ರಯೋಗಿಸಲ್ಪಟ್ಟಿದೆಯೆಂದು ಅರಿಯಲು ಸಹಕಾರಿಯಾಗಿದೆ.

ಬಡತನದ ಜೀವನ ಸಾಗಿಸುವ ಹಾಗೂ ಬದುಕಿನಲ್ಲಿ ಎದುರಿಸುವ ತೊಂದರೆಗಳನ್ನು 'ಮುಂಜಾವಿನಿಂದ ಮುಂಜಾವು', 'ಪುರುಷಾವತಾರ' ಕಾದಂಬರಿಗಳಲ್ಲಿ ನಿರೂಪಿಸಲಾಗಿದೆ. ಕಾದಂಬರಿಯಲ್ಲಿ ಲಕ್ಷ್ಮಣ ಕ್ರಿಯಾಶೀಲ ವ್ಯಕ್ತಿ. ಅನಂತರ ಇಲ್ಲಿ ಬರುವ ಕಣ್ಣಿ ಭಿಕ್ಷುಕರ ಮತ್ತು ಶೋಷಿತರ ಪ್ರತಿನಿಧಿಯಾಗಿದ್ದಾನೆ. ಭಿಕ್ಷುಕರ ಬವಣೆಯನ್ನೆ ಪ್ರಮುಖವಾಗಿ ಚಿತ್ರಿಸುವ ಕಾದಂಬರಿ

ಪುರುಷಾವತಾರ. "ಸಮಾಜದ ಆಕಾಶದಲ್ಲಿ ದಿಕ್ಕುದೆಸೆಯಿಲ್ಲದೆ ಉಲ್ಕೆಗಳಂತ ಅಲೆಯುವ ಈ ಜೀವಗಳು, ಇಂದಿನ ಸಮಾಜ ಪದ್ಧತಿಯಲ್ಲಿ ಅಂತರ್ಗತವಾಗಿರುವ ಹಲ ಬಗೆಯ ವಿಷಮತೆಯ ಸಾಕಾರಸ್ವರೂಪಗಳು, ವೃತ್ತಿಯಲ್ಲಿ ಅಂತರ್ಗತವಾಗಿರುವ ಪ್ರತಿಭೆಯನ್ನು ವಿಕಾಸಗೊಳಿಸಿಕೊಳ್ಳಲು ಅವಕಾಶ ಕಲ್ಪಿಸಿಕೊಳ್ಳಬೇಕೆಂಬ ಅರಿವು ಎರಡೂ ಇಲ್ಲದೆ, ಹೆಸರು ದೆಸೆಯಿಲ್ಲದೆ ಹುಟ್ಟಿ ಬೆಳೆದು ಕಡೆಗೆ ಬಹುಮಟ್ಟಿಗೆ ಸಮಾಜ ಕಂಟಕವಾಗಿ ಪರಿಣಮಿಸುವ ಈ ಮಾನವ ಜೀವಗಳು, ಮಾನವನ ಅಮಾನುಷತೆಯ ಜೀವಂತ ಸಾಕ್ಷಿಗಳು[೮]." ಎನ್ನುವ ಕಾದಂಬರಿಕಾರರ ಮಾತು ಕೃತಿಯಲ್ಲಿ ಸಾಕಾರ ರೂಪವನ್ನು ಪಡೆದುಕೊಂಡಿದೆ. ಕಾದಂಬರಿಯಲ್ಲಿ ಬರುವ ಕಣ್ಣ ಮತ್ತು ಇಂದು ಇವಳ ಮೇಲೆ ಬಿಸಿ ನೀರೆರಚುವ ಹೋಟೆಲಿನವ ಇವನೂ ಕೂಡ ಕೆಲಸಗಾರನೆ (ಮಾಣಿಕೆಲಸ) ಆದರೆ ಭಿಕ್ಷೆ ಬೇಡುವ ಕಣ್ಣ ಮತ್ತು ಇಂದುವಿಗಿಂತ ತುಸು ಉನ್ನತ ಸ್ಥಾನದಲ್ಲಿರುವನು. ಕಣ್ಣನಿಗೆ ಕಳ್ಳನ ಪಟ್ಟ ಕಟ್ಟುವ ಸಮಾಜ, ತನ್ನ ತಾಯಿಗೆ ಔಷಧಿ ಕೇಳಲು ಡಾಕ್ಟರ್ ಹತ್ತಿರ ಬಂದ ಕಣ್ಣನಿಗೆ ವೈದ್ಯರು ಬೂಟುಗಾಲಿನಿಂದ ಹೊಡೆದು ತುಳ್ಳತ್ತಾರೆ ಹಾಗೂ ನಿಂದಿಸುತ್ತಾರೆ. ಆಗ ಪಕ್ಕದ ಅಂಗಡಿಯವನು ಹಣ ಕೊಟ್ಟು ಔಷಧಿ ಕೊಡಿ ಎಂದಾಗ ವೈದ್ಯ ಹೇಳುವ ಮಾತು. ಯಾವನೋ ಏನೋ ನಿವ್ಯಾಕಿಷ್ಟು ತೊಂದರೆ ತಗೋತೀರ' ಎಷ್ಟು ಜನಾನೋ ಇಂಥವರು. ನಾಯಿಕೊಡೆ ಹುಟ್ಟಿದ ಹಾಗೆ, ಹುಟ್ಟಿ ಸಾಯ್ತಾರೆ. ಒಂದು ಸಲ ಸ್ವಲ್ಪ ದಾಕ್ಷಿಣ್ಯ ತೋರಿಸಿದರೆ ಸರಿ. ಆಮೇಲೆ" ನಮ್ಮನ್ನೇ ನುಂಗುತ್ತಾರೆ. ಎಂದರು (ಪುರಷಾವತಾರ ಪುಟ-೪೬) ಇವೆಲ್ಲ ಭಿಕ್ಷುಕರ ಸಮಸ್ಯೆ ತಿಳಿಸುವುದರ ಜೊತೆಗೆ ಆ ವರ್ಗದ ಬಗ್ಗೆ ಸಮಾಜ ನಡೆದುಕೊಳ್ಳವ ರೀತಿಯನ್ನು ತಿಳಿಸುತ್ತವೆ.

ಪರಿಸರಕ್ಕನುಗುಣವಾಗಿ ಮಾನವನ ಬದುಕು ರೂಪುಗೊಳ್ಳುತ್ತದೆ. ಗ್ರಾಮೀಣ ಪರಿಸರದಲ್ಲಿ ವ್ಯಕ್ತಿಯ ವೈಯಕ್ತಿಕ ಹಿತಾಸಕ್ತಿಗಿಂತ ಸಾರ್ವತ್ರಿಕ ಹಿತಾಸಾಕ್ತಿಗಳೆ ಮುಖ್ಯವಾಗುತ್ತವೆ. ವ್ಯಕ್ತಿಯ ಆಲೋಚನೆಗಳು, ಭಾವನೆಗಳು ಗ್ರಾಮೀಣ ನೆಲೆಯಲ್ಲಿ ಅರ್ಥವನ್ನು ಕಳೆದುಕೊಳ್ಳುತ್ತವೆ. ಗ್ರಾಮೀಣ ಪ್ರದೇಶದಲ್ಲಿ ವ್ಯಕ್ತಿ ಸ್ವೇಚ್ಛೆಯಿಂದ ವರ್ತಿಸಲು ಸಾಧ್ಯವಿಲ್ಲ. ಅಲ್ಲಿನ ಪರಿಸರಕ್ಕನುಗುಣವಾಗಿ ಬದುಕು ಸಾಗುತ್ತದೆ. ಅಂತಹ ಗ್ರಾಮೀಣ ಪರಿಸರ ಮತ್ತು ವ್ಯಕ್ತಿಗಳ ಬದುಕನ್ನು ಕುರಿತಾದಂತಹ ಕಾದಂಬರಿಗಳೆಂದರೆ,'ಚಂದನದಗೊಂಬೆ', 'ಚಂದ ವಳ್ಳಿಯತೋಟ' ಮುಂತಾದುವು.

ಚಂದನದಗೊಂಬೆ ಗ್ರಾಮೀಣ ಪರಿಸರದ ಮಧ್ಯಮ ವರ್ಗದ ಬ್ರಾಹ್ಮಣ ಕುಟುಂಬದ ಸಾಂಸಾರಿಕ ಕತೆ. ಕುಟುಂಬವೊಂದರ ಆಗುಹೋಗುಗಳ ಮೇಲೆ ಗ್ರಾಮೀಣ ಸಮಾಜ ಹೇಗೆ ನಿರ್ಬಂಧ ಹೇರುತ್ತದೆಂಬುದು, ಅದರಿಂದ ಉಂಟಾಗುವ ಬದುಕಿನ ಸ್ಥಿತ್ಯಂತರ ನಿರೂಪಿತವಾಗಿದೆ ಇಸ್ಪೀಟಾಟದಿಂದ ಆರಂಭವಾಗುವ ಕಾದಂಬರಿ ಇಸ್ಪೀಟಾಟದಿಂದ ಮುಕ್ತಾಯವಾಗುತ್ತದೆ. ಪತಿ ಪತ್ನಿಯರ ಸಾವಿನ ನಡುವೆ ವ್ಯಕ್ತಿಗಳ ಉದಾರತೆ, ಸಣ್ಣತನ, ಸ್ವಾರ್ಥ, ದ್ವೇಷ, ಶೋಷಣೆ, ಮೊದಲಾದ ರಾಗಭಾವಗಳು ಪದರ ಬಿಚ್ಚಿಕೊಳ್ಳುತ್ತಾ ಹೋಗುತ್ತವೆ. ಸಮಾಜದ ಸವಾಲುಗಳನ್ನು ಎದುರಿಸಿ ಬದುಕುವ ರತ್ನಕ್ಕನಂಥ ಮುಗ್ಧೆಗೆ ಬದುಕು ಕಷ್ಟವಾಗುತ್ತದೆ. ಬದುಕಿನಲ್ಲಿ ಕೊನೆತನಕ ಹೋರಾಟ ನಡೆಸಿದರೂ ಸಮಾಜದ ದೃಷ್ಟಿಕೋನವನ್ನು ಎದುರಿಸಲಾರದೆ ಅಸಹಾಯಕಳಾಗುತ್ತಾಳೆ.

ರತ್ನಕ್ಕ ಹೇಡಿಯಲ್ಲ, ಈಕೆ ಏಕಾಂಗಿಯಾಗಿ ಹೋರಾಡುತ್ತಾಳೆ. ಹೆಣ್ಣಿಗೆ ಹೆಣ್ಣಿನಿಂದಲೇ ಶೋಷಣೆಯಾಗುತ್ತದೆಂಬುದಕ್ಕೆ ರತ್ನಕ್ಕನೆ ಸಾಕ್ಷಿ. ಅನಂತರ ಇಲ್ಲಿ ಬರುವ ಈಶವ್ವನೂ ಶೋಷಣೆಗೊಳಗಾಗುತ್ತಾಳೆ. ಕಾದಂಬರಿ ಸಮಾಜದ ವಿಚಿತ್ರ ನಡವಳಿಕೆಯನ್ನು, ಹಲವು ಮುಖಗಳನ್ನು ಚಿತ್ರಿಸುತ್ತದೆ. ಹೆಣ್ಣು, ಹಣ ಇವೆರಡನ್ನು ಬೆಸೆಯುವ ಕಾಮದ ವಿಷಚಕ್ರದಲ್ಲಿಯೇ ಒಂದು ಗ್ರಾಮದ ಪರಿಸ್ಥಿತಿ, ವಿಭಿನ್ನ ಮನೋಧರ್ಮ, ಸಮಸ್ಯೆಯನ್ನು ಎದುರಿಸುವ ಕುಟುಂಬದ ಸ್ಥಿತಿಗತಿಗಳು ಅರಿವಿಗೆ ಬರುತ್ತವೆ. ವ್ಯಕ್ತಿಯ ಸ್ವಂತಿಕೆಗೆ ಸಜ್ಜನಿಕೆಗೆ ಬೆಲೆಸಿಕ್ಕುವುದಿಲ್ಲವೆಂಬುದು ಗ್ರಾಮೀಣ ಪರಿಸರ ಬದುಕಿನಲ್ಲಿ ಹೇಗೆ ಪರಿಣಾಮ ಬೀರುತ್ತದೆಂಬುದನ್ನು ಚಿತ್ರಿಸಿರುವ ಕೃತಿ ಚಂದನದ ಗೊಂಬೆ.

ಗ್ರಾಮೀಣ ಬದುಕಿನ ರೀತಿ ನೀತಿಗಳನ್ನು ಬಿಂಬಿಸುವ ಮತ್ತೊಂದು ಕಾದಂಬರಿ ಚಂದವಳ್ಳಿಯ ತೋಟ. ಆರ್ಥಿಕ ಶ್ರೀಮಂತಿಕೆಯ ಜೊತೆಗೆ ಸದ್ಗುಣಗಳ ಶ್ರೀಮಂತಿಕೆಯನ್ನೂ ಹೊಂದಿದ ಆದರ್ಶ ಕನಸುಗಾರ ಶಿವನಂಜೇಗೌಡ ಇವನ ಪ್ರಯತ್ನದಿಂದ ಚಂದವಳ್ಳಿ ಅಭಿವೃದ್ಧಿ ಹೊಂದುತ್ತದೆ. ಸ್ವಾರ್ಥಿಯಲ್ಲದ ವ್ಯಕ್ತಿ ಶಿವನಂಜೇಗೌಡನೇ ಚಂದವಳ್ಳಿಗೆ ಕರೆದು ತಂದ ಸುಬ್ಬಾಭಟ್ಟ ಹಾಗೂ ಊರುಬಿಟ್ಟು ಹೋಗಿದ್ದ ಕರಿಯಪ್ಪನ ಆಗಮನದೊಂದಿಗೆ ನಂದನವನದಂತಿದ್ದ ಗ್ರಾಮ ನರಕವಾಗುತ್ತದೆ. ಇಲ್ಲಿ ತಾಮಸಗುಣ ಗೆದ್ದು ಸಾತ್ವಿಕಗುಣ ಸೋಲುತ್ತದೆ. ಇಬ್ಬರು ವ್ಯಕ್ತಿಗಳ ಆಗಮನದಿಂದ ಚಿಗುರಬೇಕಾದ ಪ್ರೀತಿ, ವಾತ್ಸಲ್ಯದ ಬದಲಿಗೆ ದ್ವೇಷ, ಅಸೂಯೆ ತಲೆಹಾಕುತ್ತದೆ. ಶ್ರೀಮಂತ ಬದುಕನ್ನು ನಡೆಸಬೇಕಾಗಿದ್ದ ಕುಟುಂಬವೊಂದು ಛಿದ್ರವಾಗಿ ವೈಭವದ ಮನೆ ಹಾಳು ಮನೆಯಾಗುತ್ತದೆ. ಕರಿಯಪ್ಪ ಮತ್ತು ಸುಬ್ಬಾಭಟ್ಟರು ಘಾತುಕ ಶಕ್ತಿಗಳಾಗಿ ಪರಿಣಮಿಸುತ್ತಾರೆ. ಗ್ರಾಮವೊಂದು ತನ್ನ ಆದರ್ಶದ ಉತ್ಸಾಹದಲ್ಲಿ ಘಾತುಕ ಶಕ್ತಿಗಳ ಹಿಡಿತಕ್ಕೆ ಸಿಲುಕಿ ಅಧಃಪತನದ ಹಾದಿ ಹಿಡಿಯುವುದನ್ನು ಕಾದಂಬರಿಯಲ್ಲಿ ಸಮರ್ಥವಾಗಿ ನಿರೂಪಿಸಲಾಗಿದೆ. ಈ ತರಹ ಸಮಸ್ಯೆಗಳನ್ನು ಕುರಿತಂತೆ ಚಿತ್ರಿಸುವ ಇನ್ನೂ ಹಲವು ಕಾದಂಬರಿಗಳೆಂದರೆ 'ಮಾರ್ಗದರ್ಶಿ', 'ಭಾಗ್ಯ ಶಿಲ್ಪಿ' ಮತ್ತು 'ಬೆಳಕಿನಬೀದಿ' ಕಾದಂಬರಿ ಮಾಲೆಗಳಾಗಿ ಹೊರಹೊಮ್ಮಿವೆ.

ಕೃತಿಕಾರನೊಬ್ಬ ಸಮಾಜದ ಚಿತ್ರಣವನ್ನೆ ತನ್ನ ಕೃತಿಗಳಲ್ಲಿ ಚಿತ್ರಿಸಿದರೂ ಆ ಸಮಾಜದ ವಿವಿಧ ಆಯಾಮಗಳನ್ನು, ವಿವಿಧ ಮನೋಧರ್ಮದ ವರ್ಗಗಳನ್ನು ತಮ್ಮ ಬರಹಕ್ಕೆ ವಸ್ತುವನ್ನಾಗಿ ಸ್ವೀಕರಿಸುತ್ತಾನೆ. ಆ ಸಂದರ್ಭದಲ್ಲಿ ಕೃತಿಕಾರನೊಬ್ಬ ಸಮಾಜ ವಿಜ್ಞಾನಿಯೂ ಆಗಿರುತ್ತಾನೆ. ಅದೇ ವೇಳೆಗೆ ಕಲಾಕಾರನೂ ಆಗಿರುತ್ತಾನೆ. ಸಂಗೀತ, ನೃತ್ಯ ಚಿತ್ರಕಲೆಗಳ ಬಗೆಗೆ ಆಸಕ್ತಿ ಹೊಂದಿದ್ದ ತ.ರಾ.ಸು ಅವರು ತಮ್ಮ ಕಾದಂಬರಿಗಳಲ್ಲಿ ಕಲೆಗೆ ಹೆಚ್ಚಿನ ಮಹತ್ವ ನೀಡಿರುವುದು ಕಂಡು ಬರುತ್ತದೆ. ಕಲೆಗೆ ಒತ್ತು ನೀಡಿರುವ ಕಾದಂಬರಿಗಳೆಂದರೆ 'ಹಂಸಗೀತ', 'ವಿಷಪ್ರಾಶನ', 'ನಾಯಕಿ' ಹಾಗೂ 'ಲಾವಣ್ಯವತಿ'.

'ಹಂಸಗೀತೆ' ಸಾಮಾಜಿಕ ಕಥಾಹಂದರ ಒಳಗೊಂಡಿರುವ ಕಾಲ್ಪನಿಕ ಕೃತಿ. ಚಿತ್ರದುರ್ಗದ ಇತಿಹಾಸಕ್ಕೆ ಸಂಬಂಧಿಸಿದ ಕೆಲವು ಘಟನೆಗಳು ಕಾದಂಬರಿಯಲ್ಲಿ ಬಂದಿವೆಯಷ್ಟೆ. ಆ ಕಾರಣಕ್ಕಾಗಿಯೇ ಅದು ಐತಿಹಾಸಿಕ ಕಾದಂಬರಿಯಾಗುವುದಿಲ್ಲ. ಚಿತ್ರದುರ್ಗದ ವಿವರಗಳನ್ನು ನೀಡುವುದರ ಜೊತೆಯಲ್ಲೇ ಸಂಗೀತಗಾರನೊಬ್ಬನ ಬದುಕಿನ ಹಲವು ಮಜಲುಗಳನ್ನು ಕಾದಂಬರಿ ವಿವರಿಸುತ್ತದೆ. ಇದಕ್ಕೆ ಪೂರಕವಾಗಿ ಇನ್ನೂ ಕೆಲವು ಪಾತ್ರಗಳು ಪದರ ಬಿಚ್ಚಿಕೊಳ್ಳುತ್ತಾ ಸಾಗುತ್ತವೆ. ಕೃತಿಯ ಮುನ್ನುಡಿಯಲ್ಲಿ ಕಾದಂಬರಿಕಾರರು "ಸಂಗೀತಗಾರನೊಬ್ಬನ ಬಾಳಿನ ಹಂದರದ ಮೇಲೆ ಹಿಂದಿನ ಮತ್ತು ಇಂದಿನ ಸಂಸ್ಕೃತಿಯನ್ನು ನಾನಿಲ್ಲಿ ಚಿತ್ರಿಸಲೆಳಸಿದ್ದೇನೆ ಕಾದಂಬರಿಯ ಲೇಖನದಲ್ಲಿ ಬಳಸಿರುವ ತಂತ್ರಕ್ಕೆ ಅದು ಕಾರಣ. ಇದರಲ್ಲಿ ಬರುವ ಎಲ್ಲಾ ಪಾತ್ರಗಳೂ ಕಲ್ಪನಾಸೃಷ್ಟಿ. ಯಾವ ಜೀವಂತ ವ್ಯಕ್ತಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿತವಾದುದಲ್ಲ. ಸಾಮಾಜಿಕ ಕಾದಂಬರಿಗಳ ಸಾಲಿನಲ್ಲಿ ವಿಶ್ಲೇಷಣೆ ಮಾಡುತ್ತಿದ್ದೇನೆ. ರಾಗಸಾಕ್ಷಾತ್ಕಾರ, ರಾಗವನ್ನು ಒತ್ತೆ ಇಡುವುದು, ಹೂವಿನಿಂದ ಪಾಠ ಕಲಿಯುವುದು ಇವು ನಾನು ಕೇಳಿದ ಹಿರಿಯರ ಕತೆಗಳಿಂದ ಪ್ರೇರಿತ"[೯]. ಎಂದು ಹೇಳಿದ್ದಾರೆ.

'ಹಂಸಗೀತೆ'ಯ ಪಾತ್ರಗಳು ಕಲ್ಪನಾಸೃಷ್ಟಿ ಎಂಬುದಾಗಿ ಕಾದಂಬರಿಕಾರರೇ ಹೇಳಿರುವುದರಿಂದ ಇದೊಂದು ಐತಿಹಾಸಿಕ ಕಾದಂಬರಿಯಲ್ಲ. ಇಲ್ಲಿ ಚಿತ್ರದುರ್ಗದ ಕೋಟೆ ಚಿತ್ರಣ, ಟಿಪ್ಪುಸುಲ್ತಾನನ ಚಿತ್ರಣವಿರುವುದರಿಂದ ಐತಿಹಾಸಿಕ ಕಾದಂಬರಿಯೇನೋ ಎಂಬ ಭ್ರಮೆ ಹುಟ್ಟಿಸುತ್ತದೆ. ಕಥೆ ಆರಂಭವಾಗಿ ಮುಂದುವರಿಯುವುದು ಸಾಮಾಜಿಕ ಸ್ತರದಲ್ಲಿಯೇ. ಆದ್ದರಿಂದ 'ಹಂಸಗೀತೆ'ಯನ್ನು ಐತಿಹಾಸಿಕ ಕಾದಂಬರಿ ಎನ್ನಲಾಗುವುದಿಲ್ಲ.

ಕಾದಂಬರಿಯ ಕೇಂದ್ರವ್ಯಕ್ತಿ ವೆಂಕಟಸುಬ್ಬಯ್ಯ ಇವನ ಬದುಕಿನ ಎಲ್ಲ ಮಜಲುಗಳಿಗೆ ಹೊಸಚೇತನ ಹೊಸಸ್ಫೂರ್ತಿ ನೀಡುವವನು ಅನಂತಯ್ಯ. ವೆಂಕಟಸುಬ್ಬಯನ ಅಳಿವುಉಳಿವು ಎಲ್ಲ ತಿರ್ಮಾನವಾಗುವುದು ಅನಂತಯ್ಯನಿಂದಲೇ. ಅವನ ಬದುಕನ್ನು ಕತ್ತಲೆಯಿಂದ ಬೆಳಕಿನೆಡೆಗೆ ಅಪರಿಪೂರ್ಣತೆಯಿಂದ ಪರಿಪೂರ್ಣತೆಯೆಡೆಗೆ ಕೊಂಡಯ್ಯುವವನು ಅನಂತಯ್ಯನೆ.

ವೆಂಕಟಸುಬ್ಬಯನ ಸಂಗೀತಾಸಕ್ತಿ ಸ್ವಾಭಾವಿಕವಾದುದು ಮತ್ತು ದೈವದತ್ತವಾದುದು. "ವೆಂಕಟಸುಬ್ಬಯ್ಯ ಶಾಲೆಯಲ್ಲಿ ಅನ್ಯಮನಸ್ಕತೆಯಿಂದ ಇರುತ್ತಿದ್ದನಾದರೂ ಬಾಯಿಪಾಠ ಒಪ್ಪಿಸು ಎಂದರೆ ಅದನ್ನು ಮಾತ್ರ ರಾಗವಾಗಿ ಕಿವಿಗಿಂಪಾಗುವಂತೆ, ಕೇಳುವವರ ಮನಸ್ಸು ಸೂರೆಯಾಗುವಂತೆ, ಜೇನು ಸುರಿದಂತೆ ಹೇಳುತ್ತಿದ್ದ. ಆದರೆ ಹೇಳಹೇಳುತ್ತಲೇ ಬೀದಿಯಲ್ಲಿ ಹಸು ಕೂಗಿದರೆ, ದೇವಾಲಯದ ಇದಿರಿನ ಅಶ್ವತ್ಥವೃಕ್ಷದ ಎಲೆಗಳು ಗಾಳಿಯಲ್ಲಿ ಗೆಜ್ಜೆಯಲುಗಿಸಿದಂತೆ ಸದ್ದು ಮಾಡಿದರೆ, ಯಾವುದಾದರೂ ಹಕ್ಕಿ ಕುಕಿಲಿದರೆ, ದೇವಾಲಯದ ಗಂಟೆ ಗಂಭೀರವಾಗಿ ಮೊಳಗಿದರೆ, ಆ ಸದ್ದು ಕೇಳಲೆಂದೇ ಕಿವಿದೆರೆದು ನಿಂತಿದ್ದಂತೆ, ಹೇಳುತ್ತಿದ್ದುದನ್ನು ಮರೆತು ಹೊರಗಿನಿಂದ ಬಂದ ನಾದದಲ್ಲಿ ಲೀನವಾಗಿ ಬಿಡುತ್ತಿದ್ದ"[೧೦].(ಪುಟ ೫೪)

ವೆಂಕಟಸುಬ್ಬಯ್ಯನಲ್ಲಿರುವ ಸಂಗೀತದ ಈ ಮನಸ್ಸನ್ನು ಗುರುತಿಸಿ ಮಾರ್ಗದರ್ಶನ ನೀಡುವವರು ಕಸ್ತೂರಿ ರಂಗಾಚಾರ್ಯರು.

ಸ್ತ್ರೀಸಂವೇದನೆಯದೃಷ್ಟಿಯಿಂದ ಇಲ್ಲಿ ಬರುವ ಚಂದ್ರಸಾನಿ ಮುಖ್ಯಳಾಗುತ್ತಾಳೆ. ಚಂದ್ರಸಾನಿ ವೇಶ್ಯೆಯಾದರೂ ವೈಭವದ ಬದುಕನ್ನು ನಡೆಸುವವಳು. ಈಕೆ ವೆಂಕಟಸುಬ್ಬಯ್ಯನನ್ನೆ ಪತಿಯೆಂದು ಭಾವಿಸಿಕೊಂಡವಳು. ಅನಂತಯ್ಯನ ಕೋರಿಕೆಯಂತೆ ತಾನು ಸತ್ತು ವೆಂಕಟಸುಬ್ಬಯ್ಯನ ಆತ್ಮೋನ್ನತಿಗೆ ಕಾರಣವಾಗುವವಳು. "ಚಂದ್ರಸಾನಿ ವೇಶ್ಯೆಯಾದರೂ ಮಾನವೀಯ ಮೌಲ್ಯವನ್ನು ಎತ್ತಿ ಹಿಡಿಯುವ ಸಮಾಜದ ಗೌರವಕ್ಕೆ ಪಾತ್ರಳಾದ ಹೆಣ್ಣು. ಆದರೆ ವೇಶ್ಯಾವೃತ್ತಿಯನ್ನು ಒಂದು ದಂಧೆಯಾಗಿ ನಡೆಸುವ ಪುಟ್ಟತಾಯಮ್ಮ ವಾಸ್ತವ ಬದುಕಿನ ದಾರುಣತೆಯನ್ನು ಬಿಂಬಿಸುತ್ತಾಳೆ. ಸಮಾಜವೊಂದರ ಒಂದೇ ವೃತ್ತಿಯ ಎರಡು ವಿರುದ್ಧ ಮುಖಗಳ ದರ್ಶನವಾಗುತ್ತದೆ"[೧೧]. ಚಂದ್ರಸಾನಿ ವೇಶ್ಯೆಯಾದರೂ ವೆಂಕಟಸುಬ್ಬಯ್ಯನ ಸಂಗೀತಕ್ಕೆ ಅವನಲ್ಲಿರುವ ಕಲೆಗೆ ಮಾರುಹೋಗಿದ್ದಳೆಂಬುದು ಮೇಲಿನ ಹೇಳಿಕೆಯಿಂದ ವೇದ್ಯವಾಗುತ್ತದೆ.

ಸಂಗೀತಗಾರನಾದ ವೆಂಕಟಸುಬ್ಬಯ್ಯ ವೇಶ್ಯೆಯಾದ ಚಂದ್ರಸಾನಿಗೆ ಮನಸೋಲುವುದು. ಹೆಣ್ಣು ಮತ್ತು ಕಾಮದ ಮುಂದೆ ಪುರುಷ ಸೋಲನ್ನು ಒಪ್ಪಿಕೊಳ್ಳಲೇಬೇಕೆಂಬುದಕ್ಕೆ ನಿದರ್ಶನವಾಗುತ್ತಾನೆ ವೆಂಕಟಸುಬ್ಬಯ್ಯ. ಹೆಣ್ಣಾದವಳು ವೇಶ್ಯೆ ಅಂದಾಕ್ಷಣ ಕೀಳಾಗಿ ನೋಡಬೇಕಾಗಿಲ್ಲ. ಅವಳಲ್ಲಿಯೂ ಕೂಡ ಮಾನವೀಯ ಗುಣಗಳಿರುತ್ತವೆಂಬುದನ್ನು ಮರೆಯಲಾಗುವುದಿಲ್ಲ. ತ.ರಾ.ಸು. ಅವರ ಬೇರೆ ಕಾದಂಬರಿಗಳಲ್ಲಿ ಚಿತ್ರಿಸಲ್ಪಟ್ಟಿರುವ ವೇಶ್ಯೆಯರಿಗೂ ಚಂದ್ರಸಾನಿಗೂ ವ್ಯತ್ಯಾಸವಿದೆ. ಪ್ರಗತಿಶೀಲ ಸಂದರ್ಭದ ಕಾದಂಬರಿಕಾರರು ಪ್ರಧಾನವಾಗಿ ವೇಶ್ಯಾಸಮಸ್ಯೆಯನ್ನೆತ್ತಿಕೊಂಡು ಕಾದಂಬರಿಗಳನ್ನು ರಚಿಸಿದ್ದಾರೆ. ಕಟ್ಟೀಮನಿಯವರ 'ಬೀದಿಯಲ್ಲಿ ಬಿದ್ದವಳು', ತ.ರಾ.ಸು. ಅವರ 'ಮಸಣದಹೂ' ಕಾದಂಬರಿಗಳಲ್ಲಿನ ವೇಶ್ಯೆಯರು ಹಣಕ್ಕಾಗಿ ತಮ್ಮ ಮೈ ಮತ್ತು ಮನಸ್ಸನ್ನು ಮಾರಾಟಕ್ಕಿಟ್ಟಿರುವವರು. ಇದಕ್ಕೆ ಬಡತನವೂ ಒಂದು ಕಾರಣ. ಆದರೆ ಇಲ್ಲಿನ ಚಂದ್ರಸಾನಿ ವೆಂಕಟಸುಬ್ಬಯ್ಯನ ಸಂಗೀತಕ್ಕೆ ಮನಸೋತವಳು, ಅವನಿಗಾಗಿ ಅವನಲ್ಲಿರುವ ಸಂಗೀತಕ್ಕಾಗಿ ತನ್ನನ್ನು ಅರ್ಪಿಸಿಕೊಂಡವಳು. ಅನಂತಯ್ಯನ ಮಾತನ್ನು ಕೇಳಿದ ಚಂದ್ರಸಾನಿ ವೆಂಕಟಸುಬ್ಬಯ್ಯನಿಗಾಗಿ ಯಾವ ರೀತಿಯ ತ್ಯಾಗಕ್ಕಾದರೂ ಸಿದ್ಧವೆನ್ನುತ್ತಾಳೆ. ವೆಂಕಟಸುಬ್ಬಯ್ಯ ಮದುವೆಯನ್ನು ಮಾಡಿಕೊಂಡು ಸುಖದಿಂದಿರಲೆಂದು ಹಂಬಲಿಸುತ್ತಾಳೆ. ಅಂದರೆ ವೆಂಕಟಸುಬ್ಬಯ್ಯನಲ್ಲಿರುವ ಸಂಗೀತ, ಭೈರವಿರಾಗ ಅದು ಹಾಗೆಯೇ ಉಳಿಯಬೇಕಾದರೆ, ಆತ ನನ್ನನ್ನು ಮರೆಯಬೇಕಾದರೆ ಮದುವೆ ಅನಿವಾರ್ಯ ಮತ್ತು ಅಗತ್ಯವೆಂದು ತೀರ್ಮಾನಿಸುತ್ತಾಳೆ. ಈ ರೀತಿಯಾಗಿ ತ.ರಾ.ಸು. ಅವರ ಸಾಮಾಜಿಕ ಕಾದಂಬರಿಗಳಲ್ಲಿನ ಸ್ತ್ರೀಯರು ಒಂದೇ ವೃತ್ತಿಯವರಾದರೂ ವಿವಿಧ ರೀತಿಯ ಮನೋಧರ್ಮದ ಸ್ವಭಾವದ ಸ್ತ್ರೀಯರಾಗಿ ಕಂಡುಬರುತ್ತಾರೆ. ಅದೇ ಸಂದರ್ಭದಲ್ಲಿ ಬಂದಿದ್ದಂತಹ ಇದೇ ಇಂತಹ ವಿಭಿನ್ನ

ಮನೋಧರ್ಮದ ಕಾದಂಬರಿಯೆಂದರೆ ಅ.ನ.ಕೃ. ಅವರ 'ಸಂಧ್ಯಾರಾಗ'. ಇಲ್ಲಿ ಚಂದ್ರಸಾನಿಯ ಸಾವು ವೆಂಕಟಸುಬ್ಬಯ್ಯನ ವ್ಯಕ್ತಿತ್ವವನ್ನು ಪುಟಕ್ಕಿಟ್ಟ ಚಿನ್ನವಾಗಿಸುತ್ತದೆ.

ತ.ರಾ.ಸು. ಅವರ ಕಾದಂಬರಿಗಳಲ್ಲಿ ಜನಸಾಮಾನ್ಯರ ಮನಸನ್ನೂ ಗೆದ್ದಂತಹ ಕಾದಂಬರಿಗಳಲ್ಲಿ 'ನಾಗರಹಾವು', 'ಎರಡು ಹೆಣ್ಣು', 'ಒಂದುಗಂಡು', 'ಸರ್ಪಮತ್ಸರ'. ಸಾಮಾಜಿಕ ಮೌಲ್ಯ ಹಾಗೂ ವೈಯಕ್ತಿಕ ಮೌಲ್ಯಗಳ ತಿಕ್ಕಾಟದಲ್ಲಿ ವ್ಯಕ್ತಿಯ ಬದುಕು ದುರಂತದ ಹಾದಿ ಹಿಡಿಯುವುದೇ ಈ ಕಾದಂಬರಿ ಮಾಲೆಯ ವಸ್ತು. ಇಲ್ಲಿ ರಾಮಾಚಾರಿ ಕೇಂದ್ರ ವ್ಯಕ್ತಿ. ಒಂದೊಂದು ಕಾದಂಬರಿಯು ಅವನ ವ್ಯಕ್ತಿತ್ವವನ್ನು ಕಡೆದು ನಿಲ್ಲಿಸುತ್ತದೆ. ರಾಮಾಚಾರಿ ಗೆಳೆಯರೊಂದಿಗೆ ಪುಂಡಾಟಿಕೆಯಲ್ಲಿ ತೊಡಗಿದ್ದವನು, ಊರಿನ ಜನರೆಲ್ಲ ಶಪಿಸುತ್ತಿರುತ್ತಾರೆ "ಸೋನಾಬಾಯಿ ಎಂಥ ಹೊತ್ತಿನಲ್ಲಿ ಹಡೆದಳೋ ಈ ಮಗನ್ನ ಇವನಿದ್ದ ಮನೆ, ಊರು ಎರಡೂ ತಣ್ಣಗಿರೋಲ್ಲರೀ"(ಪುಟ೪೬) ಎಂದು ದೂಷಿಸುತ್ತಾರೆ. ಇಂತಹ ರಾಮಾಚಾರಿಯ ಬದುಕಲ್ಲಿ ಇಬ್ಬರು ಸ್ತ್ರೀಯರು ಪ್ರವೇಶಿಸುತ್ತಾರೆ ಅಲುಮೇಲು ಮತ್ತು ಮಾರ್ಗರೇಟ್. ಜಲೀಲನ ಕಾಟದಿಂದ ಅಲುಮೇಲುವನ್ನು ತಪ್ಪಿಸಲು ಅವಳ ಅಣ್ಣ ವರದಯ್ಯಂಗಾರಿಯ ಮಾತಿನಂತೆ ರಾಮಾಚಾರಿ ಅಲುಮೇಲುವನ್ನು ಪ್ರೀತಿಸುತ್ತಾನೆ. ಆದರೆ ಮಾರ್ಗರೇಟ್ ದಿಟ್ಟ ಸ್ವಭಾವದ ಹೆಣ್ಣು. ರಾಮಾಚಾರಿ ಚಾಮಯ್ಯ ಮೇಷ್ಟ್ರುಗಳ ಬುದ್ಧಿ ಮಾತನ್ನು ಕೇಳಿ ಇಬ್ಬರಿಂದಲೂ ದೂರವಾಗುತ್ತಾನೆ. ಆದರೆ ಇವರಿಬ್ಬರಲ್ಲಿಯೂ ರಾಮಚಾರಿಯ ಬಗ್ಗೆ ಪ್ರೀತಿಯ ಸೆಳೆತವಿರುತ್ತದೆ. ಇಲ್ಲಿ ಅಲಮೇಲು ತಾನಾಗಿಯೇ ಒಲಿದು ಬಂದ ಹೆಣ್ಣು. "ತನ್ನ ಅಂದಿನವರೆಗಿನ ಜೀವನದಲ್ಲಿ ರಾಮಾಚಾರಿ ಎಷ್ಟೋ ಹುಡುಗಿಯರನ್ನು ನೋಡಿದ್ದ. ಚಿಕ್ಕವನಾಗಿದ್ದಾಗ, ಎಷ್ಟೋ ದಿನ ಅಕ್ಕಪಕ್ಕದ ಮನೆಯ ಹುಡುಗಿಯರೊಂದಿಗೆ ಆಟ ಆಡಿದ್ದ......ಎಂದು ಇಲ್ಲದುದು ಇಂದು ಮಾತ್ರ ಹೇಗೊ ಏಕೋ ಅವಳ ಕಣ್ಣುಗಳು ಅವನಿಗೆ ಏನೋ ಮೋಡಿಯನ್ನು ಮಾಡಿ, ಅವನ ಹೃದಯದಲ್ಲಿ ಭಾವತರಂಗಗಳನ್ನು ಕಲಕಿದ್ದವು." (ನಾಗರಹಾವು ಪು-೧೪೩) ಈ ರೀತಿ ಅಲಮೇಲುವನ್ನು ಅಂದು ನೋಡಿದಾಗ ರಾಮಚಾರಿ ನರನರಗಳಲ್ಲೂ ಅಪೂರ್ವ ಹರ್ಷದ ನೆರೆ ತುಂಬುತ್ತದೆ. ದ್ವೇಷ ಪ್ರೀತಿಯಾಗಿ ಮಾರ್ಪಟ್ಟ ಹೆಣ್ಣು ಮಾರ್ಗರೇಟ್. ಇವರಿಬ್ಬರ ಸೆಳೆತಕ್ಕೆ ಸಿಕ್ಕಿದ ರಾಮಾಚಾರಿ ಬದುಕಲ್ಲಿ ನೆಮ್ಮದಿ ಕಳೆದುಕೊಳ್ಳುತ್ತಾನೆ. ಒಲಿದು ಬಂದ ಎರೆಡು ಹೆಣ್ಣುಗಳಲ್ಲಿ ಯಾರನ್ನೂ ಬಿಡಲಾಗದ ಸಂದಿಗ್ದಕ್ಕೆ ಸಿಲುಕಿ ಮಾನಸಿಕ ನೆಮ್ಮದಿ ಕಳೆದುಕೊಳ್ಳುತ್ತಾನೆ. ಕೆಲವೇಳೆ ಅನಿವಾರ್ಯ ಒತ್ತಡಗಳು ಹಾಗೂ ಸಂದರ್ಭಗಳು ಮನುಷ್ಯ ಪ್ರೀತಿಯ ಸುಳಿಗೆ ಸಿಲುಕುವಂತೆ ಮಾಡುತ್ತವೆ. ಇಲ್ಲಿ ವ್ಯಕ್ತಿ ನಡವಳಿಕೆಗಿಂತ ಅವನಿರುವ ಪರಿಸರವೂ ಕಾರಣವಾಗುತ್ತದೆ. ತಂದೆಯ ಸಾವು, ಪ್ರೀತಿಸಿದ ಹೆಣ್ಣಿನ ಅಗಲಿಕೆ ರಾಮಾಚಾರಿಯ ವ್ಯಕ್ತಿತ್ವದ ಮೇಲೆ ಪರಿಣಾಮ ಬೀರುತ್ತವೆ.

ಏಕಾಂತವಾಗಿ ಅಲಮೇಲು ರಾಮಚಾರಿಯನ್ನು ಭೇಟಿಯಾದಾಗ ಶಾಮಯ್ಯಂಗಾರ್‍ರು ಅವಳ ಶೀಲವನ್ನೇ ಶಂಕಿಸುತ್ತಾರೆ. ಅಂದರೆ ಸತ್ಯವಾದ ವಿಚಾರವನ್ನು ಅರಿಯುವ, ವಿವೇಚಿಸುವ ಪ್ರಜ್ಞೆ ಇಲ್ಲಿಯ ಸಮಾಜಕ್ಕಿರುವುದಿಲ್ಲ. 'ನಾಗರಹಾವು' ಪ್ರೇಮ ಕಾದಂಬರಿ ಆದರೂ ನಾಯಕನ

ಪ್ರೇಮ ಅಸಾಧಾರಣವಾದುದು ಮತ್ತು ವೈವಿಧ್ಯಮಯವಾದುದು. ಇಲ್ಲಿ ದೈಹಿಕ ಆಕರ್ಷಣೆಗಿಂತ ಮಾನಸಿಕ ಹೊಂದಾಣಿಕೆ ಮುಖ್ಯವಾಗುತ್ತದೆ. ಏಕಕಾಲಕ್ಕೆ ಎರೆಡು ಹೆಣ್ಣುಗಳ ಮೋಹಕ್ಕೆ ಸಿಲುಕಿದರೂ ರಾಮಚಾರಿ ಎಲ್ಲಿಯೂ ಲಂಪಟನಂತೆ, ಕಾಮಿಯಂತೆ ಕಂಡುಬರುವುದಿಲ್ಲ. ಪ್ರಾಮಾಣಿಕ ಪ್ರೀತಿಯನ್ನು ಈ ಸಮಾಜ ಮಾನ್ಯ ಮಾಡುವುದಿಲ್ಲವೆಂಬುದು ಈ ಕಾದಂಬರಿ ಮಾಲೆಯಲ್ಲಿ ಕಂಡುಬರುತ್ತದೆ.

ತ.ರಾಸು ಅವರ ಸಾಮಾಜಿಕ ಕಾದಂಬರಿಗಳಲ್ಲಿನ ಸ್ತ್ರೀಲೋಕ ಬಹುಮುಖವಾದ ಸಮಸ್ಯೆಗಳ ಲೋಕವನ್ನೇ ಕಟ್ಟಿಕೊಡುತ್ತದೆ. ಗ್ರಾಮೀಣ ಪರಿಸರದಿಂದ ಆರಂಭವಾಗಿ ನಗರದ ನಾಗರಿಕ ಬದುಕಿನ ಸ್ತ್ರೀಯರ ಕೂಡ ಸಮಸ್ಯೆಗಳ ಸಾಗರದಲ್ಲಿಯೇ ತೇಲಾಡುತ್ತಾಳೆ. ಪ್ರಗತಿಶೀಲ ಸಂದರ್ಭದಲ್ಲಿ ಬೇರೆ ಕೃತಿಕಾರಗಿಂತ ತ.ರಾ.ಸು ಸ್ತ್ರೀಯ ಸಮಸ್ಯೆ ಚಿತ್ರಿಸುವುದರಲ್ಲಿ ಭಿನ್ನವಾಗಿಯೇ ಕಂಡುಬರುತ್ತಾರೆ. ಅ.ನ.ಕೃ, ಕಟ್ಟೀಮನಿ, ನಿರಂಜನ ಅವರಿಗಿಂತ ತ.ರಾ.ಸು ಅವರ ಕಾದಂಬರಿಗಳಲ್ಲಿನ ಸ್ತ್ರೀಯರು ಬಹುಬೇಗನೆ ಓದುಗರ ಮನಮುಟ್ಟುವ ಗುಣ ಹೊಂದಿರುವುದರಿಂದ ಇದಕ್ಕೆ ಕಾರಣ ಇವರ ಬಹಳಷ್ಟು ಕಾದಂಬರಿಗಳು. ಸಿನಿಮಾಗಳಾದದ್ದು ಒಂದು ಪ್ರಮುಖವಾದ ಅಂಶ ಹೇಳಬಹುದಾಗಿದೆ. ಏಕೆಂದರೆ ದೃಶ್ಯಮಾಧ್ಯಮ ಶ್ರವಣಮಾಧ್ಯಮಕ್ಕಿಂತಲೂ ಬೇಗನೆ ಆಕರ್ಷಿಸುವ ಮತ್ತು ಪ್ರಚಾರ ಪಡೆಯುವ ಮಾಧ್ಯಮವಾಗಿರುವುದರಿಂದ. ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳಲ್ಲಿ 'ಹಂಸಗೀತೆ', 'ಗಾಳಿಮಾತು', 'ಮಸಣದ ಹೂವು', 'ಬಿಡುಗಡೆಯ ಬೇಡಿ', 'ಬೆಂಕಿಯ ಬಲೆ', 'ನಾಗರಹಾವು', 'ಚಂದವಳ್ಳಿಯ ತೋಟ', 'ಆಕಸ್ಮಿಕ' ಮುಂತಾದುವು ಸಿನಿಮಾಗಳಾಗಿದ್ದು ಓದುಗವರ್ಗದ ಆಕರ್ಷಣೆಗೆ ಕಾರಣವಾಯಿತು. ಮುಂದಿನ ಅಧ್ಯಾಯದಲ್ಲಿ ತ.ರಾ.ಸು ಕಾದಂಬರಿಗಳು ಮತ್ತು ಸಮೂಹ ಮಾಧ್ಯಮವೆಂದು ಚರ್ಚಿಸಲಾಗುತ್ತದೆ.

ಕೃತಿಕಾರನಿಗೆ ಸಾಮಾಜಿಕ ಜವಾಬ್ದಾರಿ ತುಂಬಾ ಮುಖ್ಯವಾಗಿರುತ್ತದೆ. ಒಂದೇ ಸಮಸ್ಯೆಯನ್ನು ಬೇರೆ ಬೇರೆ ಕೃತಿಕಾರರು ವಿಭಿನ್ನ ದೃಷ್ಟಿಕೋನಗಳಿಂದ ನೋಡುತ್ತಾರೆ. ಉದಾ: ಸ್ತ್ರೀಸಮಸ್ಯೆಯನ್ನು ತ.ರಾ.ಸು ಅವರು ಗ್ರಹಿಸಿರುವ ದೃಷ್ಟಿಕೋನಕ್ಕೂ ಶಿವರಾಮ ಕಾರಂತರು ಗ್ರಹಿಸುವ ದೃಷ್ಟಿಕೋನಕ್ಕೂ ವ್ಯತ್ಯಾಸವಿದೆ. ಕಾರಂತರ ಕಾದಂಬರಿಗಳಲ್ಲಿನ ಸ್ತ್ರೀಯರು ಅನೇಕ ಸಮಸ್ಯೆಗಳಿಗೆ ಸಿಲುಕಿದವಳೆ. ಆಕೆ ಹಿಂದಿನಿಂದ ಸಾಂಪ್ರದಾಯಿಕವಾಗಿ ನಡೆದು ಬಂದ ಚೌಕಟ್ಟಿನಲ್ಲಿಯೇ ಸಾಗುತ್ತಾಳೆ. ಕಾರಂತರ ಕಾದಂಬರಿಗಳಲ್ಲಿನ ಸ್ತ್ರೀಯರು ನಂಬಿಕೊಂಡು ಬಂದಿರುವ ಮೌಲ್ಯಗಳೆಂದರೆ ಪುರುಷರ ಹಿತಾಸಕ್ತಿಗನುಗುಣವಾದ ಸಾಂಸ್ಕೃತಿಕ ಒತ್ತಡಗಳು, ಮದುವೆ, ನಂಬಿಕೆ, ಆಚರಣೆಗಳಲ್ಲಿ ಆಕೆ ಪರಂಪರೆಯನ್ನು ಮೀರುವುದಿಲ್ಲ. ಉದಾ: 'ಬೆಟ್ಟದಜೀವ'ದಲ್ಲಿನ ಶಂಕರಿ ಯಂತಹವರು. ಆದರೆ ತ.ರಾ.ಸು ಅವರ 'ಬಿಡುಗಡೆಯ ಬೇಡಿ', ಕಾದಂಬರಿಯಲ್ಲಿನ ಪ್ರಭಾವತಿ ಸಂಪ್ರದಾಯವನ್ನು ಮೀರಿ ಸ್ತ್ರೀ ಸ್ವಾತಂತ್ರ್ಯ ಬಯಸುವ, ವಿವಾಹದಂತಹ ಪವಿತ್ರ ಸಂಸ್ಥೆಯ ಚೌಕಟನ್ನು ಲೆಕ್ಕಿಸದೆ ಮಂಗಳಸೂತ್ರವನ್ನು ಕಿತ್ತುಹಾಕುವ, ತನಗೆ

ಬೇಕಾದ ಬಾಳಸಂಗಾತಿಯ ಆಯ್ಕೆಯಲ್ಲಿ ಸ್ವತಂತ್ರ ಬಯಸುವವಳಾಗಿದ್ದಾಳೆ. ಒಟ್ಟಾರೆ ಸಂಪ್ರದಾಯದ ಬದುಕಿನ ಮೌಲ್ಯಗಳನ್ನೆಲ್ಲ ಧಿಕ್ಕರಿಸುವವಳು. ಮುಂಬಯಿ ನಗರದಂತಹ ಬದುಕನ್ನು ಬಯಸುವವಳು. ಸ್ವೇಚ್ಛೆಯಾಗಿ ಬದುಕುವ ಹಠದ ಸ್ವಭಾವದವಳಾದ ಪ್ರಭಾವತಿ ಪುರುಷ ದ್ವೇಷಿಯಾಗಿ ಕಂಡು ಬರುತ್ತಾಳೆ. ಕಾರಂತರ ಕಾದಂಬರಿಗಳಲ್ಲಿನ ಸ್ತ್ರೀಯು ಹೊಲ, ಗದ್ದೆ, ತೋಟಗಳಲ್ಲಿ ಹಗಲಿರುಳು ದುಡಿಯುವವಳು. ತ್ಯಾಗ, ಸೇವೆ, ದುಡಿಮೆ, ಅಂತಃಕರಣ ಮುಂತಾದ ಪರಂಪರಾಗತ ಮೌಲ್ಯಗಳನ್ನು ನಂಬಿ ಬದುಕು ಸಾಗಿಸುವವರು. ಆದರೆ ತ.ರಾ.ಸು ಅವರ ಕಾದಂಬರಿಗಳಲ್ಲಿನ ಸ್ತ್ರೀ ಸಂಪ್ರದಾಯದ ಚೌಕಟ್ಟನ್ನು ಮೀರಿ ನಿಲ್ಲುವವಳಾಗಿದ್ದು ಆದುನಿಕ ಜಗತ್ತಿನ ಸ್ತ್ರೀ ಸಂವೇದನೆಗೆ ಸ್ಪಂದಿಸುವವಳಾಗಿದ್ದಾಳೆ.

"ಕಾರಂತರ ಕಾದಂಬರಿಗಳಲ್ಲಿನ ಸ್ತ್ರೀಯರು ಹಲವು ರೀತಿಯ ಸಾಂಸಾರಿಕ ತೊಳಲಾಟಗಳಲ್ಲಿ ಸಿಕ್ಕಿ ನೊಂದವರಾಗಿದ್ದಾರೆ. ಇವರಿಗೆ ಮದುವೆಯೆಂಬುದು ಬದುಕಿನ ಬಹುನಿರ್ಧಾರಕ ಅಂಶವಾದರೂ ಈ ಬದುಕು ಮುಂದೆ ಏನಾದೀತು ಎನ್ನುವುದು ನಿರ್ಧಾರವಾಗುವುದು ಚಿನ್ನ, ಜಾತಕ, ಗೋವು, ಜಾತಿಗಳಿಂದ. ಎಂಥ ಗಂಡ ದೊರೆತಾನು ಎನ್ನುವುದು ಇಂಥ ಬದುಕಿನ ಒಳಹೊಕ್ಕ ನಂತರವೇ ಬಂದೀತು" [೧೨]. ಎನ್ನುವುದು ಕಾರಂತರ ಕಾದಂಬರಿಗಳಲ್ಲಿನ ಸ್ತ್ರೀಯರ ಬದುಕಿನ ಮೌಲ್ಯ ತಿಳಿಸುತ್ತದೆ. ಆದರೆ ತ.ರಾ.ಸು ಅವರ ಕಾದಂಬರಿಗಳಲ್ಲಿನ ಸ್ತ್ರೀ ಇದೆಲ್ಲವನ್ನು ಮೆಟ್ಟಿ ನಿಲ್ಲುವವಳು. ಉದಾಃ 'ಬಿಡುಗಡೆಯ ಬೇಡಿ' ಪ್ರಭಾವತಿ ಪಾತ್ರ 'ಯಕ್ಷ ಪ್ರಶ್ನೆ' ಮುಂತಾದ ಕಾದಂಬರಿಗಳ ಪಾತ್ರಗಳು..

ಬದುಕಿನಲ್ಲಿ ಬಂದದ್ದೆಲ್ಲವನ್ನೂ ನುಂಗಿಕೊಂಡು ತಾನೂ ಬದುಕಿ ಇತರರನ್ನು ಸಲಹುವ ಚೈತನ್ಯವನ್ನ ಕಾರಂತರ ಕಾದಂಬರಿಗಳ ಸ್ತ್ರೀಯರ ತ್ಯಾಗದಲ್ಲಿ ಕಾಣುತ್ತೇವೆ. ತ್ಯಾಗ, ಸೇವೆ, ಅವರ ಅಂತಃಕರಣಕ್ಕೆ ಹೆಚ್ಚಿನ ಒತ್ತುಕೊಟ್ಟ ಕಾರಂತರು ಸ್ತ್ರೀ ಪಾತ್ರಗಳಿಗೆ ಒಂದು ಘನತೆಯನ್ನು ತಂದು ಕೊಟ್ಟಿದ್ದಾರೆ. ಈ ತರಹದ ತ್ಯಾಗಮನೋಭಾವ, ಅರ್ಪಣಾ ಮನೋಭಾವ ತ.ರಾ.ಸು ಅವರ ಐತಿಹಾಸಿಕ ಕಾದಂಬರಿಗಳಲ್ಲಿ ಕಂಡುಬರುತ್ತದೆ. ಅಲ್ಲಿನ ನಾಗತಿಯರ ಬದುಕು, ಸಹಗಮನ ಮುಂತಾದ ವಿಷಯಗಳಲ್ಲಿ ಆಕೆ ತಳೆಯುವ ನಿರ್ಧಾರ. ತಮ್ಮ ಕುಟುಂಬ, ಮಕ್ಕಳನ್ನು ಕಾಪಾಡಿ ಬೆಳೆಸುವ ಕೆಚ್ಚಿನ ಸ್ತ್ರೀಯರಂತೆ ಅವರ ತ್ಯಾಗದ ಹಿನ್ನೆಲೆಯಲ್ಲಿ ಕಾರಂತರು ಚಿತ್ರಿಸಿದ್ದಾರೆ. ಉದಾಃ ಮರಳಿಮಣ್ಣಿಗೆಯಲ್ಲಿನ ನಾಗವೇಣಿ ತರಹದವರು ಗಂಡನಿದ್ದು ಒಂಟಿತನ ಅನುಭವಿಸುವ ಸ್ತ್ರೀಯರು ವಿವಾಹದ ಚೌಕಟ್ಟಿಗೆ ಮೀರಿದ ಸಂಬಂಧಗಳಲ್ಲಿ ಅನ್ಯಾಯ ವಂಚನೆಗಳಿಂದ ಸೆಳೆಯಲ್ಪಟ್ಟವರು. ಇವರನ್ನು ಕಾರಂತರು ಮಾನವಸಹಜ ಮೈಮನಗಳ ತುಯ್ತವೆಂದು, ಹೆಣ್ಣಿನ ಸಂತಾನಪೇಕ್ಷೆಯ ಸೆಳೆತವೆಂದು ಕಾರಂತರು ಚಿತ್ರಿಸುತ್ತಾರೆ. 'ಚೋಮನ ದುಡಿ' ಬೆಳ್ಳಿ 'ಸರಸಮ್ಮನ ಸಮಾಧಿ' ಭಾಗೀರಥಿ ಮುಂತಾದವರು. ಆದರೆ ಇಂತಹ ಸ್ತ್ರೀಯರ ಬದುಕನ್ನು ತ.ರಾ.ಸು ಅವರು ಚಿತ್ರಿಸುವ ರೀತಿಯೇ ಬೇರೆ. ಅತೃಪ್ತ ಲೈಂಗಿಕತೆಯೆಂದೋ ವೇಶ್ಯಾಸಮಸ್ಯೆಯೆಂದೋ ಬಿಂಬಿಸುತ್ತಾರೆ. ಇಬ್ಬರೂ ಕಾದಂಬರಿಕಾರರು ಬ್ರಾಹ್ಮಣ ಜಾತಿಯವರಾದರೂ, ಪರಂಪರೆ ಮತ್ತು

ಮೌಲ್ಯಗಳನ್ನು ನಂಬಿರುವ ಕಾರಂತರು, ಆಧುನಿಕತೆಗೆ ತನ್ನನ್ನು ತೆರೆದು ಕೊಂಡಿರುವ ತ.ರಾ.ಸು ಅವರು ಪರಸ್ಪರ ಭಿನ್ನವಾಗಿ ಕಾಣಿಸುತ್ತಾರೆ. ಪ್ರಗತಿಶೀಲ ಸಂದರ್ಭದ ಬಹುತೇಕ ಲೇಖಕರು ಸ್ತ್ರೀಸಮಸ್ಯೆಗಳನ್ನು ಎತ್ತಿಕೊಂಡು ಕೃತಿಗಳನ್ನು ರಚಿಸಿದ್ದಾರೆ. ಆದರೆ ಪ್ರಗತಿಶೀಲರಿಗಿಂತಲೂ ಹಿಂದೆಯೇ ಕೃತಿ ರಚಿಸಿದವರಲ್ಲಿಯೂ ಪ್ರಗತಿ ಮನೋಭಾವ ಮತ್ತು ಸ್ತ್ರೀಸಂವೇದನೆಯನ್ನು ಕಾಣುತ್ತೇವೆ. ಕುವೆಂಪು ಅವರ 'ಕಾನೂರುಹೆಗ್ಗಡಿ, ಕಾರಂತರ ಕಾದಂಬರಿಗಳು. ಕಾರಂತರ ಕಾದಂಬರಿಗಳ ಆದರ್ಶ ಲಕ್ಷಣವೆಂದರೆ ಸ್ತ್ರೀ ಪುರುಷರು ಪರಸ್ಪರರಿಗೆ ನಿಷ್ಠವಾಗಿರುವ, ಕುಟುಂಬಕ್ಕೆ ಬದ್ಧವಾಗಿರುವ ಸಮಾಜ ಅವರ ಕೃತಿಗಳಲ್ಲಿ ಅಂತರ್ಗತವಾಗಿದೆ. ಸಂಪ್ರದಾಯ, ರೂಢಿಗಳು, ಕುರುಡು ನಂಬಿಕೆಗಳು, ದಾಂಪತ್ಯದ ವಿರಸ ಮುಂತಾದುವುಗಳು. ಉದಾ: ಸರಸಮ್ಮನ ಸಮಾಧಿಯನ್ನು ಕಾಣಬಹುದು. ಇಂತಹ ಸಮಸ್ಯೆಗಳಿಗೆ ಆದ್ಯತೆ ನೀಡಿದ ಕಾರಂತರ ಈ ಸಮಸ್ಯೆಗಳಿಗೆ ಕಾರಣ ಮತ್ತು ಪರಿಹಾರವೆಂದರೆ ಆಧುನಿಕ ಶಿಕ್ಷಣ, ಉದ್ಯೋಗವಕಾಶಗಳು ಎನ್ನುತ್ತಾರೆ. ಆದರೆ ಆಧುನಿಕ ಶಿಕ್ಷಣ ಪಡೆದ ತ.ರಾ.ಸು ಕಾದಂಬರಿಗಳಲ್ಲಿನ ಸ್ತ್ರೀ ತನ್ನ ಬದುಕಿನಲ್ಲಿ ಸಮಸ್ಯೆಗಳನ್ನೇ ತಂದು ಕೊಳ್ಳುತ್ತಾಳೆ. ಆಧುನಿಕ ಶಿಕ್ಷಣ ಪಡೆದ ಮಹಿಳೆ ಸಮಸ್ಯೆಗಳಿಂದ ಪಾರಾಗುವುದನ್ನಾಗಲಿ, ಆ ತರಹದ ಗಂಭೀರವಾದ ಆಲೋಚನೆಗೆ ಓದುಗರನ್ನು ತೊಡಗಿಸುವುದಿಲ್ಲವೆಂಬುದು ತ.ರಾ.ಸು. ಅವರ ಕಾದಂಬರಿಗಳಲ್ಲಿ ಕಂಡು ಬರುತ್ತದೆ.

ಸ್ತ್ರೀಸಂವೇದನೆಯನ್ನು ಗುರುತಿಸುವ ಸಂದರ್ಭದಲ್ಲಿ ಪುರುಷ ಲೇಖಕರು ಸ್ತ್ರೀ ಸಮಸ್ಯೆಯನ್ನೊಳಗೊಂಡ ಕೃತಿ ರಚಿಸುವುದಕ್ಕೂ ಸ್ತ್ರೀಯರೆ ಸ್ತ್ರೀಸಮಸ್ಯೆಗಳನ್ನು ಒಳಗೊಂಡ ಕೃತಿ ರಚಿಸುವುದಕ್ಕೂ ವ್ಯತ್ಯಾಸವಿರುತ್ತದೆಂಬುದು ಈ ವಿಶ್ಲೇಷಣೆಯಿಂದ ಸ್ಪಷ್ಟವಾಗುತ್ತದೆ. ಆಧುನಿಕ ಮಹಿಳಾ ಬರಹಗಾರ್ತಿಯರ ದೊಡ್ಡ ಆಕ್ಷೇಪವೆಂದರೆ ಪುರುಷ ಲೇಖಕರು ಮಹಿಳೆಯರನ್ನು ಕಡೆಗಣಿಸಿರುವುದು ಹಾಗೂ ಮಹಿಳೆಗೆ ಎರಡನೆ ದರ್ಜೆಸ್ಥಾನ ಕಲ್ಪಿಸಿದ್ದಾರೆಂಬುದು. ತ.ರಾ.ಸು ಅವರು ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿರುವ ಸ್ತ್ರೀಪ್ರಪಂಚ, ಹಾಗೆಯೇ ಮಹಿಳೆಯೊಬ್ಬಳು ಮಹಿಳೆಯ ಬಗ್ಗೆ ಹೇಗೆ ಚಿತ್ರಿಸಿಬಲ್ಲಳೆಂಬುದು. ಅಂದರೆ ಸ್ತ್ರೀಸಮಸ್ಯೆಗಳನ್ನು ಪುರುಷನಿಗಿಂತಲೂ ಮಹಿಳೆ ಅರ್ಥ ಮಾಡಿಕೊಳ್ಳುವ ಬಗೆ ಭಿನ್ನ. ಇತ್ತೀಚಿನ ದಿನಗಳಲ್ಲಿ ಸ್ತ್ರೀವಾದದ ಬಗ್ಗೆ ಹೆಚ್ಚು ಹೆಚ್ಚು ಚರ್ಚೆಯಾಗುವ ಸಂದರ್ಭದಲ್ಲಿ ಸಿಮೊನೆ ದಿ ಬೋವಾ ರಂತಹ ಮಹಿಳಾವಾದಿ ಬರಗಹಾರ್ತಿಯರ ಚಿಂತನೆ ಮುಖ್ಯವಾಗುತ್ತದೆ.

ಸಿಮೊನೆ ದಿ ಬೋವಾ ಮಹಿಳೆಯನ್ನು ಕುರಿತಂತೆ ತನ್ನದೇ ಆದ ರೀತಿಯಲ್ಲಿ ವ್ಯಾಖ್ಯಾನಿಸುತ್ತಾಳೆ. ಆಕೆ ಮಹಿಳೆ ಬಗ್ಗೆ ಮಂಡಿಸುವ ವಿಚಾರಗಳು ಇಂತಿವೆ.

I. ಅನ್ಯವಾದಿ ಸೂಚ್ಯೆ : ಸ್ತ್ರೀಯಾದವಳು ಮಾನವ ರೂಪದಲ್ಲಿರುವ ಪುರುಷಸಂಬಂಧಿ ಸಂಪೂರ್ಣ ಪ್ರತಿನಿಧಿ. ಮುಂದುವರೆದು

ಪುರುಷತ್ವದ ವಿವಿಧ ಆಯಾಮಗಳು ಅವಳಲ್ಲಿ ಕಂಡುಬರುತ್ತವೆ. ಇದಕ್ಕೆ ಸಂಬಂಧಿಸಿದ ಸಮರ್ಥನೆಯನ್ನು ಈ ಕೆಳಗಿನಂತೆ ಕೊಡುತ್ತಾಳೆ.

೧. ಮಾನವ ಸಂಬಂಧಿಯಾದ ಲಕ್ಷಣಗಳು ಪುರಾತತನ ಕಾಲದಿಂದಲೂ ಕಂಡು ಬರುತ್ತಿವೆ.

೨. ಸ್ತ್ರೀಯಾದವಳಿಗೆ ಸ್ವತಂತ್ರ ಅಸ್ತಿತ್ವವಿಲ್ಲ.

೩. ಸ್ತ್ರೀ ಪುರಾತನ ಕಾಲದಿಂದಲೂ ಪುರುಷನಿಗೆ ಅಡಿಯಾಳಾಗಿರುವ ಮೂಲಭೂತ ವಸ್ತು.

೪. ಸ್ತ್ರೀ ಅಪೂರ್ಣಳು ಮತ್ತು ಅನ್ಯಳಾಗಿ ಕಂಡುಬರುತ್ತಾಳೆ.

೫. ಸ್ತ್ರೀ ಪುರಾಣ ಮತ್ತು ಸಮಾಜಗಳ ರಚನೆಯಲ್ಲಿ ಅನ್ಯಳಾಗಿ ಕಂಡುಬರುತ್ತಾಳೆ.

ಹೀಗೆ ಸಿಮೋನ್ ದಿ ಬೋವಾ ಅವರು ಅನ್ಯವಾದಿ ಸೂಚ್ಯೆ ಚರ್ಚೆಯಡಿಯಲ್ಲಿ ಸ್ತ್ರೀಯನ್ನು ಕುರಿತಂತೆ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾ ಮುಂದುವರೆದು ಹೇಳುತ್ತಾಳೆ.

## II. ಲಿಂಗಭೇದ ಮತ್ತು ಲಿಂಗಾಧಾರಿತ ಅಸಮಾನತೆ :

೧. ಸ್ತ್ರೀ ಗರ್ಭಕೋಶ ಸಂತಾನಾವೃತವಾಗಿರುವವಳು

೨. ಸ್ತ್ರೀ ಭಾವನಾಜೀವಿ.

೩. ಸ್ತ್ರೀಗೆ ಪುರುಷನಷ್ಟು ದೈತ್ಯಶಕ್ತಿ ಇಲ್ಲ

೪. ಸ್ತ್ರೀ ಮಾನಸಿಕ ಮತ್ತು ಋತುಸ್ರಾವ

೫. ಸ್ತ್ರೀ ಪ್ರಸವ ವೇದನೆ.

೬. ಸ್ತ್ರೀ ಪುರುಷನಂತೆ ನೇರವಾಗಿ ಓಡಲಾರಳು

೭. ಸ್ತ್ರೀ ಪುರುಷನಿಗಿಂತ ದುರ್ಬಲಳು ಮತ್ತು ಪುರುಷನಿಗಿದ್ದಷ್ಟು ಸಂಕಲ್ಪಶಕ್ತಿ ಇಲ್ಲದವಳು.

ಹೀಗೆ ಬದುಕಲ್ಲಿ ಜೈವಿಕ ಸಾಕ್ಷಿಯ ಸ್ತ್ರೀ ಪುರುಷನಿಗಿಂತ ಭಿನ್ನಳೆನಿಸುತ್ತಾಳೆ ಹೊರತು ಕೀಳು ಎಂದು ಹೇಳಿಲ್ಲ. ಲಿಂಗಭೇದ ಒಂದು ಶ್ರೇಣೀಕೃತ ಮುಖ್ಯವೆನ್ನುತ್ತಾಳೆ. ಈ ರೀತಿಯಯಾಗಿ ಸ್ತ್ರೀವಾದ ಕುರಿತು ಚರ್ಚಿಸುವಾಗ ಸಿಮೋನ್‌ದಿಬೋವಾ ಅವರು ತಮ್ಮ ಅಭಿಪ್ರಾಯಗಳನ್ನು ಮಹಿಳೆಯ ಬಗ್ಗೆ ವ್ಯಕ್ತಪಡಿಸುತ್ತಾಳೆ. ಪರಂಪರಾನುಗತವಾಗಿ ಮಹಿಳೆ ಪುರುಷ ಸಮಾಜದ ಅಡಿಯ್ಯಲಿಯೇ ಚಿತ್ರಿಸಿಲ್ಪಟ್ಟಿದ್ದಾಳೆ. ಸ್ವತಃ ಮಹಿಳಾವಾದಿಬೋವಾ ಅವರ ಮಾತಿನಲ್ಲಿಯೂ ಈ ತರಹದ ಧೋರಣೆ ವ್ಯಕ್ತವಾಗಿರುವುದು ಕಂಡುಬರುತ್ತದೆ.

ಅನಂತರ ಕೇಟ್ ಮಿಲ್ಲಟ್ ಅವರ ದೃಷ್ಟಿಯಲ್ಲಿ ಮಹಿಳೆಯನ್ನು ಕುರಿತು ಈ ಕೆಳಗಿನಂತೆ ವ್ಯಾಖ್ಯಾನಿಸುತ್ತಾರೆ.

ಇಲ್ಲಿ ಸ್ತ್ರೀಯನ್ನು ಕುರಿತಂತೆ ಹೇಳುವ ಮಾತುಗಳೆಂದರೆ.

೧) ಪಿತೃಪ್ರಧಾನ ವ್ಯವಸ್ಥೆಯಲ್ಲಿ ಸ್ತ್ರೀ ಪರತಂತ್ರಕ್ಕೆ ಸಾಕ್ಷಿಯಾಗುತ್ತಾಳೆ.

೨) ರಾಜಕೀಯ ಶಬ್ದಕ್ಕೆ ನೂತನ ವ್ಯಾಖ್ಯಾನ ನೀಡುತ್ತಾಳೆ

ಎಲ್ಲಾ ಸಮುದಾಯಗಳ ನಡುವಿನ ಅಸಮಧಾನ ಅಧಿಕಾರಾಧಾರಿತ ಸಂಬಂಧವನ್ನು ಪರಿಗಣಿಸುತ್ತದೆಂದು ಹೇಳುತ್ತಾಳೆ.

<u>III. **ಪುರುಷ ಲೈಂಗಿಕ ರಾಜಕೀಯದ ಬಲಿಪಶು ಸ್ತ್ರೀ**</u> ...ಅದನ್ನು ಹೀಗೆ ಹೇಳಿದ್ದಾಳೆ. ೧೯೮೨ 'Feminist criticism and Literature' ಕೃತಿಯಲ್ಲಿ ಶಾರೋನ್ ಸ್ಪೆನ್ಸರ್ ಈ ಕೆಳಗಿನಂತೆ ವಿವರಿಸುತ್ತಾರೆ.

೧) ನಿರ್ಲಕ್ಷಿಸಲ್ಪಟ್ಟಿರುವ ಹಾಗೂ ಲಭ್ಯವಾಗದೆ ಇರುವ ಸ್ತ್ರೀಯರಿಂದ ರಚನೆಯಾದ ಮಹತ್ವದ ಕೃತಿಗಳನ್ನು ಪ್ರಕಟಿಸುವುದು.

೨) ಹಿಂದಿನ ಹಾಗೂ ಇಂದಿನ ಸ್ತ್ರೀಯರ ಕೃತಿಗಳಲ್ಲಿ ಮೂಡಿ ಬಂದಿರುವ ಸ್ತ್ರೀ ಹಾಗೂ ಸ್ತ್ರೀ ಪುರುಷರ ಸಂಬಂಧಗಳ ವಿಶ್ಲೇಷಣೆ ಮತ್ತು ವ್ಯಾಖ್ಯಾನ.

೩) ಲೇಖಕಿಯರನ್ನು ಮತ್ತು ಅವರ ಕೃತಿಗಳನ್ನು ಕುರಿತು ಲೇಖಕರಿಂದ ಬಂದ ವಿಮರ್ಶೆ ಪರಿಶೀಲನೆ.

೪) ಸ್ತ್ರೀಯಲ್ಲಿ ವಿಶಿಷ್ಟ ಪ್ರಜ್ಞಾಬೆಳೆಸಲು ಸೃಜನಶೀಲ ಮತ್ತು ವೈಚಾರಿಕ ಕೃತಿಗಳನ್ನು ವಿಸ್ತೃತವಾಗಿ ರಚಿಸಿ ಪ್ರಕಟಿಸುವುದು.

**೩. ಮೇರಿ ಫರ್ಗೋಸನ್** ಸ್ತ್ರೀಯರನ್ನು ಕುರಿತಂತೆ ತಮ್ಮ ಅಭಿಪ್ರಾಯಗಳನ್ನು ಕೆಳಗಿನಂತೆ ವಿವರಿಸಿಸುತ್ತಾರೆ.

೧) ಸ್ತ್ರೀಯರು ಅಕ್ಷತ ಕನ್ಯೆ ಅಥವಾ ವೇಶ್ಯೆ

೨) ಸ್ತ್ರೀ ದೇವತೆ ಅಥವಾ ರಾಕ್ಷಸಿ

೩) ಸ್ತ್ರೀ ಪತಿವ್ರತೆ ಅಥವಾ ಚಂಡಿ

೪) ಸ್ತ್ರೀ ತಾಯಿ ಅಥವಾ ಮೋಹಿನಿ"[೧೩]

ಈ ರೀತಿ ಆಧುನಿಕ ಮಹಿಳಾವಾದದಲ್ಲಿ ಸ್ತ್ರೀಯನ್ನು ಕುರಿತಂತೆ ಚರ್ಚಿಸಲಾಗುತ್ತದೆ. ಅಂದರೆ ಮಹಿಳೇಯರೇ ಮಹಿಳೆ ಬಗ್ಗೆ ಆಲೋಚಿಸುವ ವಿಧಾನ. ಬರೀ ಪುರುಷ ಮಾತ್ರ ಮಹಿಳೆಯನ್ನು ಪುರುಷನ ಅಧೀನಳೆಂದು ಸೃಷ್ಟಿಸಿಲ್ಲ. ಸ್ತ್ರೀ ಕೂಡ ಪಿತೃಪ್ರಧಾನ ಕೌಟಂಬಿಕ ವ್ಯವಸ್ಥೆಯನ್ನು ಒಪ್ಪಿರುವುದು ಸಿಮೊನ್ ದಿ ಬೋವಾ ಅವರ ಮಾತುಗಳಲ್ಲಿ ವ್ಯಕ್ತವಾಗಿದೆ. (ಸಾಹಿತ್ಯ ವಿಮರ್ಶೆ, ಸಿ.ಎನ್.ರಾಮಚಂದ್ರನ್) ಅಂದರೆ ಮೇಲಿನ ಮೂರು ವಾದಗಳನ್ನು ಇಲ್ಲಿ ಪ್ರಸ್ತುತ ಪಡಿಸಿದ ನನ್ನ ಉದ್ದೇಶವೇನೆಂದರೆ ಮಹಿಳೆಯನ್ನು ಕುರಿತಂತೆ ಪರುಷನಿಗಿಂತ ಮಹಿಳೆ ಯಾವ ರೀತಿ ಭಿನ್ನವಾಗಿ ಆಲೋಚಿಸುತ್ತಾಳೆ ಎಂಬುದನ್ನು ನಿರೂಪಿಸುವುದು. ಸ್ತ್ರೀಯನ್ನು ಕುರಿತಂತೆ ಪುರುಷ ಮತ್ತು ಮಹಿಳೆಯ ದೃಷ್ಟಿಕೋನದಲ್ಲಿ ಅಂತಹ ವ್ಯತ್ಯಾಸವಿದ್ದಂತೆ ಕಂಡುಬರುವುದಿಲ್ಲ ಎಂಬುದಕ್ಕೆ ಸಿಮೊನ್

ದಿ ಬೋವಾ, ಕೇಟ್ ಮಿಲ್ಲಟ್ ಮತ್ತು ಮೇರಿ ಫರ್ಗೂಸನ್ ಅವರ ಅಭಿಪ್ರಾಯಗಳೇ ಸಾಕ್ಷಿಯಾಗುತ್ತವೆ.

ಹೀಗೆ ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳಲ್ಲಿನ ಸ್ತ್ರೀಸಂವೇದನೆ ಗ್ರಹಿಸುವ ಸಂದರ್ಭದಲ್ಲಿ ಪ್ರಧಾನವಾಗಿ ಪ್ರಗತಿಶೀಲ ಸಂದರ್ಭದ ತ.ರಾ.ಸು ಅವರು ಸ್ತ್ರೀಸಮಸ್ಯೆಗಳಿಗೇ ಹೆಚ್ಚು ಒತ್ತು ಕೊಟ್ಟಿದ್ದಾರೆ. ಸಮಾಜದಲ್ಲಿ ಯಾವುದೇ ಸಮಸ್ಯೆ ಭೀಕರ ಸ್ವರೂಪ ಪಡೆಯಲು ಅನೇಕ ಕಾರಣಗಳಿರುತ್ತವೆ. ಅಂತಹ ಕಾರಣಗಳನ್ನು ಗುರುತಿಸುವುದು ಲೇಖಕನ ಜವಾಬ್ದಾರಿ ಕೂಡ. ಅಂತಹ ಕಾರ್ಯವನ್ನು ತ.ರಾ.ಸು ಅವರಲ್ಲಿ ಕಾಣಬಹುದು. ಉದಾ: ವೇಶ್ಯಾಸಮಸ್ಯೆ ಕುರಿತಂತೆ ಇವರಿಗಿಂತಲೂ ಮುಂಚಿತವಾಗಿಯೇ ಅ.ನ.ಕೃ ಅವರು 'ನಗ್ನಸತ್ಯ', 'ಶನಿಸಂತಾನ'ದಂತಹ ಕಾದಂಬರಿಗಳನ್ನು ರಚಿಸಿದ್ದರು. ಇವುಗಳಲ್ಲಿ ಸಮಸ್ಯೆಗಿಂತಲೂ ಹೆಚ್ಚಾಗಿ ವೇಶ್ಯೆಯರ ರಂಗುರಂಗಿನ ಬದುಕನ್ನು ಚಿತ್ರಿಸಿದ್ದಾರೆ. ಈ ಕಾದಂಬರಿಗಳು ಸಮಸ್ಯೆಯ ಮೇಲ್ಪದರವನ್ನಷ್ಟೇ ಚಿತ್ರಿಸುತ್ತವೆ. ಸಮಸ್ಯೆಯ ಆಳಕ್ಕಿಳಿಯುವುದಿಲ್ಲ. ಹೆಣ್ಣು ಇಲ್ಲಿ ವೇಶ್ಯೆಯಾಗುವುದಕ್ಕೆ ಅಂತಹ ಗಂಭೀರವಾದ ಸಮಸ್ಯೆಗಳೇನೂ ಇಲ್ಲ. ಒಮ್ಮೆ ದೈಹಿಕ ಸುಖಪಡೆದ ಹೆಣ್ಣು ಸಲೀಸಾಗಿ ಆ ವೃತ್ತಿಗಿಳಿಯುತ್ತಾಳೆ. ಅವಳಿಗೆ ಆ ಬದುಕು ಅಸಹ್ಯವೆನಿಸುವುದೇ ಇಲ್ಲ. ವೇಶ್ಯೆಯರ ಯಾವ ಸಮಸ್ಯೆಗಳಿಗೂ ಅ.ನ.ಕೃ ಗಂಭೀರವಾದ ಒತ್ತು ಕೊಟ್ಟಂತೆ ಕಾಣುವುದಿಲ್ಲ. ಇಲ್ಲಿ ವೇಶ್ಯಾಸಮಸ್ಯೆಯ ಸಾಮಾಜಿಕ ಆರ್ಥಿಕ ಸ್ತರಗಳನ್ನು ವೇಶ್ಯೆಯರ ನೋವು, ಅಸಾಹಾಯಕತೆಯನ್ನು ಚಿತ್ರಿಸುವುದಕ್ಕಿಂತ ಅವರ ವಿಲಾಸಮಯ ವರ್ಣನೆಯಲ್ಲಿಯೇ ತೃಪ್ತರಾಗುತ್ತಾರೆ. ಇದಕ್ಕೆ ಉತ್ತಮ ಉದಾ: 'ನಗ್ನಸತ್ಯ' ಕಾದಂಬರಿ ಇಲ್ಲಿನ ಭಾಗ್ಯಮ್ಮ, ಅಚ್ಚಮ್ಮ, ಕಮಲ ಮುಖ್ಯವಾದ ಪಾತ್ರಗಳು. ಹಾಗಾಗಿ ಅ.ನ.ಕೃ ಅವರ ಇಂತಹ ಕಾದಂಬರಿಗಳು ರೋಚಕತೆಗೆ ಹೆಚ್ಚು ಒತ್ತು ಕೊಟ್ಟಿದ್ದರಿಂದ ತುಂಬಾ ಪೇಲವ ಕಾದಂಬರಿಗಳಾಗುತ್ತವೆ. ಇಂತಹ ಭೀಕರ ಸಮಸ್ಯೆಗಳನ್ನು ಚಿತ್ರಿಸುವಲ್ಲಿ ಗಾಂಭಿರ್ಯವನ್ನು ಕಳೆದುಕೊಳ್ಳುತ್ತವೆ.

'ನಗ್ನ ಸತ್ಯ', 'ಶನಿಸಂತಾನ' ಮುಂತಾದ ಕಾದಂಬರಿಗಳಲ್ಲಿ ಬರುವ ಶಾಬ್ದಿಕ ಕಾಮ ಅಸಹ್ಯವನ್ನು ಹುಟ್ಟಿಸುತ್ತದೆ. ಇದಕ್ಕೆ ಕಾರಣ ಅದು ಉದ್ರೇಕಗೊಳಿಸುತ್ತದೆಂದಲ್ಲ, ಆದರೆ ಅದರ ಅಗ್ಗದ ಬಳಕೆ..."[೧೪].

ಈ ಕಾರಣದಿಂದಾಗಿಯೇ ಕಾದಂಬರಿಯ ಉದ್ದೇಶ ಮತ್ತು ಆಶಯ ಸಫಲವಾಗುತ್ತದೆ. ಹೀಗೆ ಪ್ರಗತಿಶೀಲ ಲೇಖಕರಾದ ನಿರಂಜನ ಅವರೇ ಅ.ನ.ಕೃ ಕರಿತು ಈ ರೀತಿ ಟೀಕೆ ಮಾಡುತ್ತಾರೆ. ಈ ರೀತಿ ಅ.ನ.ಕೃ ಅವರ ಕಾದಂಬರಿಗಳು ಒಂದಲ್ಲ ಒಂದು ಸಮಸ್ಯೆಗೆ ಸಿಲುಕಿರುತ್ತವೆ.

ಆದರೆ ಅ.ನ.ಕೃ ಅನಂತರ ತ.ರಾ.ಸು ಅವರು ವೇಶ್ಯಾಸಮಸ್ಯೆ ಎತ್ತಿಕೊಂಡು ಕಾದಂಬರಿ ಬರೆಯುತ್ತಾರೆ. ಸಮಸ್ಯೆಗೆ ಮೂಲಭೂತ ಕಾರಣಗಳ ಜೊತೆಗೆ ಪರಿಹಾರವನ್ನೂ ಸೂಚಿಸುತ್ತಾರೆ. ಇವರ ಕಾದಂಬರಿಗಳಲ್ಲಿನ ವೇಶ್ಯೆಯರ ಸಮಸ್ಯೆ ಜೊತೆಗೆ ಪರಿಹಾರವನ್ನೂ ಸೂಚಿಸುತ್ತಾರೆ. ಇವರ

ಕಾದಂಬರಿಗಳಲ್ಲಿನ ವೇಶ್ಯೆಯರಿಗೆ ಕಾರಣ ಅನೇಕ ರೀತಿಯಲ್ಲಿವೆ. ಮಸಣದ ಹೂವು ಕಾದಂಬರಿಯಲ್ಲಿ ವೇಶ್ಯೆಯರ ಸಮಸ್ಯೆಯ ಜೊತೆಗೆ ವೇಶ್ಯೆಯಾಗುವುದಕ್ಕೆ ಇರುವ ಕಾರಣಗಳನ್ನೂ ಹೇಳುತ್ತಾರೆ. ವೇಶ್ಯೆವಾಟಿಕೆಗೆ ಬರುವ ಪ್ರತಿಯೊಂದು ಹೆಣ್ಣಿನ ಬದುಕಿನ ಹಿಂದೆ ಇರುವ ದಾರುಣ ಕಥೆ ಮತ್ತು ವ್ಯಥೆಗಳನ್ನು ಹೇಳುತ್ತಾರೆ. ಸ್ತ್ರೀ ಇಲ್ಲಿ ವೇಶ್ಯೆಯಾಗುವುದಕ್ಕೆ ಕಾರಣ ಪರಿಸರದ ಒತ್ತಡ, ಬಡತನ, ಮೋಸ, ಹಣದಾಸೆ, ಮೊದಲಾದ ಕಾರಣಗಳಿರುತ್ತವೆ. ಅಲ್ಲಿ ಬದುಕು ನಡೆಸುವ ಹೆಣ್ಣು ಪ್ರತ್ಯಕ್ಷ ನರಕಯಾತನೆ ಅನುಭವಿಸುತ್ತಾಳೆ. ಪುರುಷಪ್ರಧಾನ ಸಮಾಜದಲ್ಲಿ ಹೆಣ್ಣು ಹಲವರ ಕುತಂತ್ರಕ್ಕೆ ಬಲಿಯಾಗುತ್ತಾಳೆ. ಅಂದರೆ ಪುರುಷನೂ ಇದರಲ್ಲಿ ಪಾಲುದಾರನಾಗಿರುತ್ತಾನೆ. ಮಸಣದ ಹೂವು ಕಾದಂಬರಿ ಬಹುಮುಖ ಸಮಸ್ಯೆಗಳನ್ನು ಚಿತ್ರಿಸುತ್ತದೆ.

ತ.ರಾ.ಸು ಅವರ 'ಮಸಣದ ಹೂವು' ಕಾದಂಬರಿಯ ಪಾರ್ವತಿ ಬದುಕೂ ಕಟ್ಟೀಮನಿಯವರ 'ಬೀದಿಯಲ್ಲಿ ಬಿದ್ದವಳು' ಕಾದಂಬರಿಯ ಯಮುನೆಯ ಬದುಕೂ ಒಂದೇ ದಾರಿಯಲ್ಲಿ ಸಾಗುತ್ತದೆ. ತೆರವನ್ನು ಕೊಡಲು ಸಾಮರ್ಥ್ಯವಿಲ್ಲದ ರಾಮಯ್ಯ ಏಕಮಾತ್ರ ಪುತ್ರಿಯಾದ ಪಾರ್ವತಿಯನ್ನು ನಾಗನಿಗೆ ಕೊಡಲು ಹಿಂಜರಿಯುತ್ತಿದ್ದ ಸಂದರ್ಭದಲ್ಲಿಯೇ ಸೋಮಣ್ಣನ ಕ್ರೂರ ದೃಷ್ಟಿಗೆ ಬಿದ್ದು ನರಸಿಂಹರೆಡ್ಡಿಯ ಆಕಾಂಕ್ಷೆಯನ್ನು ಈಡೇರಿಸುವ ಒತ್ತಾಯಕ್ಕೂ ಒಳಗಾಗುತ್ತಾಳೆ. ಇಂತಹದೆ ಪ್ರಸಂಗ ಬೀದಿಯಲ್ಲಿ ಬಿದ್ದವಳು ಕಾದಂಬರಿಯಲ್ಲಿ ಬರುತ್ತದೆ. ಬಾಲ್ಯದಲ್ಲಿಯೇ ವಿವಾಹವಾಗಿದ್ದವನು ಮದುವೆಯ ಕಾಲಕ್ಕೆ ಕೊಡಬೇಕಾಗಿದ್ದ ತೆರವನ್ನು ಕೊಡಲಿಲ್ಲವೆಂಬ ಕಾರಣಕ್ಕೆ ಅವನೊಂದಿಗೆ ಗಂಗವ್ವ ಜಗಳವಾಡುತ್ತಾಳೆ. ಕೋಪಗೊಂಡ ಅಳಿಯ ತನ್ನೂರಿಗೆ ಹೋಗಿ ಮತ್ತೊಂದು ಹುಡುಗಿಯನ್ನೂ ಮಾಡಿಕೊಳ್ಳುತ್ತಾನೆ. ಹೀಗೆ ಎರಡೂ ಕಾದಂಬರಿಗಳು ಪಾರ್ವತಿ ಮತ್ತು ಯಮುನೆಯರ ವೇಶ್ಯಾಜೀವನ ಚಿತ್ರಿಸುತ್ತವೆ. ಇಲ್ಲಿ ವೇಶ್ಯಾವಾಟಿಕೆಗೆ ಬಡತನವೊಂದೇ ಕಾರಣವಾಗಲಾರದು. ಬಡತನದಲ್ಲಿರುವ ಸೌಂದರ್ಯವುಳ್ಳ ಹೆಣ್ಣುಗಳ ಮೇಲೆ ಕಣ್ಣು ಹಾಕುವ ಪುರುಷ ಸಮಾಜವೂ ಕಾರಣವಾಗುತ್ತದೆ. ಬಡತನ ಬದುಕಿನಲ್ಲಿ ಹೆಣ್ಣು ಅಡ್ಡ ಹಾದಿ ಹಿಡಿಯುವಂತೆ ಮಾಡಿದರೆ ಸಂತೃಪ್ತ ಬದುಕಿನ ದಾಹ ಕೂಡ ಅದೇ ದಾರಿಯನ್ನು ಹಿಡಿಸುತ್ತದೆ. ಹೆಣ್ಣೆ ಹೆಣ್ಣಿನ ಬದುಕಿನ ದುರಂತ ಬದುಕಿಗೆ ಕಾರಣವಾಗುತ್ತಾಳೆ.

ಹೀಗೆ ಪ್ರಗತಿಶೀಲ ಬರಹಗಾರರಲ್ಲಿ ತ.ರಾ.ಸು ಅವರು ಬೇರೆ ಕಾದಂಬರಿಕಾರರಿಗಿಂತ ಭಿನ್ನವಾಗಿ ಕಂಡುಬರುತ್ತಾರೆ. ಪ್ರಗತಿಶೀಲರ ಧೋರಣೆಗನುಗುಣವಾಗಿ ತಮ್ಮ ಸಾಮಾಜಿಕ ಕಾದಂಬರಿಗಳಲ್ಲಿ ಸ್ತ್ರೀಯರ ಸಮಸ್ಯೆಗಳಿಗೆ ಹೆಚ್ಚಿನ ಒತ್ತು ಕೊಟ್ಟಿರುವ ತ.ರಾ.ಸು ಅವರು ಉತ್ತಮವಾದ ಕಾದಂಬರಿಗಳನ್ನೇ ಚಿತ್ರಿಸಿದ್ದಾರೆ. ಒಟ್ಟಾರೆ ತ.ರಾ.ಸು ಅವರ ಕಾದಂಬರಿಗಳಲ್ಲಿನ ಸ್ತ್ರೀಸಮಸ್ಯೆ ಗುರುತಿಸುವಲ್ಲಿ ಮುಖ್ಯವಾದ ಅಂಶಗಳೆಂದರೆ ಬಡತನ, ಲೈಂಗಿಕ ಸಮಸ್ಯೆ, ವೇಶ್ಯಾಸಮಸ್ಯೆ, ಸ್ತ್ರೀ ಸ್ವಾತಂತ್ರ್ಯ, ಆರ್ಥಿಕ ಸ್ವಾತಂತ್ರ್ಯ, ಗ್ರಾಮೀಣ ಹೆಣ್ಣು, ನಗರ ಪ್ರದೇಶದ ಹೆಣ್ಣು, ದ್ವೇಷ, ಮತ್ಸರ, ಹಠ, ಪುರುಷನಿಗಿಂತ ನಾನೇ ಮೇಲು ಎನ್ನುವ ಕಾಂಪ್ಲೆಕ್ಸ್ ಇನ್ನೂ ಹತ್ತು ಹಲವಾರು ಸಮಸ್ಯೆಗಳು ಕಂಡುಬರುತ್ತವೆ. ಇವಿಷ್ಟೇ ಅಲ್ಲದೆ ತ.ರಾ.ಸು ಅವರ ಸಾಮಾಜಿಕ

ಕಾದಂಬರಿಗಳಲ್ಲಿ ಬೇರೆ ತರಹದ ಸಮಸ್ಯೆಗಳನ್ನೂ ಗುರುತಿಸಿ ಅಧ್ಯಯನ ಕೈಗೊಳ್ಳುವ ಸಾಧ್ಯತೆಗಳಿವೆ. ಆದರೆ ನನ್ನ ಅಧ್ಯಯನದ ವ್ಯಾಪ್ತಿಯ ಪರಿಮಿತಿಯಲ್ಲಿ ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳಲ್ಲಿನ ಸ್ತ್ರೀಸಂವೇದನೆಯನ್ನು ಮಾತ್ರ ಗುರುತಿಸುವುದಾಗಿರುವುದರಿಂದ ಮಿಕ್ಕ ವಿಚಾರಗಳ ಬಗೆಗೆ ಸ್ಥೂಲವಾಗಿಯಷ್ಟೇ ನಮೂದಿಸಿರುತ್ತೇನೆ.

**ಅಡಿ ಟಿಪ್ಪಣಿಗಳು :**

೧. ಶಿವರುದ್ರಪ್ಪ ಜಿ.ಎಸ್ ಸಂ. : ಸಾಹಿತ್ಯ ಮತ್ತು ಸಾಮಾನ್ಯ ಮನುಷ್ಯ ಪುಟ ೪೩

೨. ಮದನ್‌ಲಾಲ್ ಮಧು (ಅನು) ಗೋರ್ಕಿ ಮತ್ತು ಪ್ರೇಮ್‌ಚಂದ್ ಎರಡು ಅಮರ ಪ್ರತಿಭೆಗಳು, ಮುನ್ನುಡಿ ಮಾತು

೩. ಸುಬ್ಬರಾವ್ ತ.ರಾ. : ಯಕ್ಷ ಪ್ರಶ್ನೆ, ಮುನ್ನುಡಿ ಮಾತು ಪುಟ- ೪

೪. ಸುಬ್ಬರಾವ್ ತ.ರಾ. : ಅಕ್ಕಮ್ಮನ ಭಾಗ್ಯ ಮುನ್ನುಡಿ ಮಾತು

೫. ಸುಬ್ಬರಾವ್ ತ.ರಾ. : ಮಸಣದ ಹೂವು(ಪುಟ-೨೧)

೬. ಅದೇ : ಮಸಣದ ಹೂವು ಮುನ್ನುಡಿ ಮಾತು

೭. ಶೀಶೈಲ ಆರಾಧ್ಯ ಎಚ್. (ಸಂ) : ಗಿರಿಮಲ್ಲಿಗೆ ಪುಟ ೧೫೫

೮. ಸುಬ್ಬರಾವ್ ತ.ರಾ. : ಪುರುಷಾವತಾರ, ಪುಟ-೩

೯. ಸುಬ್ಬರಾವ್.ತ.ರಾ : ಹಂಸಗೀತೆ, ಮುನ್ನುಡಿ ಮಾತು

೧೦. ಅದೇ : ಪುಟ-೫೪

೧೧. ಕೋಮಲವಲ್ಲಿ ಎಚ್. ಆರ್. : ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳು ಒಂದು ಅಧ್ಯಯನ (ಪರಿಷ್ಕೃತ)

೧೨. ಅಶೋಕ ಟಿ.ಪಿ.ಸಂ : ಕಾರಂತ ಮಂಥನ ಪುಟ-೪೩೬

೧೩.ರಾಮಚಂದ್ರನ್.ಸಿ.ಎನ್ : ಸಾಹಿತ್ಯ ವಿಮರ್ಶೆ-ಪುಟ.೮೪-೮೫

೧೩. ಕುರ್ತುಕೋಟಿ ಕೆ.ಡಿ. : ಯುಗಧರ್ಮ ಹಾಗೂ ಸಾಹಿತ್ಯದರ್ಶನ ಪುಟ. ೧೭.

## ೫.೨ ತ.ರಾ.ಸು ಅವರ ಪೌರಾಣಿಕ ಕಾದಂಬರಿಗಳಲ್ಲಿ ಸ್ತ್ರೀಸಂವೇದನೆ :

ಕಾದಂಬರಿ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಪ್ರಮುಖವಾದ ಪ್ರಕಾರ ಹಾಗೂ ಜನಪ್ರಿಯವಾದ ರೂಪವು ಕೂಡ. ಕಾದಂಬರಿಗೆ ಇರುವ ಇತಿಹಾಸ ಸರಿಸುಮಾರು ಒಂದು ಶತಮಾನದಷ್ಟು. ಇಂತಹ ಕಾದಂಬರಿ ಪ್ರಕಾರವನನ್ನು ಸಾಮಾಜಿಕ, ಐತಿಹಾಸಿಕ, ಪೌರಾಣಿಕ, ಪತ್ತೇದಾರಿ ಎಂಬುದಾಗಿ ವಿಭಾಗ ಮಾಡಬಹುದಾಗಿದೆ. ಪೌರಾಣಿಕ ಕಾದಂಬರಿ ಪ್ರಕಾರ ವಿಮರ್ಶಕರ ಅವಜ್ಞೆಗೆ ಒಳಗಾಗಿದೆ ಎಂದರೂ ತಪ್ಪಾಗಲಾರದು: ಬೇರೆ ಪ್ರಕಾರಗಳಿಗೆ ಸಿಕ್ಕಷ್ಟು ಮಾನ್ಯತೆ ಪೌರಾಣಿಕ ಕಾದಂಬರಿಗಳಿಗೆ ಸಿಕ್ಕಿರಲಿಲ್ಲ. ಇತ್ತೀಚೆಗೆ ಪೌರಾಣಿಕ ಕಾದಂಬರಿಗಳನ್ನು ಪ್ರತ್ಯೇಕವಾಗಿ ಗುರುತಿಸಲಾಗುತ್ತಿದೆ.

ಪರಂಪರಾನುಗತವಾಗಿ ರೂಢಿಯಲ್ಲಿದ್ದ ಪ್ರಸಿದ್ಧವಾದ ಪುರಾಣಗಳಿಂದ ವಸ್ತುವನ್ನು ತೆಗೆದುಕೊಂಡು ಕಾದಂಬರಿ ಸ್ವರೂಪವನ್ನು ನೀಡಿ ಬರೆದ ಸಾಹಿತ್ಯ ಕೃತಿಗಳು ಕನ್ನಡದಲ್ಲಿ ಇತ್ತಿಚಿನ ಐವತ್ತು ವರ್ಷಗಳಿಂದ ಪ್ರಕಟಗೊಳ್ಳುತ್ತಿರುವುದನ್ನು ಕಾಣಬಹುದು. ಕನ್ನಡದಲ್ಲಿ ಆರಂಭಕ್ಕೆ ಅನುವಾದ ಕಾದಂಬರಿಗಳು ಕಂಡು ಬಂದರೂ ನವೋದಯ ಸಾಹಿತ್ಯದ ಆರಂಭದ ವೇಳೆಗೆ ಸ್ವತಂತ್ರ ಕಾದಂಬರಿಗಳು ಕಾಣಿಸಿಕೊಂಡವು. ಕಾದಂಬರಿಗಳು ಉದಯವಾದ ಸಂದರ್ಭದಲ್ಲಿ ಪೌರಾಣಿಕ ಕಾದಂಬರಿಗಳು ಒಂದೂ ಕಂಡುಬರಲಿಲ್ಲ ಮತ್ತು ಕಾದಂಬರಿಯ ಬೆಳವಣಿಗೆಯಲ್ಲೂ ಪೌರಾಣಿಕ ಕಾದಂಬರಿಗಳು ಹಿಂದೆ ಸರಿದವು. ಹತ್ತೊಂಬತ್ತನೆ ಶತಮಾನದ ಆದಿಭಾಗದಲ್ಲಿ ಪರಂಪರೆಯಲ್ಲಿದ್ದ ಕಾಲ್ಪನಿಕ ಕಥಾನಕಗಳನ್ನು ಒಳಗೊಂಡ ಅದ್ಭುತ ರಮ್ಯ ಘಟನೆಗಳನ್ನೊಳಗೊಂಡು ರಚಿಸಲ್ಪಟ್ಟ ಯಾದವನ 'ಕಲಾವತಿ ಪರಿಣಯ' (೧೮೧೫), ಮುಮ್ಮಡಿಕೃಷ್ಣರಾಜಒಡೆಯರ ಕೃತಿ 'ಸೌಗಂಧಿಕಾ ಪರಿಣಯ' (೧೮೧೫), ಕೆಂಪುನಾರಾಯಣನ 'ಮುದ್ರಾಮಂಜೂಷ' (೧೮೨೩) ಕೃತಿಗಳಲ್ಲಿ ಪೌರಾಣಿಕ ಕಾದಂಬರಿಗಳ ಸ್ಥೂಲ ಲಕ್ಷಣಗಳು ಕಂಡುಬಂದಿವೆ. ೧೯೫೦ ರಲ್ಲಿ ದೇವುಡು ನರಸಿಂಹಶಾಸ್ತ್ರಿ 'ಮಹಾಬ್ರಾಹ್ಮಣ' ಪ್ರಕಟಿಸುವ ತನಕ ಪೌರಾಣಿಕ ಕಾದಂಬರಿಯೆಂಬ ಪ್ರತ್ಯೇಕ ರೂಪ ಕನ್ನಡದಲ್ಲಿ ಇರಲಿಲ್ಲ. ಆದರೂ ಆಂಗ್ಲ ಭಾಷೆಯ ಪ್ರಭಾವದಿಂದ ಪೌರಾಣಿಕ ಕಾದಂಬರಿ ರೂಪ ನಯೋದಯದ ಪೂರ್ವದಲ್ಲೆ ಮೊಳಕೆಯೊಡೆದಿದ್ದು. ಇಪ್ಪತ್ತನೆ ಶತಮಾನದ ಮಧ್ಯಕಾಲದವರೆಗೆ ಭಾರತ ಸ್ವಾತಂತ್ರ್ಯಾನಂತರ ಪೌರಾಣಿಕ ಕಾದಂಬರಿಗಳು ಜನ್ಮತಳೆದವು.

ಕನ್ನಡ ಸಾಹಿತ್ಯದಲ್ಲಿ ಪುರಾಣಾಧಾರಿತ ಕಾದಂಬರಿಗಳದೇ ಒಂದು ಪುಟ್ಟ ಪರಂಪರೆಯಿದೆ. "ಇದೊಂದು ವಿಶಿಷ್ಟ ಪ್ರಕಾರ ರಾಮಾಯಣ, ಮಹಾಭಾರತ, ಭಾಗವತಾದಿ ಪುರಾಣ ಕತೆಗಳನ್ನು ವೇದೋಪನಿಷತ್ ಕಥಾ ಪ್ರಸಂಗಗಳನ್ನು ಇಡಿ ಇಡಿಯಾಗಿ ಅಥವಾ ಬಿಡಿ ಘಟನೆಗಳಾಗಿ ಕಾದಂಬರಿಗೆ ವಸ್ತುವಾಗಿಸಿಕೊಂಡು, ಆ ಕಥಾಭಿತ್ತಿಯಲ್ಲಿ ಕಾದಂಬರಿ ತಂತ್ರ ಮುಖೇನ ಸಮಕಾಲೀನ ಮೌಲ್ಯಗಳನ್ನೂ ಸಮಸ್ಯೆಗಳನ್ನೂ ಬಿಂಬಿಸುವ ಅಥವಾ ಪ್ರಾಚೀನ ಮೌಲ್ಯಗಳನ್ನು

ಮನಃ ಪ್ರತಿಪಾದಿಸುವ ಅಥವಾ ಪ್ರಾಚೀನ, ಅಧುನಿಕ ಸಮಾಜ ಹಾಗೂ ಸಾಮಾಜಿಕರನ್ನು ವಿಡಂಬಿಸುವ ಕೃತಿಗಳನ್ನು ಪೌರಾಣಿಕ ಕಾದಂಬರಿಗಳು ಎನ್ನಬಹುದು[೧]. ಈ ಅಭಿಪ್ರಾಯ ಪೌರಾಣಿಕ ಕಾದಂಬರಿ ಸ್ವರೂಪವನ್ನು ತಿಳಿಯಲು ಸಹಕಾರಿಯಾಗುತ್ತದೆ. ಕನ್ನಡದಲ್ಲಿ ಬಹುಸುಖ್ಯಾತ ವೈದಿಕ ಪರಂಪರೆಯ ವೈಷ್ಣವ ಪುರಾಣಗಳನ್ನಾಧರಿಸಿದ ಪೌರಾಣಿಕ ಕದಂಬರಿಗಳಷ್ಟೇ ಅಲ್ಲದೆ ಜೈನ, ಬೌದ್ಧ ಮುಂತಾದ ಧರ್ಮಗಳ ಪುರಾಣವನ್ನಾಧರಿಸಿದ ಕಾದಂಬರಿಗಳು ಕಂಡುಬರುತ್ತವೆ.

ಕನ್ನಡ ಸಾಹಿತ್ಯದಲ್ಲಿ ಪೌರಾಣಿಕ ಕಾದಂಬರಿಗಳಿಂದಲೇ ಪ್ರಸಿದ್ಧರಾದವರೆಂದರೆ ದೇವುಡು ನರಸಿಂಹಶಾಸ್ತ್ರಿ ಮತ್ತು ಸತ್ಯಕಾಮರು. ಕನ್ನಡದಲ್ಲಿ ಪೌರಾಣಿಕ ಕಾದಂಬರಿಗಳ ಪರಂಪರೆಯನ್ನು ಆರಂಭಿಸಿದ ಕೀರ್ತಿ ದೇವುಡು ಅವರಿಗೆ ಸಲ್ಲುತ್ತದೆ. ತಮ್ಮ 'ಮಹಾಬ್ರಾಹ್ಮಣ' (೧೯೫೨) ಕಾದಂಬರಿಯ ಮೂಲಕ ಈ ಶತಮಾನದ ಮಧ್ಯದಲ್ಲಿ ಹೊಸ ಸಾಹಿತ್ಯ ಪ್ರಕಾರದ ಹುಟ್ಟಿಗೆ ಕಾರಣರಾದರು. ಅನಂತರ 'ಮಹಾಕ್ಷತ್ರಿಯ' (೧೯೫೨), 'ಮಹಾದರ್ಶನ' (೧೯೬೭) ಬರೆಯುವುದರ ಮೂಲಕ ಪೌರಾಣಿಕ ಕಾದಂಬರಿ ಪರಂಪರೆಗೆ ಭದ್ರ ಬುನಾದಿಯನ್ನು ಹಾಕುತ್ತಾರೆ. ಪೌರಾಣಿಕ ಕಾದಂಬರಿ ಕ್ಷೇತ್ರಕ್ಕೆ ದೇವುಡು ಪ್ರಾತಃಸ್ಮರಣೀಯರೆಂದೇ ಹೇಳಬಹುದು. ಇವರ ಅನಂತರ ಗುರುತಿಸಬಹುದಾದ ಪೌರಾಣಿಕ ಕಾದಂಬರಿಕಾರರೆಂದರೆ ಸತ್ಯಕಾಮ, ದೇವುಡು ಅನಂತರ ಆ ಕ್ಷೇತ್ರವನ್ನಾಕ್ರಮಿಸಿದ ಅನಭಿಷಕ್ತ ದೊರೆ. ಅತಿಹೆಚ್ಚು ಪೌರಾಣಿಕ ಕಾದಂಬರಿಗಳನ್ನು ರಚಿಸುತ್ತಾರೆ. 'ರಾಜಬಲಿ', 'ವಿಚಿತ್ರವೀರ್ಯ' (ನಾಗರನಂಜು, ಮುಂತಾದವು) ಎಸ್.ಎಲ್. ಭೈರಪ್ಪ, ಹೆಚ್.ವಿ. ಸಾವಿತ್ರಮ್ಮ, ರಂಶ್ರೀ ಮುಗಳಿ, ಶಂಕರಮೊಕಾಶಿ ಪುಣೇಕರ, ನಳಿನಿಮೂರ್ತಿ, ಎ.ಪಂಕಜ, ಆದ್ಯ ರಂಗಾಚಾರ್ಯ ಅನುಪಮ ನಿರಂಜನ ಮುಂತಾದವರು.

ಪ್ರಗತಿಶೀಲ ಸಾಹಿತ್ಯ ಪಂಥದಲ್ಲಿ ಕಾದಂಬರಿ ಪ್ರಕಾರ ಪ್ರಧಾನವಾಗಿ ಬೆಳೆದು ಬಂದರೂ ಪೌರಾಣಿಕ ಕಾದಂಬರಿಗಳು ವಿರಳವೇ. ತ.ರಾ.ಸು ಅವರ ಎರೆಡು ಕಾದಂಬರಿಗಳನ್ನು ಹೊರತುಪಡಿಸಿದರೆ ಅನುಪಮ ನಿರಂಜನ ಮುಂತಾದ ಕೆಲವೇ ಬೆರಳೆಣಿಕೆಯಷ್ಟು ಕಾದಂಬರಿಕಾರರು ಪೌರಾಣಿಕ ಕಾದಂಬರಿಗಳನ್ನು ರಚಿಸಿದ್ದಾರೆ. ತ.ರಾ.ಸು ಅವರ ೬೯ ಕಾದಂಬರಿಗಳಲ್ಲಿ ೧೪ ಐತಿಹಾಸಿಕ, ೫೩ ಸಾಮಾಜಿಕ ಕಾದಂಬರಿಗಳನ್ನು ಹೊರತುಪಡಿಸಿದರೆ ಉಳಿದ ಎರೆಡು ಕಾದಂಬರಿಗಳು ಪೌರಾಣಿಕ ಕಾದಂಬರಿಗಳು. ಅವೆಂದರೆ 'ಬೆಳಕು ತಂದ ಬಾಲಕ' ಮತ್ತು 'ನಾಲ್ಕು×ನಾಲ್ಕು=ಒಂದು'. ತ.ರಾ.ಸು ಅವರ ಈ ಪೌರಾಣಿಕ ಕಾದಂಬರಿಗಳಲ್ಲಿ ಸ್ತ್ರೀಸಂವೇದನೆ ಹೇಗೆ ವ್ಯಕ್ತವಾಗಿದೆ ಎಂಬುದನ್ನು ಇಲ್ಲಿ ಅವಲೋಕಿಸಿದ್ದೇನೆ.

ತ.ರಾ.ಸು ಅವರು ತಮ್ಮ ಈ ಎರಡೂ ಪೌರಾಣಿಕ ಕಾದಂಬರಿಗಳನ್ನು ಉಪನಿಷತ್ತುಗಳನ್ನು ಆಧರಿಸಿ ರಚಿಸಿದ್ದಾರೆ. 'ಬೆಳಕುತಂದಬಾಲಕ' ಕಠೋಪನಿಷತ್ತನ್ನು ಆಧರಿಸಿ ರಚಿಸಲ್ಪಟ್ಟಿದೆ ನಚಿಕೇತನನ್ನು ಕುರಿತದ್ದು. ಹಾಗೆಯೇ 'ನಾಲ್ಕು×ನಾಲ್ಕು=ಒಂದು' ಛಾಂದೋಗ್ಯ ಉಪನಿಷತ್ತನ್ನು

ಒಳಗೊಂಡು ಸತ್ಯಕಾಮ ಜಾಬಾಲಿಯನ್ನು ಕುರಿತಂತೆ ರಚಿಸಲ್ಪಟ್ಟಿದೆ. ಎರಡೂ ಕಾದಂಬರಿಗಳಲ್ಲಿಯೂ ಇಬ್ಬರು ಬಾಲಕರ ಬದುಕನ್ನು ನಿರೂಪಿಸಲ್ಪಟ್ಟಿದೆ ಇಲ್ಲಿ ಬರುವ ಬಾಲಕರಿಬ್ಬರೂ ಜ್ಞಾನಪಿಪಾಸುಗಳೆ, ಬ್ರಹ್ಮಜ್ಞಾನಕ್ಕಾಗಿ ಹಾತೊರೆಯುವವರಾಗಿದ್ದಾರೆ.

'ಬೆಳಕು ತಂದ ಬಾಲಕ' ಕಾದಂಬರಿಯಲ್ಲಿ ಬರುವ ನಚಿಕೇತ, ತಂದೆ ವಾಜಶ್ರವ ತಾಯಿ ವಿಶ್ವವರಾದೇವಿ. ನಚಿಕೇತನಿಗೆ ವಿದ್ಯೆ ಕಲಿಸುವ ಛಾಧ್ಯೋಗ ಋಷಿ ಮತ್ತು ಇವಕ್ಕೆ ಪೂರಕವಾಗಿ ಕೆಲ ಋಷಿಗಳ ಪಾತ್ರಗಳು ಬರುತ್ತವೆ. ನಚಿಕೇತನ ತಂದೆ ವಾಜಶ್ರವಸ್ಸು ಬ್ರಹ್ಮಜ್ಞಾನಗಳಿಸಿ ಈಗಾಗಲೆ ಬ್ರಹ್ಮಜ್ಞಾನದಲ್ಲಿ ಅಪಾರವಾದ ಜ್ಞಾನ ಸಂಪಾದಿಸಿರುವ ಛಾಧ್ಯೋಗ ಋಷಿಗಳು ಮತ್ತು ವಾಮದೇವರನ್ನೂ ಮೀರಿಸಬೇಕೆಂಬ ಹಠದ ಸ್ವಭಾವದವ. ಇವನ ಹಠ, ಸಿಟ್ಟು, ಆಕ್ರೋಶಕ್ಕೆ ಛಾಧ್ಯೋಗ ಋಷಿಗಳ ಬಳಿ ವಿದ್ಯೆ ಕಲಿತ ತನ್ನ ಮಗ ನಚಿಕೇತನೆ ಬಲಿಯಾಗುತ್ತಾನೆ. ತನ್ನ ತಂದೆಯಿಂದ ಯಮನಿಗೆ ಅರ್ಪಿಸಲ್ಪಟ್ಟು, ಸಾವನ್ನ ಗೆದ್ದು ಯಮನಿಂದ ಮೂರು ವರಗಳನ್ನು ಪಡೆದು ಭೂಲೋಕದಲ್ಲಿ ಮತ್ತೆ ಜನ್ಮವೆತ್ತಿ ತನ್ನ ತಂದೆಯ ಅಹಂ ಅನ್ನು ಹೋಗಲಾಡಿಸಿ ಕಣ್ತೆರೆಸುತ್ತಾನೆ. ತನ್ನ ತಂದೆಯ ಉಗ್ರಕೋಪವನ್ನು ಶಮನಗೊಳಿಸುತ್ತಾನೆ. ತಂದೆಯ ಸಿಟ್ಟಿಗೆ ಗುರಿಯಾಗಿದ್ದ ನಚಿಕೇತ ಮೃತ್ಯುದೇವನಿಂದ ಆತ್ಮಜ್ಞಾನವನ್ನು ಪಡೆದು ಭೂಲೋಕಕ್ಕೆ ಹಿಂತಿರುಗುತ್ತಾನೆ. ನಚಿಕೇತನಲ್ಲಿ ಸಾತ್ವಿಕ ಮತ್ತು ತಾತ್ವಿಕ ಗುಣಗಳು ಕಂಡುಬಂದರೆ ವಾಜಶ್ರವಸ್ಸುನಲ್ಲಿ ಆಕ್ರೋಶ, ಆಕಾಂಕ್ಷೆಗಳು ಕಂಡು ಬರುತ್ತವೆ.

ಈ ಕಾದಂಬರಿಯಲ್ಲಿ ಬರುವ ಸ್ತ್ರೀ ಪಾತ್ರವೆಂದರೆ ನಚಿಕೇತನ ತಾಯಿ ವಿಶ್ವವರಾದೇವಿ. ವಾಜಶ್ರವಸ್ ಮತ್ತು ವಿಶ್ವವರಾದೇವಿ ಆದರ್ಶ ದಂಪತಿಗಳಾದರೂ ಮಗನಿಲ್ಲದಿರುವುದು ಬಹು ದೊಡ್ಡ ಕೊರತೆಯಾಗಿತ್ತು. ವಿಶ್ವವರಾದೇವಿಯ ಈ ಹಂಬಲ ವಾಜಶ್ರವಸ್‌ನನ್ನೂ ಕಾಡುತ್ತಿತ್ತು. ವಿಶ್ವವರಾದೇವಿಯ ಕೊರಗಿನ ಬೇಗೆಯನ್ನು ಸಹಿಸಲಾಗದೇ, ಕೊನೆಗೆ ಒಂದು ದಿನ ಇಬ್ಬರೆ ಏಂಕಾತದಲ್ಲಿ ಇದ್ದಾಗ ನಿನ್ನ ಮನಸ್ಸಿನ ದುಗುಡಕ್ಕೆ ಕಾರಣವೇನೆಂದು ಕೇಳುತ್ತಾನೆ. ಆತ ತಾನಾಗಿಯೇ 'ನಿನ್ನ ಕೊರಗಿನ ಕಾರಣವೇನು' ಎಂದು ಕೇಳಿದಾಗ ಆ ಮಾತಿನಲ್ಲಿ ಪ್ರಸನ್ನತೆ ಶಾಂತತೆ ಇದೆ ಎಂಬುದನ್ನು ಅರಿತು ಅನಂತರ ವಿಶ್ವವರಾದೇವಿ "ನಿಮ್ಮ ವಿಶ್ವಾಸ, ಅನುಗ್ರಹದಿಂದ ನನಗೆ ಯಾವ ಕೊರತೆಯು ಇಲ್ಲ. 'ಎಲ್ಲವು ಇದ್ದರೂ ನನ್ನ ಬಾಳು ಹಣ್ಣು ಬಿಡದ ಮರವಾಯಿತಲ್ಲಾ. ಈ ಮನೆಗೆ ಸೊಸೆಯಾಗಿ ಬಂದುದು ಸಾರ್ಥಕವಾಗಲಿಲ್ಲವಲ್ಲ' ಎಂದು ನನ್ನ ದೌರ್ಭಾಗ್ಯಕ್ಕಾಗಿ ವ್ಯಥೆಪಡುತ್ತಿದ್ದೆನೆ". ಎಂದಾಗ ('ಬೆಳಕು ತಂದ ಬಾಲಕ' ಪುಟ-೨೧). ಆಯಿತು ಕಾರಣ ಗೊತ್ತಾದುದಕ್ಕೆ ಪರಿಹಾರವನ್ನು ಕಂಡುಹಿಡಿಯುವುದು ಕಷ್ಟವಲ್ಲವೆಂದು ಹೇಳುತ್ತಾನೆ. ಅನಂತರ ಜರತ್ಕಾರು ಋಷಿಗಳ ಕಥೆ ನೆನಪಾಗಿ ಆತನ ಹೃದಯವನ್ನು ಹಿಡಿದು ಬಲವಾಗಿ ಅಲುಗಿಸಿದಂತಾಯಿತು. (ಜರತ್ಕಾರು ಋಷಿ ವಿವಾಹಿತನಾಗದೆ ಸಂತಾನಹೀನನಾಗಿದ್ದರಿಂದ ಆತನ ಪಿತೃಗಳು ತಲೆಕೆಳಗಾಗಿ ಬಿದ್ದು ಒದಾಡುತ್ತಿದ್ದರು). ಮಕ್ಕಳಭಾಗ್ಯ ಪ್ರಾಪ್ತಿಯಾಗಬೇಕಾದರೆ ಶ್ರೀಮಂತಕರ್ಮದಿಂದ ಸಾಧ್ಯವೆಂದು ವಾಮದೇವರಿಂದ ತಿಳಿದು ಛಾಧ್ಯೋಗ ಋಷಿಗಳಲ್ಲಿ

ಶಿಷ್ಯನಾಗುತ್ತಾನೆ. ಛಾಧ್ಯೋಗ ಋಷಿಗಳಿಂದ ಶ್ರೀಮಂತ ಕರ್ಮ ಉಪದೇಶಿಸಲ್ಪಟ್ಟು ಆ ಮೂಲಕ ಆ ದಂಪತಿಗಳಿಗೆ ಜನಿಸುವ ಮಗನನ್ನು ಉಪನಯನದ ಅನಂತರ ವಿದ್ಯಾರ್ಜನೆಗೆ ತನ್ನಲ್ಲಿಗೆ ಕಳುಹಿಸಬೇಕೆಂದು ತೀರ್ಮಾನವಾಗುತ್ತದೆ.

ಇಲ್ಲಿ ವಿಶ್ವವರಾದೇವಿ ಸಂತಾನ ಪ್ರಾಪ್ತಿಗಾಗಿ ಪರಿತಪಿಸುವ ಹೆಣ್ಣು. ವಾಜಶ್ರವಸ್ಸನು ಶ್ರೀಮಂತಕರ್ಮದ ಬೋಧನೆಗಾಗಿ ಛಾಧ್ಯೋಗ ಋಷಿಗಳ ಬಳಿ ಹೋದಾಗ ಅವನ ಬರುವಿಕೆಯ ನಿರೀಕ್ಷೆಯಲ್ಲೇ ಕಾಲವನ್ನು ಕಳೆಯುತ್ತಿರುತ್ತಾಳೆ. ತಾನು ಜನ್ಮಕೊಡುವ ಮಗನಿಗೆ ನಚಿಕೇತನೆಂದು ಹೆಸರಿಡುತ್ತಾರೆ. ಅನಂತರ ವಿಶ್ವವರಾದೇವಿಯ ಆನಂದ ದಿನದಿನಕ್ಕೂ ಹೆಚ್ಚಾಗುತ್ತಿರುತ್ತದೆ. ಆದರೆ ತನ್ನ ಪತಿಯ ಪರಿವರ್ತನೆ ಕಂಡು ನೊಂದುಕೊಳ್ಳುತ್ತಾಳೆ. ಮುಂಗೋಪಿಯಾದ ವಾಜಶ್ರವಸ್ ತಮ್ಮ ಮಾತನ್ನು ಕೇಳದಿದ್ದಾಗ ನಚಿಕೇತನಿಗೆ ವಿಶ್ವವರಾದೇವಿಯೇ ಸರ್ವಸ್ವವಾಗುತ್ತಾಳೆ. ಅಪ್ಪ ಮಗನ ಮಧ್ಯೆ ನಡೆಯುವ ಮಾತಿನ ವಾಗ್ವಾದದಲ್ಲಿ ವಿಶ್ವವರಾದೇವಿ ಮುಂದೆ ಬಂದು ಇಬ್ಬರನ್ನೂ ಸಮಾಧಾನ ಪಡಿಸುತ್ತಿರುತ್ತಾಳೆ. ಇಂಥ ಸಂದರ್ಭದಲ್ಲಿ ಸದಾ ಆತಂಕದಲ್ಲಿಯೇ ವಿಶ್ವವರಾದೇವಿ ಕಾಲವನ್ನು ದೂಡಬೇಕಾಗುತ್ತದೆ. ನಚಿಕೇತನು ವಿದ್ಯಾರ್ಜನೆಗಾಗಿ ಗುರುಗಳ ಬಳಿ ತೆರಳಿದರೆ, ವಾಜಶ್ರವಸ್ ಜ್ಞಾನಸಂಪತ್ತಿಗಾಗಿ ಬೇರೊಂದೆಡೆಗೆ ತೆರಳುತ್ತಾನೆ. ಆ ವೇಳೆಯಲ್ಲಿ ವಿಶ್ವವರಾದೇವಿ ಒಂಟಿತನ ಅನುಭವಿಸಬೆಕಾತುತ್ತದೆ. ಒಂಟಿತನ ಅನುಭವಿಸಿದರೂ ಮಗ ತನ್ನ ಪತಿಯ ಕೋಪತಾಪಗಳಿಗೆ ತುತ್ತಾಗದೆ ಮುಕ್ತ ವಾತಾವರಣದಲ್ಲಿ ವಿದ್ಯಾರ್ಜನೆ ಮಾಡುತ್ತಾನೆಂದು ಸಮಾಧಾನಪಟ್ಟುಕೊಳ್ಳುತ್ತಾಳೆ. ಆದರೂ ತುಂಬಾ ತಳಮಳ ಉಂಟಾಗುತ್ತಿರುತ್ತದೆ. ಏಕೆಂದರೆ ಪತಿಯ ಜೊತೆ ಮಾತನಾಡುವಂತಿಲ್ಲ, ಮಗ ವಿದ್ಯಾರ್ಜನೆಗಾಗಿ ಬೇರೆ ಕಡೆಗೆ ಹೋಗಿದ್ದಾನೆ. ಈ ಕಾರಣದಿಂದ ಅವಳಿಗೆ ಏಕಾಂಗಿತನ. ವಾಜಶ್ರವಸ್ ನಿನ್ನನ್ನು ಯಮನಿಗೆ ಅರ್ಪಿಸಿದ್ದೇನೆಂದು ತನ್ನ ಮಗನಿಗೆ ಹೇಳಿದಾಗ ವಿಶ್ವವರಾದೇವಿಗೆ ಹೃದಯಕ್ಕೆ ಸಿಡಿಲೇ ಬಂದೆರಗಿದಂತಾಗುತ್ತದೆ. ಆ ಸಂದರ್ಭದಲ್ಲಿ ಆಕೆಯ ಆಕ್ರಂದನ ಕೇಳತೀರದು. ತನ್ನ ಹೆಂಡತಿ ಆಕ್ರಂದನಕ್ಕೆ ಕ್ರೋಧಶಮನವಾದ ಮೇಲೆ ವಾಜಶ್ರವಸ್ ಮಮ್ಮಲ ಮರುಗುತ್ತಾನೆ. ನಚೀಕೇತನು ಯಮನ ಬಳಿ ಆತ್ಮರಹಸ್ಯವನ್ನು ತಿಳಿಯುವಾಗ ಯಮನ ಪತ್ನಿಯು ನಚಿಕೇತನಿಗೆ ಸಹಕರಿಸುತ್ತಾಳೆ.

ತ.ರಾ.ಸು ಅವರ ಮತ್ತೊಂದು ಪೌರಾಣಿಕ ಕಾದಂಬರಿ 'ನಾಲ್ಕು×ನಾಲ್ಕು=ಒಂದು' ಇದು ಮತ್ತೊಬ್ಬ ಬಾಲಕನಾದ ಸತ್ಯಕಾಮಜಾಬಾಲಿಯನ್ನು ಕುರಿತಾದದ್ದು. ಒಬ್ಬ ಬಾಲಕ ಆತ್ಮಜ್ಞಾನ ಸಂಪಾದಿಸ ಹೊರಟರೆ ಮತ್ತೊಬ್ಬ ಬ್ರಹ್ಮಜ್ಞಾನ ಸಂಪಾದಿಸಲು ಗುರುವನ್ನರಸಿಕೊಂಡು ಹೊರಡುತ್ತಾನೆ. ಛಾಂದೋಗ್ಯ ಉಪನಿಷತ್‌ನಲ್ಲಿ ಬರುವ ಸತ್ಯಕಾಮ ಜಾಬಾಲಿಯ ಕತೆ ಕಾದಂಬರಿಯ ವಸ್ತು. "ದಾಸೀಪುತ್ರನಾದ ಸತ್ಯಕಾಮಜಾಬಾಲಿ ಬ್ರಹ್ಮೋಪದೇಶವನ್ನು ಪಡೆಯಲು ಆಶಿಸಿ, ತನ್ನ ತಾಯಿಯ ಬಳಿಗೆ ಬಂದು ತನ್ನ ಗೋತ್ರ ಯಾವುದೆಂದು ಕೇಳುತ್ತಾನೆ. ಮಗನ ಮಾತನ್ನು ಕೇಳಿ ನೊಂದುಕೊಂಡ ತಾಯಿ ತಾನು ಪರಿಚಾರಕಳಾಗಿ ಹಲವೆಡೆಗಳಲ್ಲಿ ದುಡಿಯುವಲ್ಲಿ

ಅವನು ಹುಟ್ಟಿದನೆಂದೂ, ಆದ್ದರಿಂದ ಅವನ ಗೋತ್ರವನ್ನು ತಾನು ತಿಳಿಯೆನೆಂದು ಉತ್ತರವಿತ್ತಳು. ನನ್ನ ಹೆಸರು ಜಬಲಾ, ನಿನ್ನ ಹೆಸರು ಸತ್ಯಕಾಮ, ಆದ್ದರಿಂದ ಗುರುಗಳಿಗೆ ಸತ್ಯಕಾಮ ಜಾಬಾಲನೆಂದು ತಿಳಿಸೆಂದು ಹೇಳಿದಳು"[೨]. ಹೀಗೆ ಇಲ್ಲಿ ಬರುವ ಜಬಲಾ ಸತ್ಯವನ್ನೇ ಹೇಳುತ್ತಾಳೆ. ಈ ಸತ್ಯವನ್ನು ಬಾಲಕ ಗುರಗಳಾದ ಹಾರಿದ್ರುಮತ ಗೌತಮನ ಬಳಿ ಹಾಗೆಯೇ ಹೇಳುತ್ತಾನೆ. ಆಗ ಗುರುಗಳು ಬಾಲಕನ ಸತ್ಯವನ್ನು ಮೆಚ್ಚಿ ಅವನನ್ನು ಶಿಷ್ಯನನ್ನಾಗಿ ಸ್ವೀಕರಿಸುತ್ತಾರೆ.

ದಾಸೀಪುತ್ರನೊಬ್ಬ ಬ್ರಹ್ಮಜ್ಞಾನವನ್ನು ಪಡೆಯುವುದು ಕಾದಂಬರಿಯಲ್ಲಿ ಕಂಡು ಬರುವ ವಿಶೇಷ. ನಾಲ್ಕುನೂರು ಆಕಳುಗಳನ್ನು ಅರಣ್ಯದಲ್ಲಿ ಮೇಯಿಸುತ್ತಾ ಅರಣ್ಯವಾಸದಲ್ಲಿದ್ದಾಗ ಬ್ರಹ್ಮಜ್ಞಾನ ಇವನಿಗೆ ಲಭಿಸುತ್ತದೆ. ಮನುಷ್ಯೇತರದಿಂದ ಬ್ರಹ್ಮಜ್ಞಾನದ ಒಂದೊಂದು ಪಾದವನ್ನು ಕಲಿಯುತ್ತಾನೆ. ವೃಷಭನಿಂದ ಬ್ರಹ್ಮನ ಮೊದಲನೆ ಪಾದವಾದ ಪ್ರಕಾಶವಾನ್, ಅಗ್ನಿಯಿಂದ ಬ್ರಹ್ಮನ ಎರಡನೆ ಪಾದವಾದ ಅನಂತವಾನ್, ಹಂಸಪಕ್ಷಿಯಿಂದ ಮೂರನೆಯ ಪಾದವಾದ ಜ್ಯೋತಿಷ್ಮಾನ್, ಜಲಚರ ಪಕ್ಷಿಯಿಂದ ನಾಲ್ಕನೆ ಪಾದವಾದ ಆಯತನವಾನ್‌ಗಳನ್ನು ತಿಳಿದುಕೊಳ್ಳುತ್ತಾನೆ.

ಕಾದಂಬರಿಯಲ್ಲಿ ಜಬಲಾ ಉವಾಚ ಮುಖ್ಯವಾದ ಭಾಗ. ಸತ್ಯಕಾಮನು ತಾಯಿಯನ್ನು "ಅಮ್ಮ ನನ್ನ ತಂದೆ ಯಾರು"? ಎಂದು ಕೇಳುವ ಪ್ರಶ್ನೆ ಸರಳವಾಗಿದ್ದರೂ ಅದನ್ನು ಬಿಡಿಸಿ ಹೇಳುವುದಕ್ಕೆ ಜಬಲೆಗೆ ಮಾತೆ ಬರುವುದಿಲ್ಲ. ಅಡವಿಯ ಹುಡುಗಿಯಾಗಿ, ತನ್ನ ತಂದೆತಾಯಿಗಳೊಡನೆ ಸ್ವೇಚ್ಛೆಯಾಗೆ ಬೆಳೆದ ಜಬಲೆ, ರಾಜನೊಬ್ಬನು ದಾಳಿಯಿಡಲು, ಆತನ ಕೈಸೆರೆಯಾಗಿ ಅರಮನೆಯ ದಾಸಿಯಾದಳು. ಅರಮನೆಯ ವಾತಾವರಣ ಎಷ್ಟೇ ವೈಭವವಾಗಿದ್ದರೂ, ಸ್ವಾತಂತ್ರ್ಯವಿಲ್ಲದ ಆ ಬದುಕು ಅಸಹನೀಯವೆನಿಸುತ್ತದೆ. ಅರಮನೆಗೆ ಆಗಮಿಸಿದ ಮುನಿಪೋತ್ತಮರನ್ನು ಸತ್ಕರಿಸಿದ ರಾಜನು ಅವರ ಪರಿಚಾರಿಕೆಗಾಗಿ ಜಬಲೆಯನ್ನು ಒಪ್ಪಿಸಿಕೊಡುತ್ತಾನೆ. ಅಲ್ಲಿಯೂ ಕೂಡ ಅವಳಿಗೆ ಅತಿಥಿಗಳನ್ನು ಸತ್ಕರಿಸುವ ಕೆಲಸವೇ ದಕ್ಕುತ್ತದೆ. "ಒಮ್ಮೆ ಅತಿಥಿಯಾಗಿ ಬಂದ ಋಷಿಯೊಬ್ಬರು ಜಬಲೆಯ ನಯ, ವಿನಯವನ್ನು ಕಂಡು ಸಂತೋಷಿಸಿದರು. ಅಲ್ಲದೆ ಅವಳ ಸೌಂದರ್ಯಕ್ಕೆ ಮಾರು ಹೋಗುತ್ತಾರೆ. ಅತಿಥಿ ಸೇವಾವೃತ್ತಿಗೆ ಕಂಕಣಬದ್ಧಳಾಗಿದ್ದ ಜಬಲೆ ಯಾವ ಸಂಕೋಚವನ್ನು ತೋರದೆ ಆ ಋಷಿಯ ಕಾಮಾಪೇಕ್ಷೆಯನ್ನು ಸಲ್ಲಿಸಿದಳು".[೩] ಈ ರೀತಿ ಕಾದಂಬರಿಯಲ್ಲಿ ಜಬಲೆಯ ಪ್ರಾಮಾಣಿಕತೆ ವ್ಯಕ್ತವಾಗುತ್ತದೆ. ಇವಳ ಈ ತರಹದ ಸ್ವಭಾವ ಋಷಿಗಳಿಗೆ ಇಷ್ಟವಾಗುತ್ತದೆ. ಆಂದಿನಿಂದ ಆ ಯತಿ ದಂಪತಿಗಳು ಜಬಲೆಯನ್ನು ಪರಿಚಾರಕಳಾಗಿದ್ದರೂ ತನ್ನ ಮಗಳಂತೆಯೇ ನೋಡಿಕೊಳ್ಳುತ್ತಾರೆ. ಅವಳಿಗೆ ಜನಿಸುವ ಮಗುವಿಗೆ ಸತ್ಯಕಾಮನೆಂದು ಹೆಸರಿಡುತ್ತಾರೆ.

ಕಾದಂಬರಿಯಲ್ಲಿ ಜಬಲೆಯನ್ನು ಕಾಡುವ ಬಹುದೊಡ್ಡ ಸಂಶಯವೆಂದರೆ ದಾಸೀಪುತ್ರನಾದ ಸತ್ಯಕಾಮನನ್ನು ಗೌತಮ ಹಾರಿದ್ರುಮತರು ತನ್ನ ಮಗನಿಗೆ ವಿದ್ಯೆ ಕಲಿಸುತ್ತಾರೋ ಇಲ್ಲವೋ ಎನ್ನುವುದು. ಸತ್ಯಕಾಮನು ತನ್ನ ತಾಯಿ ಪರಿಚಾರಿಕೆಯಾಗಿದ್ದಾಗ ತಾನು ಹುಟ್ಟಿದ್ದರಿಂದ ತನ್ನ ತಂದೆ ಯಾರೆಂದು ತಿಳಿದಿಲ್ಲವೆನ್ನುವ ಸತ್ಯವನ್ನು ಹಾರಿದ್ರುಮತರ ಬಳಿ ಹೇಳುತ್ತಾನೆ. ಇವನ

ಸತ್ಯ ಮತ್ತು ಪ್ರಾಮಾಣಿಕತೆ ಮೆಚ್ಚಿಕೊಂಡ ಹಾರಿದ್ರುಮತರು ಸತ್ಯಕಾಮನನ್ನು ಶಿಷ್ಯನನ್ನಾಗಿ ಸ್ವೀಕರಿಸುತ್ತಾರೆ. ಸತ್ಯಕಾಮ ಗುರುಗಳ ಬಳಿ ವಿದ್ಯೆ ಕಲಿಯಲು ಹೊರಡುವ ಸಂದರ್ಭದಲ್ಲಿ ಅವನಿಗೆ ಜಬಲೆ ಸ್ನಾನ ಮಾಡಿಸುವಾಗ ದೇಹ ಶುದ್ಧಿಗಾಗಿ ಎಂಥದೋ ಹಿಟ್ಟನ್ನು ನೀರಿನಲ್ಲಿ ಕಲಸಿಕೊಂಡು ಸತ್ಯಕಾಮನ ಮೈಯನ್ನು ಉಜ್ಜಲಾರಂಭಿಸುತ್ತಾಳೆ. ಬಹಳ ಹೊತ್ತಿನ ತನಕ ಈ ಕ್ರಿಯೆ ನಡೆದಾಗ ಎಷ್ಟು ಹೊತ್ತು ನನ್ನ ಮೈ ಉಜ್ಜುತ್ತೀಯಾ? ನನ್ನ ಮೈ ಅಷ್ಟು ಕೊಳೆಯಾಗಿದೆಯೇ? ಎಂದು ಕೇಳಿದಾಗ, ಆಕೆ ಕಣ್ಣಲ್ಲಿ ತಟಕನೆ ನೀರು ತಂದು "ನಿನ್ನ ಮೈ ಕೊಳೆಯೇನೊ ಹೋಯಿತು ಮಗು. ಈ ಕೊಳೆಯ ಹಾಗೆ ಇನ್ನೊಂದು ಕೊಳೆಯನ್ನು ತೊಳೆಯುವ ಶಕ್ತಿ ನನಗಿದ್ದಿದ್ದರೆ–ಎಷ್ಟು ಚನ್ನಾಗಿತ್ತು ಎಂದು ಹೇಳಿದಳು". ('ನಾಲ್ಕು×ನಾಲ್ಕು=ಒಂದು' ಪುಟ–೮೮) ಈ ರೀತಿ ತನ್ನ ಮಗನ ಹುಟ್ಟಿಗೆ ಅಂಟಿರುವ ಕಳಂಕದ ಬಗ್ಗೆ ಧಾರ್ಮಿಕವಾಗಿ ಜಬಲೆ ಮಾತಡುತ್ತಾಳೆ. ಅಲ್ಲಿಂದ ಮುಂದೆ ಹಾರಿದ್ರುಮತರು ಕೊಡುವ ೪೦೦ ಆಕಳುಗಳನ್ನು ಒಂದು ಸಾವಿರ ಆಕಳುಗಳನ್ನಾಗಿಸಿ ಹಾರಿದ್ರುಮತರಿಗೆ ತಂದೊಪ್ಪಿಸುತ್ತಾನೆ. ಆಕಳುಗಳೊಂದಿಗೆ ದಾರಿ ಸವೆಸುತ್ತಿದ್ದ ಸತ್ಯಕಾಮ ಮತ್ತು ನಾಲ್ಕು×ನಾಲ್ಕ ರಂತೆ ಬ್ರಹ್ಮನ ಸ್ವರೂಪವನ್ನು ಗ್ರಹಿಸುತ್ತಿದ್ದುದನ್ನು ನೆನೆಯುತ್ತಿರುವಂತೆಯೇ ಆತನ ಅಂತರಂಗದಲ್ಲಿ "ತತ್–ತ್ವಂ–ಅಸಿ" ಎಂಬ ವಾಣಿಯೊಂದು ಮಿಡಿದುದನ್ನು ಕೇಳಿದ ಅನುಭವವಾಯಿತು. ಕಾದಂಬರಿ ಶೀರ್ಷಿಕೆ ಕುರಿತಂತೆ "ಬ್ರಹ್ಮನ ಹದಿನಾರು ಕಲೆಗಳನ್ನು ನಾಲ್ಕು×ನಾಲ್ಕಾಗಿ ವಿಂಗಡಿಸಿ ಆ ಒಂದೊಂದು ವಿಭಾಗವನ್ನು ಕ್ರಮವಾಗಿ ಪ್ರಕಾಶವಾನ್, ಅನಂತವಾನ್, ಜ್ಯೋತಿಷ್ಮಾನ್, ಮತ್ತು ಅಯುತನವಾನ್ ಎಂದು ಕರೆಯಲಾಗಿದೆ.

ಈ ನಾಲ್ಕು × ನಾಲ್ಕರ ಗುಣಲಬ್ಧವಾದ ಹದಿನಾರು ಏಕೈಕ ಬ್ರಹ್ಮನನ್ನು ನಿರ್ದೇಶಿಸಿರುವುದರಿಂದ ತ.ರಾ.ಸು. ಅವರು ತಮ್ಮ ಕಾದಂಬರಿಯನ್ನು 'ನಾಲ್ಕು×ನಾಲ್ಕು=ಒಂದು' ಎಂದು ಕರೆದಿರುವುದೂ ಸಹ ಅತ್ಯಂತ ಮಾರ್ಮಿಕವೂ ಸಾಂಕೇತಿಕವೂ ಆಗಿದೆ. (ಕಥಾಭಾಗವನ್ನು ನಾಲ್ಕು ಪಾದಗಳಾಗಿ ವಿಂಗಡಿಸಿರುವುದೂ ಗಮನಾರ್ಹ ವಿಷಯ)"[೪]

ತ.ರಾ.ಸು ಅವರ ಈ ಎರಡೂ ಪೌರಾಣಿಕ ಕಾದಂಬರಿಗಳಲ್ಲಿ ಕಂಡು ಬರುವ ಸ್ತ್ರೀಯರು ಬದುಕಲ್ಲಿ ಸಂಶಯದ ಸುಳಿಗೆ ಸಿಲುಕಿದವರು. ನಚಿಕೇತನ ತಾಯಿಗೆ ತನ್ನ ಪತಿ ವಾಜಶ್ರವಸ್‌ನ ಮುಂಗೋಪಕ್ಕೆ ಎಲ್ಲಿ ನನ್ನ ಮಗ ಬಲಿಯಾಗುತ್ತಾನೋ ಎನ್ನುವ ಸಂಶಯ ಕಾಡಿದರೆ. ಜಬಲಾಳಿಗೆ ದಾಸೀಪುತ್ರನಾದ ನನ್ನ ಮಗ ಸತ್ಯಕಾಮನಿಗೆ ಗೌತಮ ಹಾರಿದ್ರುಮತರು ವಿದ್ಯೆ ಕಲಿಸುತ್ತಾರೋ ಇಲ್ಲವೋ ಎನ್ನುವ ಸಂಶಯ ಕಾಡುತ್ತದೆ. ವಿಶ್ವವರಾದೇವಿ ಆತಂಕದಿಂದ ಬಾಳನ್ನು ದೂಕಿದರೂ ತನ್ನ ಪತಿ ನಚಿಕೇತನನ್ನು ಯಮನಿಗರ್ಪಿಸಿದಾಗ ತುಂಬಾ ಆತಂಕಕ್ಕೊಳಗಾಗುತ್ತಾಳೆ. ಹಾಗೆಯೇ ಇಲ್ಲಿನ ಜಬಲಾ ಪ್ರಾಮಾಣಿಕತೆಯನ್ನು ಮೆರೆಯುವವಳು.

ತ.ರಾ.ಸು ಅವರ ಕಾದಂಬರಿಗಳಲ್ಲಿ ವಿವಿಧ ಮನೋಧರ್ಮದ ಮತ್ತು ದೃಷ್ಟಿಕೋನದ ಸ್ತ್ರೀಯರು ಕಂಡು ಬರುತ್ತಾರೆ. ಐತಿಹಾಸಿಕ ಕಾದಂಬರಿಗಳಲ್ಲಿನ ಸ್ತ್ರೀ ದಿಟ್ಟ ನಿಲುವನ್ನು ತಳೆಯುವವಳಾದರೆ, ಸಾಮಾಜಿಕ ಕಾದಂಬರಿಯಳಲ್ಲಿನ ಸ್ತ್ರೀ ಸಮಸ್ಯೆಗಳ ಸುಳಿಗೆ ಸಿಲುಕಿದವಳು. ನಾನಾ ತರಹದ ಸ್ವಭಾವದ ಸ್ತ್ರೀಯರು ಸಾಮಾಜಿಕ ಕಾದಂಬರಿಗಳಲ್ಲಿ ಕಂಡುಬರುತ್ತಾರೆ. ಐತಿಹಾಸಿಕ ಕಾದಂಬರಿಗಳಲ್ಲಿ ಮಕ್ಕಳಿಲ್ಲದ ಸ್ತ್ರೀ, ಉತ್ತರಾಧಿಕಾರತ್ವದ ಪ್ರಶ್ನೆ ಎದುರಾದಾಗ ತಳೆಯುವ ನಿಲುವು ಆ ವೇಳೆಗೆ ದತ್ತು ಮಕ್ಕಳಿಗೆ ಹಕ್ಕಿಲ್ಲವೆಂಬ ಬ್ರಿಟಿಷರ ಆಡಳಿತದ ನೀತಿ ಜಾರಿಯಲ್ಲಿರುತ್ತದೆ. ಸಹಗಮನದ ವಿಷಯ ಬಂದಾಗ ಆಕೆ ತೆಗೆದುಕೊಳ್ಳುವ ನಿರ್ಧಾರ, ಆಡಳಿತ ನಡೆಸುವ ಸ್ತ್ರೀ ಹೀಗೆ ನಾನಾ ರೀತಿಯ ಸಮಸ್ಯೆಗಳನ್ನೆದುರಿಸುವ ಸ್ತ್ರೀಯರು ಕಂಡುಬರುತ್ತಾರೆ. ಸಾಮಾಜಿಕ ಕಾದಂಬರಿಗಳಲ್ಲಿನ ಸ್ತ್ರೀಗೆ ಎದುರಾಗುವ ಸಮಸ್ಯೆಗಳೆಂದರೆ ವೇಶ್ಯಾಸಮಸ್ಯೆ, ಲೈಂಗಿಕ ಸಮಸ್ಯೆ, ಬಡತನ, ಸ್ತ್ರೀ ಸ್ವಾತಂತ್ರ್ಯ, ಹಠದ ಸ್ವಭಾವ, ಅಸೂಯೆ, ಮತ್ಸರ, ಸಾಮಾಜಿಕ ಪರಿಸರದಲ್ಲಿನ ಸ್ತ್ರೀ, ಗ್ರಾಮೀಣ ಪರಿಸರ, ನಗರದ ಹೆಣ್ಣುಗಳೂ ಹೀಗೆ ನಾನಾ ತರಹದ ಸ್ತ್ರೀ ಸಮಸ್ಯೆಗಳು ಹೆಚ್ಚಾಗಿ ಕಂಡು ಬರುತ್ತವೆ. ಆದರೆ ಪೌರಾಣಿಕ ಕಾದಂಬರಿಗಳಲ್ಲಿನ ಸ್ತ್ರೀಪ್ರಪಂಚವೆ ಬೇರೆ ತರಹದ್ದು.

ಇವರ ಪೌರಾಣಿಕ ಕಾದಂಬರಿಗಳಲ್ಲಿನ ಸ್ತ್ರೀ ಬೇರೆ ರೀತಿಯಲ್ಲಿ ಕಂಡು ಬರುತ್ತಾಳೆ. ಹೆಣ್ಣನ್ನು ಕಾಡುವ ಬಂಜೆತನ ಇಲ್ಲಿನ ವಿಶ್ವವರಾದೇವಿಯನ್ನು ಕಾಡುತ್ತದೆ. ಮದುವೆಗಿಂತಲೂ ಮುಂಚೆಯೇ ಜನಿಸುವ ಮಗು ಸಮಾಜ ಬಾಹಿರವಾದದ್ದು. ಇಂತಹ ಸಮಸ್ಯೆ ಜಬಲೆಯನ್ನು ಕಾಡಿದರೂ ಕಾದಂಬರಿಕಾರರು ಈ ಸಮಸ್ಯೆಗೆ ಹೆಚ್ಚಿನ ಒತ್ತು ಕೊಟ್ಟಿಲ್ಲ. ಆ ಬಾಲಕನ ಜ್ಞಾನದಾಹದ ಮುಂದೆ ಈ ಸಮಸ್ಯೆ ಗೌಣವಾಗುತ್ತದೆ. ಈ ರೀತಿ ತ.ರಾ.ಸು ಅವರು ಪೌರಾಣಿಕ ಕಾದಂಬರಿಗಳಲ್ಲಿನ ಸ್ತ್ರೀಪ್ರಪಂಚವನ್ನು ಅಷ್ಟೊಂದು ಗಂಭೀರವಾಗಿ ಪರಿಗಣಿಸಿರುವಂತೆ ಕಂಡುಬರುವುದಿಲ್ಲ. ಆ ಕಾರಣದಿಂದಾಗಿಯೇ ಐತಿಹಾಸಿಕ ಮತ್ತು ಸಾಮಾಜಿಕ ಕಾದಂಬರಿಗಳಲ್ಲಿನ ಸ್ತ್ರೀಸಂವೇದನೆ ಗುರುತಿಸಿ ಚರ್ಚೆ ಮಾಡಿದಷ್ಟು ಗಂಭೀರವಾದ ಮತ್ತು ದೀರ್ಘವಾದ ಚರ್ಚೆಗೆ ಪೌರಾಣಿಕ ಕಾದಂಬರಿಗಳಲ್ಲಿನ ಸ್ತ್ರೀಸಂವೇದನೆ ದಾರಿಮಾಡಿಕೊಡುವುದಿಲ್ಲ. ಕಾದಂಬರಿಕಾರರು ಸ್ತ್ರೀಸಂವೇದನೆಗಿಂತ ಪುರಾಣದ ವಸ್ತುವನ್ನಾರಿಸಿಕೊಂಡು ಕಾದಂಬರಿ ರಚಿಸಿದರೂ ಅಧ್ಯಾತ್ಮದ ಕಡೆಗೆ ಹೆಚ್ಚಿನ ಗಮನ ಹರಿಸಿದ್ದಾರೆ. ಆ ಕಾರಣದಿಂದ ಇವರ ಪೌರಾಣಿಕ ಕಾದಂಬರಿಗಳಲ್ಲಿನ ಸ್ತ್ರೀಸಂವೇದನೆಯನ್ನು ಸ್ಥೂಲವಾಗಿ ಇಲ್ಲಿ ವಲೋಕಿಸಿದ್ದೇನೆ.

## ಅಡಿಟಿಪ್ಪಣಿಗಳು:

೧) ರಮೇಶ್ ಜೆ.ಕೆ. : ಕನ್ನಡ ಪೌರಾಣಿಕ ಕಾದಂಬರಿಕಾರರು.
ಪುಟ-೦೨

೨) ಶ್ರೀಶೈಲ ಆರಾಧ್ಯ ಹೆಚ್(.ಸಂ) ಗಿರಿ ಮಲ್ಲಿಗೆ
ಪುಟ-೨೧೩

೩) ಅದೇ : ಗಿರಿ ಮಲ್ಲಿಗೆ
ಪುಟ-೨೧೫/೨೧೬

೪) ಅದೇ : ಗಿರಿ ಮಲ್ಲಿಗೆ
ಪುಟ-೨೨೩

೫) ಸುಬ್ಬರಾವ್ .ತ.ರಾ : ಬೆಳಕು ತಂದ ಬಾಲಕ
ಪುಟ-೨೧

೬) ಸುಬ್ಬರಾವ್.ತ.ರಾ : ನಾಲ್ಕು × ನಾಲ್ಕು = ಒಂದು
ಪುಟ-೮೮

## ೫.೩ ತ.ರಾ.ಸು ಅವರ ಐತಿಹಾಸಿಕ ಕಾದಂಬರಿಗಳಲ್ಲಿ ಸ್ತ್ರೀಸಂವೇದನೆ :

ಕಾದಂಬರಿಯ ಕಾಲ್ಪನಿಕ ಜಗತ್ತಿನಲ್ಲಿ ಕಲಾತ್ಮಕತೆ ತುಂಬಾ ಮುಖ್ಯವೆನಿಸುತ್ತದೆ. ಇಂತಹ ಕಲಾತ್ಮಕತೆ ಇಲ್ಲದೆ ಹೋದರೆ ಕಾದಂಬರಿಯ ರಚನಚಾಕ್ರಿಯೆಯ ಓಟಕ್ಕೆ ಭಂಗ ಬರಬಹುದು. ತ.ರಾ.ಸು ಅವರ ಒಟ್ಟು ಕಾದಂಬರಿಗಳನ್ನು ಸಾಮಾಜಿಕ, ಐತಿಹಾಸಿಕ, ಪೌರಾಣಿಕವೆಂದು ಅಧ್ಯಯನದ ಅನುಕೂಲಕ್ಕಾಗಿ ವಿಭಾಗಿಸಬಹುದಾಗಿದೆ. ಐತಿಹಾಸಿಕ ಕಾದಂಬರಿಗಳ ರಚನೆ ಸುಲಭವಾದ ಪ್ರಕ್ರಿಯೆಯಲ್ಲ. ಈ ಕಾದಂಬರಿಗಳ ವಿಚಾರ ವೈಶಿಷ್ಟ್ಯ ಪೂರ್ಣವೆಂದು ಹೇಳಬಹುದಾಗಿದೆ. ಇಲ್ಲಿನ ಸಮಸ್ಯೆಗಳು ಸಂಕೀರ್ಣ ಸ್ವರೂಪವನ್ನು ಹೊಂದಿರುತ್ತವೆ.

ಇತಿಹಾಸವೆಂದರೆ ಕೇವಲ ಗತಕಾಲದ ಘಟನೆಗಳ ದಾಖಲೆಯಷ್ಟೇ ಅಲ್ಲ. "ಒಂದು ದೇಶದ ಜನಾಂಗದ ಆಸೆ ಅಭೀಪ್ಸೆಗಳ ಅನಾವರಣ ಕ್ರಿಯೆಯ ಸ್ವಷ್ಟ ನಿರೂಪಣೆ, ಕಂಬನಿ, ರಕ್ತಗಳ ಮಸಿಯಲ್ಲಿ ನಿಟ್ಟುಸಿರಿನ ಲೇಖನಿಯಿಂದ ಕಂಡರಣಿಗೊಂಡದನ್ನು ಪರಿಭಾವಿಸಬೇಕು. ಐತಿಹಾಸಿಕ ಕಾದಂಬರಿಗಳನ್ನು ಬರೆಯಲು ತೊಡಗುವ ವ್ಯಕ್ತಿಯು ತಾನು ಕ್ಲಿಷ್ಟವಾದ ಕಾರ್ಯವನ್ನು ಮಾಡಲು ಯತ್ನಿಸುತ್ತಿರುವುದನ್ನು ಸದಾ ಸ್ಮರಿಸಬೇಕು. ಇತಿಹಾಸದ ವ್ಯಕ್ತಿಗಳ, ಘಟನೆಗಳ, ಸಹಜವಾದ ಚಿತ್ರಣ ಅತ್ಯಂತ ಕಷ್ಟಕರವಾದುದು. ವಿದ್ವಾಂಸರಿಂದ ರಚಿತವಾದ ಇತಿಹಾಸ ಗ್ರಂಥಗಳು ಮಾರ್ಗದರ್ಶನವನ್ನು ನೀಡುವಂತೆಯೇ ಎಚ್ಚರಿಕೆಯನ್ನು ನೀಡುತ್ತವೆ."[೧]

ಐತಿಹಾಸಿಕ ಕಾದಂಬರಿಗಳ ರಚನೆಯಲ್ಲಿ ಸ್ವಾತಂತ್ರ್ಯವನ್ನು ವಿಶ್ಲೇಷಣೆ ಮೂಲಕ ನಿರ್ಧಾರ ಮಾಡಬೇಕಾಗುತ್ತದೆ. ಇತಿಹಾಸದ ಉಲ್ಲಂಘನೆಯಾಗದಂತೆ ಆ ಶತಮಾನದ ಬದುಕಿನ ಆಶೋತ್ತರಗಳನ್ನು ಓದುಗರ ಕಣ್ಣಿಗೆ ಕಟ್ಟುವಂತೆ ಚಿತ್ರಿಸುವುದು ಕಾದಂಬರಿಕಾರನ ಬಹುದೊಡ್ಡ ಜವಾಬ್ದಾರಿಯಾಗಿರುತ್ತದೆ. ಅಂತೆಯೇ ತ.ರಾ.ಸು ಅವರ ಐತಿಹಾಸಿಕ ಕಾದಂಬರಿಗಳಲ್ಲಿ ಕಂಡು ಬರುವ ಸ್ತ್ರೀಸಂವೇದನೆಯನ್ನು ಕೆಳಕಂಡ ಅಂಶಗಳಿಂದ ಗುರುತಿಸಬಹುದು ಅವೆಂದರೆ.

೧) ತ್ಯಾಗ (ಅರ್ಪಣೆ)

೨) ಸಹಗಮನ

೩) ರಾಜಕೀಯ (ಆಡಳಿತ)

೪) ಸೇಡಿನ ಮನೋಭಾವ

೫) ಪ್ರಾದೇಶಿಕ ಅಂಶಗಳು

ತ.ರಾ.ಸು ಅವರು ರಚಿಸಿರುವ ಐತಿಹಾಸಿಕ ಕಾದಂಬರಿಗಳಲ್ಲಿ 'ಕಂಬನಿ ಕುಯಿಲು', 'ರಕ್ತರಾತ್ರಿ', 'ರಾಜ್ಯದಾಹ', 'ತಿರುಗುಬಾಣ', 'ದುರ್ಗಾಸ್ತಮಾನ'. ಚಿತ್ರದುರ್ಗವನ್ನು ಆಳಿದ ಮದಕರಿ ನಾಯಕನ ಆಡಳಿತ, ಅಧಿಕಾರಕ್ಕಾಗಿ ದಳವಾಯಿಗಳು ಮತ್ತು ನಾಯಕರ ನಡುವೆ ನಡೆಯುವ ಸಂಘರ್ಷ,ಆಡಳಿತದಲ್ಲಿ ಸ್ತ್ರೀಯಾದವಳು ತಳೆಯುವ ನಿಲುವು, ಮತ್ತು ನಾಯಕನ ಮರಣದ ಅನಂತರ ಉತ್ತರಾಧಿಕಾರಕ್ಕಾಗಿ ನಡೆಯುವ ಪಿತೂರಿಗಳು, ಅಂತಹ ಸಂದರ್ಭದಲ್ಲಿ ಓಬವ್ವನಾಗತಿ

ತೆಗೆದುಕೊಳ್ಳುವ ನಿರ್ಧಾರ, ಅಲ್ಲದೆ ಸೇಡನ್ನು ತೀರಿಸಿಕೊಳ್ಳುವುದಕ್ಕಾಗಿ ಗಿರಿಜೆ ಹುಚ್ಚಿಯಂತೆ ವರ್ತಿಸುವುದು. ಇವಿಷ್ಟೇ ಅಲ್ಲದೆ ಅಂದು ರಾಜಮಾತೆಯಾಗಿದ್ದುಕೊಂಡು ಹೆಣ್ಣಾದವಳನ್ನು ಪರಂಪರಾನುಗತವಾಗಿ ಶಾಪದಂತೆ ಕಾಡುವ ಬಂಜೆತನ, ಇಂತಹ ಹೊತ್ತಲ್ಲಿ ದತ್ತು ಸ್ವೀಕಾರದ ಬಗ್ಗೆ ಆಕ್ಷೇಪಗಳು ಎದುರಾಗುವುದು. ಹಿಂದೂ ಸಂಸ್ಕೃತಿಯಲ್ಲಿನ ಶವಸಂಸ್ಕಾರದಂತೆ ನಾಯಕರ ಶವಸಂಸ್ಕಾರದ ಸಮಸ್ಯೆ ಇಷ್ಟೆಲ್ಲಾ ಸಮಸ್ಯೆಗಳನ್ನು ಸ್ತ್ರೀಯಾದವಳು ಎದುರಿಸುವ ಸಂದರ್ಭವನ್ನು ತ.ರಾ.ಸು ಅವರು ಮೇಲಿನ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ.

ಚಿತ್ರದುರ್ಗದ ಇತಿಹಾಸ ಬಿಂಬಿಸುವ ಈ ಕಾದಂಬರಿಗಳಲ್ಲಿ ಪಾಳೆಯಗಾರರು, ದಳವಾಯಿಗಳು ಮತ್ತು ಆ ಸಂದರ್ಭದ ಸ್ತ್ರೀಯರ ಬದುಕು ಕಾದಂಬರಿಕಾರರಿಗೆ ಮುಖ್ಯವಾಗುತ್ತದೆ. ಈ ಮೂರು ಕಾದಂಬರಿಗಳು ೧೬೭೪ ರಿಂದ ೧೮೮೯ರ ನಡುವಿನ ಇತಿಹಾಸವನ್ನು ಕುರಿತ ಕಾದಂಬರಿಗಳು ದುಷ್ಟ ದಳವಾಯಿಗಳ ಪ್ರಾಬಲ್ಯದಿಂದ ಸಿಂಹಾಸನಕ್ಕೆ ಯಾವಾಗಲೂ ರಾಹುಕಾಟವಿದ್ದೇ ಇರುತ್ತದೆ. ವಿಶ್ವಾಸದ್ರೋಹವೇ ಎಲ್ಲಾ ಘಟನೆಗಳಿಗೂ ಮೂಲಕಾರಣ. ಇದು ಕೇವಲ ರಾಜನಿಗೆ ಮಾತ್ರ ಸೀಮಿತವಲ್ಲ. ಪ್ರತಿಯೊಂದು ಕುಟುಂಬದಲ್ಲಿಯು ಎಲ್ಲ ಕಾಲದಲ್ಲಿಯೂ ನಡೆಯುವುದನ್ನು ಕಾಣುತ್ತೇವೆ. ದುರ್ಗದ ಪಾಳೆಯಗಾರರ ಬದುಕಲ್ಲಿ ಇಂತಹ ಎಷ್ಟೋ ಘಟನೆಗಳು ಘಟಿಸಿವೆ. ದಳವಾಯಿ ಮುದ್ದಣ್ಣನ ಪ್ರಸಂಗವಂತೂ ತುಂಬಾ ಕ್ರೂರವಾದುದ್ದು. ಮೊದಲು ಕಂಬನಿ, ಅನಂತರ ರಕ್ತ, ಕೊನೆಗೆ ಪ್ರಾಣ. ಕಂಬನಿಯನ್ನೇ ಕುಯಿಲನ್ನಾಗಿಸಿದ ಘಟನೆಗಳು ಘೋರ ಹಿಂಸಾತ್ಮಕವಾದವು. ಇಮ್ಮಡಿ ಮದಕರಿನಾಯಕ ಅತೃಪ್ತರಾಗಿ ಸ್ವರ್ಗಸ್ಥರಾದ ಅನಂತರ ಸಂದುಗಾರ ದಳವಾಯಿಗಳ ಆಧಿಕಾರದಾಹಕ್ಕೆ ಆಜ್ಯ ಹೊಯ್ದಂತೆ ಪರಿಸ್ಥಿತಿಗಳು ಒದಗುತ್ತಿದ್ದವು. ಇಂತಹ ಪ್ರಸಂಗದಲ್ಲಿ ನಾಗತಿಯರ ಸ್ಥಿತಿ ಚಿಂತಾಜನಕವಾಗಿಬಿಡುತ್ತಿತ್ತು. ದೃಢ ತೀರ್ಮಾನ ತೆಗೆದುಕೊಳ್ಳುವ ಧೀರನಾಗತಿಯರು ವಿರಳ. ಅಂತಹವರಲ್ಲಿ ಓಬವ್ವನಾಗತಿಯೂ ಒಬ್ಬರು. ಗೌರವ್ವನಾಗತಿಯ ಇಚ್ಚೆಯನ್ನರಿತು ಸಹಗಮನ ಮಾಡುವ ತೀರ್ಮಾನವನ್ನು ತೊರೆದು ಓಬಣ್ಣನಾಯಕನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಲು ತೀರ್ಮಾನಿಸಿ ಜವಾಬ್ದಾರಿಯನ್ನು ಹೊರಲು ನಿರ್ಧರಿಸುತ್ತಾಳೆ. ಗೌರವ್ವನಾಗತಿಯು ತೆಗೆದುಕೊಂಡ ನಿರ್ಧಾರ ಅಚಲವಾದುದು.

ದಿವಂಗತ ರಾಜರ ಮನಸ್ಸನ್ನು ಅರಿತಿದ್ದ ನಾಗತಿ ಪತಿಯು ಬಯಸಿದ್ದಂತೆಯೇ ನಡೆಯಬೇಕೆಂದು ಹಠಮಾಡಿ ವಾದಮಾಡಿ ಅಪ್ರಿಯಳಾಗಲು ಅಂಜಲಿಲ್ಲ. ಗೌರವ್ವನಾಗತಿಯ ಮಾತುಗಳು ಅಹಂಪ್ರಚೋದಿತವೇನೋ ಎಂಬ ಸಂಶಯ ಬಂದು ಹೋದ ಅನಂತರ ನಿಧಾನವಾಗಿ ಆಲೋಚಿಸಿದರೆ, ಪುಟಗಳನ್ನು ಮಗುಚಿದರೆ ಸತ್ಯಸ್ಥಿತಿ ಮನವರಿಕೆಯಾಗುತ್ತದೆ. ನಾಯಕರು ನನ್ನ ತಮ್ಮನನ್ನು ಸಾಕಿಕೊಳ್ಳುತ್ತೇನೆ ಎಂದಾಗ ಅದನ್ನು ವಿರೋಧಿಸಿದವಳು ನಾನೇ. ಈ ಕಾರ್ಯದಲ್ಲಿ ಅವರ ಉದ್ದೇಶವೇನಿತ್ತೆಂಬುದನ್ನು ಅವರ ಬಾಯಿಂದಲೇ ಕೇಳಿದ ಮೇಲೆ

ಸುಮ್ಮನಾದೆ ಎಂದು ನಿರ್ಧಾರಪೂರಿತ ಮಾತುಗಳನ್ನು ಪ್ರಧಾನಿ ಭರಮಪ್ಪನವರ ಮುಂದೆ ಆಡುತ್ತಾಳೆ.

(ಓಬವ್ವ ನಾಗತಿಯದು ಸಾತ್ವಿಕ ಮನಸ್ಸು, ತುಂಬಾ ನೋವನ್ನು ಅನುಭವಿಸುತಾಳೆ. ಓಬವ್ವನಾಗತಿ ಮೊದಲು ಮದಕರಿನಾಯಕನನ್ನು ಕೈ ಹಿಡಿದ ಹೆಣ್ಣು. ಆಕೆಯ ಬಳಿಕ ಇಪ್ಪತ್ತೊಂಬತ್ತು ಜನರನ್ನು ಮದುವೆಯಾಗಿ ಆ ವಿಲಾಸ ಸಾಗರದಲ್ಲಿ ಮುಳುಗಿದ್ದಾನೆ. ತನ್ನ ಪತಿ ಸುಖದಿಂದ ವಂಚಿತಳಾದ ನಾಗತಿ ಆ ನೋವನ್ನು ತಾನೆ ಅನುಭವಿಸುತ್ತಾಳೆ. ಅದಕ್ಕಾಗಿ ಯಾರನ್ನು ನಿಂದಿಸದ ತಾನೆ ಆ ನೋವನ್ನು ಅನುಭವಿಸುತ್ತಾಳೆ. " ಏನೋ ಹಿಂದಿನ ಜನುಮದಲಲಿ ನಾನು ತಾಯಿಗೆ ಮಾಡಿದ ಅರಿಶಿನ ಕುಂಕುಮದ ಪೂಜೆ ಸಾಲದಾಯಿತೇನೋ ಅದಕ್ಕೆ ಈ ಜನ್ಮದಲ್ಲಿ ಪೂರ್ಣವಾಗಿ ಪತಿ ಸುಖ ದೊರೆಯಲಿಲ್ಲ. ಅದಕ್ಕಾಗಿ ಈ ಜನ್ಮದಲ್ಲಿ ಸವತಿಯೊಂದಿಗೆ ಕಚ್ಚಾಡಿದರೆ ಬರುವುದೇನು? ನಾಯಕರ ಮನಸ್ಸು ಪತಂಗದಂತೆ ದಿನಕ್ಕೊಬ್ಬ ಹೊಸ ನಾಗತಿಯ ಸುತ್ತ ಸುತ್ತುತ್ತಿರುವಾಗ ಹೆಣ್ಣು ಹೆಣ್ಣು ಕಾದಾಡೆ ಆಗುವ ಲಾಭವೇನು? ವೃಥಾ ಮನಸ್ತಾಪ. ಅದನ್ನು ಕಟ್ಟಿಕೊಂಡರೂ ಆಗುವುದೇನು? ಮನುಷ್ಯ ಏನು ತಾನೆ ಕೊಡಬಲ್ಲ. ಕೊಡುವುದು ಬಿಡುವುದು ತಾಯಿಯ ಇಚ್ಛೆ. ಆಯಿತು ಈ ಜನ್ಮದಲ್ಲಿ ಆಕೆಯ ಪ್ರೀತಿ ಪಡೆದು ಬರಲಿಲ್ಲ. ಮುಂದಿನ ಜನ್ಮಕ್ಕಾದರೂ ದಾರಿ ಸರಿಮಾಡಿಕೊಳ್ಳೋಣ"೨. (ಕಂಬನಿಯ ಕುಯಿಲು ಪುಟ ೫೮) ಈ ರೀತರಿ ನಾಗತಿ ಬಾಳಿನ ಬಗ್ಗೆ ಬೇಸರ ಪಡುತ್ತಾಳೆ. ಮಾನಸಿಕವಾಗಿ ನೊಂದು ಮೇಲಿನಂತೆ ಆಲೋಚಿಸುತ್ತಾಳೆ.)

ದೇಶದ ಹಿತಕ್ಕಿಂತ ಆತ್ಮಕಲ್ಯಾಣ ದೊಡ್ಡದಲ್ಲವೆಂದು ಭಾವಿಸಿ ಸಹಗಮನ ಮಾಡದೆ ಉಳಿದುಕೊಳ್ಳುತ್ತಾಳೆ.) ಕಾರಣ ಆ ವೇಳೆಗಾಗಲೆ ಬ್ರಿಟಿಷರ ಆಡಳಿತ ಮತ್ತು ಇಂಗ್ಲಿಷ್ ವಿದ್ಯಾಭ್ಯಾಸದ ಪ್ರಭಾವದಿಂದ ಭಾರತೀಯ ಸಮಾಜದಲ್ಲಿ ನಿಧಾನವಾಗಿ ಬದಲಾವಣೆ ಅಂಕುರಿಸತೊಡಗಿತ್ತು.) ಭಾರತೀಯ ಸಮಾಜದಲ್ಲಿ ಬೇರೂರಿದ್ದ ಸತಿಪದ್ದತಿ, ವಿಧವಾವಿವಾಹದಂತಹ ಪದ್ಧತಿಗಳಲ್ಲಿ ಬದಲಾವಣೆಯ ಗಾಳಿ ಬೀಸತೊಡಗಿತ್ತು. ಭಾರತೀಯ ನಾರಿಯನ್ನು ಶಾಪದಂತೆ ಕಾಡುತ್ತಿದ್ದ ಬಂಜೆತನ, ಅಲ್ಲದೆ ಆಡಳಿತದಲ್ಲಿ. ದತ್ತು ಸ್ವೀಕಾರದಂತಹ ಸಮಸ್ಯೆಗಳು ಪ್ರಬಲವಾಗಿ ಕಾಡತೊಡಗಿದವು. ರಾಜಾರಾಮಮೋಹನರಾಯ್, ದಯಾನಂದ ಸರಸ್ವತಿಯವರು ತಂದ ಸುಧಾರಣೆಗಳು ಭಾರತೀಯ ಸಮಾಜದಲ್ಲಿ ಬದಲಾವಣೆಯನ್ನುಂಟುಮಾಡಿದವು. ಮೇಲಿನ ಅಂಶಗಳಿಂದ ಪ್ರಭಾವಿತರಾದ (ತ.ರಾ.ಸು ಅವರು ತಮ್ಮ ಕಾದಂಬರಿಗಳಲ್ಲಿ ಆಧುನಿಕ ಮನೋಭಾವ ತಳೆಯಲು ಸಾಧ್ಯವಾಯಿತು. ಇವರ ಐತಿಹಾಸಿಕ ಕಾದಂಬರಿಗಳಲ್ಲಿ ಬರುವ ಸ್ತ್ರೀ (ಓಬವ್ವನಾಗತಿ) ಆಧುನಿಕ ಮನೋಭಾವದವಳು. ಹಾಗಾಗಿ ಇಲ್ಲಿ ಬರುವ ನಾಗತಿ ಸಹಗಮನ ಮಾಡುವುದಿಲ್ಲ. ಇದರಿಂದ ಸಮಸ್ತ ಜವಾಬ್ದಾರಿಯೂ ಹೆಗಲೇರಿದಂತಾಗಿ ಶಾಂತವಾಗಿದ್ದ ಮನಸ್ಸು ಅಸ್ತವ್ಯಸ್ತವಾಗುತ್ತದೆ. ಕಷ್ಟನಿಷ್ಠೂರಗಳಿಗೂ ಗುರಿಯಾಗುತ್ತದೆ. ರಾಜಕೀಯವೇ ಸಾಕು ಅಂದುಕೊಂಡಿದ್ದ ಓಬವ್ವ ನಾಗತಿ ಅನಿವಾರ್ಯವಾಗಿ ಪರಿಧಿಯೊಳಕ್ಕೆ ಪ್ರವೇಶಿಸಬೇಕಾಗುತ್ತದೆ.

ಸಹಗಮನ ಮಾಡದೆ ಇದ್ದದ್ದಕ್ಕಾಗಿ ಜನರು ಆಡುವ ಮಾತುಗಳು ಶೋಭೆ ತರುವುದಿಲ್ಲ. ಓಬವ್ವ ನಾಗತಿ ಮೊದಲಿನಿಂದಲೂ ಒಂದು ರೀತಿಯ ವಿಷಸ್ತತೆ. ಇದು ಸ್ವಯಂಭೊ ಅಲ್ಲದಿದ್ದರೂ ವಿಧಿಯ ಇಚ್ಛೆ ಮನಸ್ಸು ನಿರಾಸೆಯ ಪ್ರಪಾತಕ್ಕೆ ಬಿದ್ದದ್ದು ಒಂದು ರೀತಿಯ ವೈರಾಗ್ಯವನ್ನು ಮೂಡಿಸುತ್ತದೆ. ಇದೆಲ್ಲಾ ಮನಸ್ಸಿನ ಮಾಯೆಯೆಂದುಕೊಳ್ಳುತ್ತಾಳೆ. ಹಿಂದಿನ ಜನ್ಮದಲ್ಲಿ ನಾನು ತಾಯಿಗೆ ಮಾಡಿದ ಅರಿಶಿನ ಕುಂಕುಮದ ಪೂಜೆ ಸಾಲದಾಯಿತೇನೋ. ಅದಕ್ಕೆ ಈ ಜನ್ಮದಲ್ಲಿ ಪೂರ್ಣವಾಗಿ ಪತಿಸುಖ ದೊರೆಯಲಿಲ. ಅದಕ್ಕಾಗಿ ಈ ಜನ್ಮದ ಸವತಿಯೊಂದಿಗೆ ಕಚ್ಚಾಡಿದರೆ ಬರುವುದೇನೆಂದುಕೊಂಡು ನಾಗತಿ ಸಮಾಧಾನ ಪಟ್ಟುಕೊಳ್ಳಬೇಕಾಗುತ್ತದೆ.

ಓಬವ್ವ ನಾಗತಿ ತನ್ನ ಸವತಿ ಗೌರವ್ವನಿಗೆ ಕೊಟ್ಟ ಮಾತಿನಂತೆ ಓಬಣ್ಣ ನಾಯಕನಿಗೆ ಪಟ್ಟದಲ್ಲಿಕೂರಿಸಬೇಕಾದರೆ ಬಹಳಷ್ಟು ಶ್ರಮಿಸಬೇಕಾಗುತ್ತದೆ. ದುರ್ಗದ ಸಿಂಹಾಸನಕ್ಕೆ ಸಹಜವಾದ ಉತ್ತರಾಧಿಕಾರಿ ಇರುವಾಗ ಅದನ್ನು ತಪ್ಪಿಸುವುದು ಹೇಗೆ. ಓಬವ್ವ ನೇರವಾಗಿ ಹೇಳಲಾರದ ಸಂದಿಗ್ಧಕ್ಕೆ ಸಿಲುಕುತ್ತಾಳೆ. ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣಿಗೆ ಪ್ರಾಚೀನ ದಿನಗಳಿಂದಲೂ ಎರಡನೆದರ್ಜೆ ಸ್ಥಾನವನ್ನು ನೀಡಲಾಗಿದೆ. ಅದರಲ್ಲೂ ಹೆಣ್ಣನ್ನು ಕಾಡುವ ಸಾಮಾಜಿಕ ಸಮಸ್ಯೆಗಳಲ್ಲಿ ಬಂಜೆತನ ಘೋರವಾದ ಶಾಪವೆಂದರೂ ಸರಿಯೆ.) ಜನಪದ ಸಾಹಿತ್ಯದಲ್ಲಿಯೂ ಬಂಜೆಹೆಣ್ಣನ್ನು ಬಂಜರುಭೂಮಿಗೆ, ಸ್ವತಂತ್ರವಿಲ್ಲದೆ ದುಡಿಯುವ ಬಾಡಿಗೆ ಎತ್ತಿಗೆ ಹೋಲಿಸಿದ್ದಾರೆ.

**ಬಾಲಕರಿಲ್ಲದ ಬಾಲಿದ್ಯಾತರ ಜನ್ಮ**
**ಬಾಡಿಗೆ ಎತ್ತು ದುಡಿದ್ಹಾಂಗ॥**
**ಬಾಳೆಲೆಯ ಹಾಸುಂಡು ಬೀಸಿ ಒಗೆದ್ಹಾಂಗ.**

ಹೀಗೆ ಮಕ್ಕಳಿಲ್ಲದ ಸ್ತ್ರೀಯನ್ನು ಸಾಮಾಜಿಕವಾಗಿ ನಿಂದಿಸುತ್ತಾರೆ. ಈ ರೀತಿ ತ.ರಾ.ಸು ಕಾದಂಬರಿಗಳಲ್ಲಿನ ಸ್ತ್ರೀಯರು ಆಡಳಿತದ ಚುಕ್ಕಾಣಿ ಹಿಡಿದಿದ್ದರೂ ಮಾನಸಿಕವಾಗಿ ಅನೇಕ ಸಮಸ್ಯೆಗಳಿಗೆ ಸಿಲುಕುತ್ತಾರೆ. ಮಕ್ಕಳಾಗಲಿಲ್ಲವೆಂದು ಮರುಗುವ ನಾಗತಿ ಈ ರೀತಿ ತನ್ನಷ್ಟಕ್ಕೆ ತಾನು ಅಂದು ಕೊಳ್ಳುತ್ತಾಳೆ.(ಲಿಂಗಣ್ಣನ ಮಾನಸಿಕ ಸ್ಥಿತಿಯನ್ನು ತಿಳಿದ ಓಬವ್ವ ಎಷ್ಟೋ ವಿಚಾರಗಳನ್ನು ಚರ್ಚಿಸುತ್ತಾ ಸೂಕ್ಷ್ಮತೆಯನ್ನು ಅರಿಯುತ್ತಾಳೆ. ಆಗ ಲಿಂಗಣ್ಣನು ದಿವಂಗತ ನಾಯಕನ ಅಣ್ಣನ ಮಗನಾಗಿ ತನಗಿರುವ ಹಕ್ಕನ್ನು ಸ್ಥಾಪಿಸುವ ಛಲ ತೋರಿದ್ದರೆ ನಾಗತಿಗೆ ಕಷ್ಟವಾಗುತ್ತಿತ್ತೇನೋ. ಸಭೆಯಲ್ಲಿ ಲಿಂಗಣ್ಣನಾಡುವ ಮಾತುಗಳನ್ನು ಕೇಳಿ ಮರಗುತ್ತಾಳೆ. ನಿನ್ನನ್ನು ಹಡೆದ ಹೊಟ್ಟೆ ನನ್ನದಾಗಲಿಲ್ಲವಲ್ಲಾ ಎಂದು ಚಿಂತೆ ಮಾಡುವಾಗ ಲಿಂಗಣ್ಣನು ಎತ್ತಿ ಬೆಳೆಸಿದ ತೋಳು ನಿನ್ನದು ಎಂದು ಮುಗ್ಧ ವಿಧೇಯತೆಯನ್ನು ಪ್ರಕಟಿಸುತ್ತಾಳೆ.

ಅನಂತರ ಎರಡನೇ ಭೇಟಿಯ ವೇಳೆಗೆ ಲಿಂಗಣ್ಣನ ಮನಸ್ಸು ಸಂಪೂರ್ಣವಾಗಿ ನಾಗತಿಯ ಇಚ್ಛೆಯಂತೆ ವರ್ತಿಸುತ್ತದೆ. ಗೊತ್ತಿದ್ದೊ ಗೊತ್ತಿಲ್ಲದೆಯೋ ಅಪ್ರಜ್ಞಾಪೂರ್ವಕವಾಗಿ ಲಿಂಗಣ್ಣ ನಾಗತಿಗೆ ವಿಧೇಯನಾಗಿರುತ್ತಾನೆ. ನಾಗತಿಯ ಮಾತು, ಮಾತೃತ್ವದ ಗಾಂಭೀರ್ಯ

ಲಿಂಗಣ್ಣನ ಮೇಲೆ ಅಗಾಧವಾದ ಪ್ರಭಾವವನ್ನು ಬೀರುತ್ತವೆ. ಆತನನ್ನು ರಾಜ್ಯದ ಆಸೆಯೆಂಬ ಹಿಡಿತದಿಂದ ಬಿಡಿಸುತ್ತದೆ. ಇದೊಂದು ಅಸಾಧಾರಣವಾದ ಸಾಧನೆ ನಾಗತಿಯದು.

ಓಬವ್ವ ನಾಗತಿಯ ಮತ್ತೊಂದು ಅಸಾಧಾರಣ ಕಾರ್ಯವೆಂದರೆ ದಳವಾಯಿ ಮತ್ತಿತರ ಅಧಿಕಾರಿ ವರ್ಗ ಹಾಗೂ ಮುಖಂಡರನ್ನು ಒಪ್ಪಿಸುವುದು. ನಾಗತಿಯು ಪ್ರಮುಖರ ಅಭಿಪ್ರಾಯವನ್ನು ಸಂಗ್ರಹಿಸುತ್ತಾಳೆ. ಲಿಂಗಣ್ಣನಾಯಕನನ್ನು ಮುಂಚಿತವಾಗಿಯೇ ಒಪ್ಪಿಸಿದ್ದರಿಂದ ಪರಿಸ್ಥಿತಿ ಕೈಮೀರದಂತೆ ತಡೆಯುತ್ತಾಳೆ. ಮುದ್ದಣ್ಣನು ಮಾಡನಾಡಿದಾಗ ನಾಗತಿಗೆ ಅಸಮಾಧಾನವಾದರೂ ಅದನ್ನು ತೋರ್ಪಡಿಸದೆ ಚತುರ ರಾಜಕಾರಣಿಯಂತೆ ವರ್ತಿಸುತ್ತಾಳೆ. ಓಬವ್ವನಾಗತಿ ಮುದ್ದಣ್ಣನಂತಹ ಕ್ರೂರಿ, ಬುದ್ಧಿಶಾಲಿಯೂ ಆದ ದಳವಾಯಿಯ ವಿರೋಧವನ್ನು ಕಟ್ಟಿಕೊಳ್ಳಲು ಅಂಜಲಿಲ್ಲ. ಓಬವ್ವನಾಗತಿಯ ಜವಾಬ್ದಾರಿ ಅಷ್ಟಕ್ಕೆ ಕೊನೆಗೊಳ್ಳದೆ ಓಬಣ್ಣ ನಾಯಕರನ್ನು ನಾಯಕರನ್ನಾಗಿ ಮಾಡುವ ನಿರ್ಧಾರವನ್ನು ಸಭೆಯಲ್ಲಿ ಗೆಲ್ಲಿಸಿದ ಬಳಿಕ, ಆತನ ರಕ್ಷಣೆಗೆ ಇನ್ನೂ ಹೆಚ್ಚಿನ ಜವಾಬ್ದಾರಿಯನ್ನು ವಹಿಸಬೇಕಾಗುತ್ತದೆ. ಆತನ ದತ್ತು ಸ್ವೀಕಾರವು ಮುಗಿದು ಪಟ್ಟಾಭಿಷೇಕವನ್ನು ಶೀಘ್ರವಾಗಿ ನಡೆಸಲು ಸಿದ್ಧತೆಯನ್ನು ಮಾಡತೊಡಗಿದರು. ಪಟ್ಟಾಭಿಷೇಕ ಮುಗಿದ ಮೇಲೆ ಸೈನಿಕರಲ್ಲಿ ಅಸಮಾಧಾನ ಹೆಚ್ಚಾಗುತ್ತದೆ. ಮುದ್ದಣ್ಣನ ಕಾರಸ್ಥಾನ ಒಂದು ಕಡೆಯಾದರೆ, ಬರಿದಾದ ಬೊಕ್ಕಸ ಮತ್ತೊಂದು ಕಡೆ. ಇಂತಹ ವಿಚಿತ್ರ ಸನ್ನಿವೇಶದಲ್ಲಿ ನಾಗತಿ ತನ್ನ ಸ್ವಂತ ಭಂಡಾರವನ್ನು ಸೈನಿಕರಿಗೆ ಹಂಚಿಬಿಡಲು ನಿರ್ಧರಿಸುತ್ತಾಳೆ/ ಲಿಂಗಣ್ಣನಾಯಕ ಪ್ರಧಾನಿಯಾಗಿ ದಳವಾಯಿಗೂ, ನಾಯಕರಿಗೂ ಮಾತಿನ ಚಕಮಕಿ ನಡೆಯುತ್ತದೆ. ನಾಗತಿ ಮುದ್ದಣ್ಣನಿಗೆ ನೀಡಿದ ಕ್ಷಮೆ ಅಪಾಯಕ್ಕೆ ಕೊಟ್ಟ ಆಹ್ವಾನವಾಗಿತ್ತು. ಹೀಗೆ ( ರಾಜಕೀಯದ ಚದುರಂಗದಾಟದಲ್ಲಿ ನಾಗತಿ ಒಮ್ಮೆ ಸೋಲುತ್ತಾಳೆ ಒಮ್ಮೆ ಗೆಲ್ಲುತ್ತಾಳೆ/ ಇಲ್ಲಿಂದ ಮುಂದೆ ಗಿರಿಜೆಯ ರೂಪದಲ್ಲಿ ಸೇಡು ತೀರಿಸಿಕೊಳ್ಳಲು ಧೀರ್ಘಕಾಲದ ಯೋಜನೆಯನ್ನು ಹಾಕಿಕೊಂಡು ನಕ್ಷೆಯ ರೇಖೆಗಳನ್ನು ಗಮನಿಸುತ್ತಲೇ ಅಪಾಯ-ನಿರುಪಾಯ ಕ್ಷೇತ್ರದ ಮಧ್ಯದಲ್ಲಿ ಚಲಿಸುತ್ತಾ ಇದ್ದುದನ್ನು ಕಾಣುತ್ತೇವೆ.

(ಮುಂದೆ ಗಿರಿಜೆಯ ವ್ಯಕ್ತಿತ್ವದಲ್ಲಿ ನಮಗೆ ಕಂಡುಬರುವುದೆಂದರೆ ಕ್ರೂರ ಕೋಪದ ಭಾವಗಳು "ಸುಮಾರು ಹನ್ನೆರಡು ವರ್ಷಗಳಿಂದಲೂ ಸೇಡನ್ನು ತೀರಿಸಿಕೊಳ್ಳುವುದಕ್ಕಾಗಿ ಕಾದಿರುವ ಹೆಣ್ಣು. (ಕಸ್ತೂರಿನಾಯಕನ ಕತ್ತಿಯನ್ನು ಹನ್ನೆರಡು ವರ್ಷಗಳವರೆಗೆ ತನ್ನ ಬಳಿಯಲ್ಲಿಯೇ ಇಟ್ಟುಕೊಂಡಿರುವ ಹೆಣ್ಣು. ಕಸ್ತೂರಿನಾಯಕ ತನ್ನನ್ನೆ ತಾನು ಹತನೆನ್ನಾಗಿ ಮಾಡಿಕೊಂಡ ಕತ್ತಿ ಅದು) ಲಿಂಗಣ್ಣನಾಯಕನಿಗೆ ಆ ಕತ್ತಿ ಒಪ್ಪಿಸುತ್ತಾಳೆ. ಮುದ್ದಣ್ಣನ ವಿರುದ್ಧ ಈಗ ಸೇಸು ತೀರಿಸಿಕೊಳ್ಳಲು ಲಿಂಗಣ್ಣನಾಯಕನನ್ನು ಬಳಸಿಕೊಳ್ಳುತ್ತಾಳೆ"೩. (ರಕ್ತ ರಾತ್ರಿ). ಈ ರೀತಿ ದಾಸಿಯಾಗಿದ್ದುಕೊಂಡು ಗಿರಿಜೆ ಹುಚ್ಚಿಯಾಗಿ ಕಳವಾಯಿಗಳ ವಿರದ್ದ ಸೇಡನ್ನು ತೀರಿಸಿಕೊಳ್ಳಲು ಸಮಯ ಕಾಯುತ್ತಿದ್ದಳು ಇಂತಹ ಕಡೆಯಲ್ಲೆಲ್ಲಾ ಗಿರಿಜೆ ಬಗ್ಗೆ

ಕರುಣ ಮತ್ತು ಭಾವರಸಗಳಾಗಿ ಒಂದರ ಹಿಂದೆ ಒಂದು ಬಂದು ಮನಸ್ಸನ್ನು ಸೆರೆಹಿಡಿಯುತ್ತವೆ. "ಕಂಬನಿಯ ಕುಯಿಲು, ರಕ್ತರಾತ್ರಿಗೆ ಎಡೆಕೊಡುತ್ತದೆ. ಕಂಬನಿಯನ್ನು ಸುರಿಸಿದವರೇ ರಕ್ತವನ್ನು ಹರಿಸಬೇಕಾದುದು ಅನಿವಾರ್ಯವಾಗಿಬಿಟ್ಟದ್ದು ದುರ್ಗದ ದೌರ್ಭಾಗ್ಯ ಕಂಬನಿಯನ್ನು ತಡೆದು ರಕ್ತ ಹರಿಸಿದವರ ರಕ್ತವನ್ನು ಕುಡಿಯಲು ನಾಗತಿಯ ನೆರಳಾಗಿ ಗಿರಿಜೆ ಹಗಲಿರುಳು ಅಲೆಯುವುದನ್ನು ಕಾಣುತ್ತೇವೆ."೪ ವೀರಣ್ಣನ ರೂಪದಲ್ಲಿ ಬಂದ ಮಧುರ ಭಾವವೊಂದು ಗಿರಿಜೆಯ ಅಂತರಂಗದಲ್ಲಿ ನಂದನವನವನ್ನು ಸೃಷ್ಟಿಸಿ ಪುಷ್ಪ ಸುಗಂಧ ಪ್ರಚಾರ ಕೈಕೊಂಡು ಭವಿಷ್ಯ ನಕ್ಷೆಯನ್ನು ತೋರಿಸಿ ಆಗಾಗ ಮೈಮರೆಯುವಂತೆ ಮಾಡುತ್ತದೆ.

ತನ್ನ ಕಾರ್ಯಸಾಧನೆಗಾಗಿ ಗಿರಿಜೆ ಹುಚ್ಚಿಯಾಗುವುದು. ಸಂದರ್ಭ ಅರಿತ ಗಿರಿಜೆ ಲಿಂಗಣ್ಣನಾಯಕನಲ್ಲಿ ಸುಪ್ತವಾಗಿದ್ದ ಕ್ರೋಧವನ್ನು ಉದ್ದೀಪಿಸಿ ಸಿಂಹಾಸನಕ್ಕೇರಬೇಕೆಂಬ ನಿರ್ಧಾರ ಮೂಡಿಸುತ್ತಾಳೆ. ಸಾಮಾನ್ಯ ವಾಸಿಯಗಿದ್ದ ಮಹಿಳೆ ಗಿರಿಜೆಯಲ್ಲಿ ರೊಚ್ಚು, ಕೆಚ್ಚು ತುಂಬಿ ದಳವಾಯಿಗಳ ವಿರುದ್ಧ ದುರ್ಗದ ಸುತ್ತ ಮುತ್ತಲ ಹಳ್ಳಿಗಳಿಂದಲೂ ಜನತೆಯನ್ನು ಎತ್ತಿಕಟ್ಟಿ ಯುದ್ಧಕ್ಕೆ ಸಜ್ಜುಗೊಳಿಸುತ್ತಾಳೆ. ನಾಯಕರ ಬಗ್ಗೆ ಜನತೆಯಲ್ಲಿ ಅಭಿಮಾನ ಮೂಡಿಸುತ್ತಾಳೆ.

ಸಮಯಸ್ಫೂರ್ತಿಯ ಬೆಂಬಲದಿಂದ ಮುದ್ದಣನ ಕೈಗೆ ಸಿಗದಂತೆ ತಪ್ಪಿಸಿಕೊಳ್ಳುವ ಗಿರಿಜೆ ಹಳ್ಳಿ ಹಳ್ಳಿ ಸುತ್ತಿ ಮುಂಖಂಡರನ್ನು ಮುದ್ದಣ್ಣನ ವಿರುದ್ಧ ಎತ್ತಿ ಕಟ್ಟುತ್ತಾಳೆ. ಭರಮಣ್ಣ ಮೊದಲಾದವರೂ ನಿಬ್ಬೆರಗಾಗುವಂತಹ ತಂತ್ರಗಳನ್ನು ಹೂಡಿ ವಿಜಯಶಾಲಿಯಾಗುತ್ತಾಳೆ. ಗಿರಿಜೆಯ ರಕ್ತದಾಹವನ್ನು ಕಂಡು ಭರಮಣ್ಣ ಕೂಡ ಗಿರಿಜೆಯ ಮನಃಪರಿವರ್ತಿಸಲು ಆಗುವುದಿಲ್ಲ. ಹೀಗೆ ಮುದ್ದಣ್ಣನ ಕಿರಾತ ಕಾರ್ಯಗಳ ವಿರುದ್ಧ ಗಿರಿಜೆ ಉಗ್ರರೂಪ ತಾಳುತ್ತಾಳೆ. ನನ್ನದು ಒಂದು ತಲೆಯ ಸೇಡಲ್ಲ ಹತ್ತು ತಲೆಯ ಸೇಡು ಎಂದು ಅಬ್ಬರಿಸುತ್ತಾಳೆ. ಈ ರೀತಿ ಹೆಣ್ಣು ಚಾಮುಂಡಿಯಾದುದನ್ನು ಕಂಡು ಎಲ್ಲರು ಮೂಕವಿಸ್ಮಿತರಾಗುತ್ತಾರೆ. ಉಗ್ರ ಚನ್ನವೀರಸ್ವಾಮಿಗಳೂ ಸಹ ತಮ್ಮ ಅಸಹಾಯಕತೆಯನ್ನು ವ್ಯಕ್ತಪಡಿಸುತ್ತಾರೆ. ಆದರೆ ಗಿರಿಜೆಯ ಅತ್ಮಾರ್ಪಣೆಯನ್ನು ತಡೆಯುತ್ತಾರೆ. ಈ ರೀತಿ ಐತಿಹಾಸಿಕ ಕಾದಂಬರಿಯಲ್ಲಿ ಹೆಣ್ಣಾದವಳು ತಳೆಯುವ ನಿರ್ಧಾರ ತುಂಬಾ ವಿಶಿಷ್ಟ ಮತ್ತು ಗಮನಾರ್ಹ.

ಗಿರಿಜೆಯ ಅನಂತರ ಗುರುತಿಸಬಹುದಾದ ಮತೊಬ್ಬ ಹೆಣ್ಣೆಂದರೆ ಮಲ್ಲವ್ವನಾಗತಿ. ಮಲ್ಲವ್ವನಾಗತಿಯ ಅನಿವಾರ್ಯ ಪರಿಸ್ಥಿತಿ ಅವಳಲ್ಲಿ ಕ್ರೋಧವನ್ನು ಉದ್ದೀಪಿಸಿತ್ತು. ಚಿಕ್ಕಣ್ಣನಾಯಕನ ಪತ್ನಿಯಲ್ಲಿ ಒಬ್ಬಳಾದ ಮಲ್ಲವ್ವನಾಗತಿ ರಾಜಕಾರಣದಿಂದ ದೂರ ಉಳಿಯುತ್ತಾಳೆ.ನಾಯಕನು ಮೃತನಾದ ಮೇಲೆ ಸಹಗಮನ ಮಾಡದೆ ಹಾಗೆ ಉಳಿಯುತ್ತಾಳೆ. ಅರಮನೆಯ ತಿರಸ್ಕಾರಕ್ಕೆ ಒಳಗಾದ ನಾಗತಿ ಮನಸ್ಸಿನ ಮೂಲೆಯಲ್ಲಿ ಅವರೆಲ್ಲರ ಬಗ್ಗೆ ಆಕ್ರೋಶವನ್ನು ತಾಳಿದ್ದಳು. ಚಿಕ್ಕಣ್ಣನಾಯಕನ ಶಿವದೀಕ್ಷೆ ಪಡೆದಾಗ ಈಕೆಯೂ ದೀಕ್ಷೆ ಪಡೆದು ಶಿವಭಕ್ತಳಾಗುತ್ತಾಳೆ. ತನ್ನ ಚಂಚಲತೆಯಿಂದ ಚಿಕ್ಕಣ್ಣನಾಯಕ ಅದನ್ನು ತ್ಯಜಿಸುತ್ತಾನೆ. ಆದರೆ ಹಟ್ಟಿಮಲ್ಲವನಾಗತಿ ಮಾತ್ರ

ಶ್ರದ್ಧೆಯಿಂದ ಸ್ವೀಕರಿಸುದ ಶಿವದೀಕ್ಷೆಯನ್ನು ತ್ಯಜಿಸದೆ ವೀರಶೈವಳಾಗಿಯೇ ಉಳಿಯುತ್ತಾಳೆ. ಇದರಿಂದ ನಾಯಕನ ಕೋಪಕ್ಕೆ ಪಾತ್ರಳಾಗಿ ಅರಮನೆಯಿಂದ ದೂರವಾಗಿ ಬೇರೆ ಗೃಹದಲ್ಲಿ ವಾಸಿಸುತ್ತಿರುತ್ತಾಳೆ"[3]. (ರಕ್ತ ರಾತ್ರಿ). ಈ ಕಾರಣದಿಂದ ಅರಮನೆಯ ರಾಜಕಾರಣದಿಂದ ಮಲ್ಲವ್ವನಾಗತಿ ದೂರಸರಿಯಬೇಕಾಗುತ್ತದೆ. ಚಿಕ್ಕಣ್ಣನಾಯಕ ಮೃತನಾದ ಮೇಲೆ ಸಹಗಮನ ಮಾಡದೆ ಉಳಿಯುತ್ತಾಳೆ.

ಮಲ್ಲವ್ವ ಅರಮನೆಯ ರಾಜಕಾರಣವನ್ನು ಪ್ರವೇಶಿಸಬೇಕಾದ ಅನಿವಾರ್ಯತೆ ಒದಗಿಬಂದಿತ್ತು. ಕೊನೆಗೆ ಜುಗುಪ್ಸೆಯಿಂದ ವೈರಾಗ್ಯ ಮೂಡಿ ಅರಮನೆಯಿಂದ ದೂರ ಉಳಿದಿದ್ದ ಭರಮಣ್ಣ, ಪರುಶುರಾಮಪ್ಪ ಮೊದಲಾದವರು ನಾಗತಿ ಹತ್ತಿರ ಬಂದು ಮಾತನಾಡಿದಾಗ ಅವಳ ಸುಪ್ತ ಮನಸ್ಸಿನಲ್ಲಿದ್ದ ಕ್ರೋಧವು ಗುರಪದೇಶವನ್ನು ಮರೆತು ಹೆಡೆಯೆತ್ತಿ ನಿಲ್ಲುತ್ತದೆ. ಕೊನೆಗೆ ನಿರಾಶೆಯ ಕಹಿಯನ್ನು ಕಾರುತ್ತಾಳೆ. ನಾಗತಿಯ ವರ್ತನೆಯನ್ನು ಕಂಡ ಗುರುಗಳು ಅವಳ ಬಳಿ ಮಾತನಾಡುತ್ತಾರೆ. ಲಿಂಗಣ್ಣನ ವಿವಾಹ ವಿಷಯ ಬಂದಾಗ ನಾಗತಿ ತುಂಬಾ ಕೋಪಿಸಿಕೊಳ್ಳುತ್ತಾಳೆ. ಏಕೆಂದರೆ ಆ ಸಮಯದಲ್ಲಿ ನಾಗತಿಯನ್ನು ನೇರವಾಗಿ ಮಾತನಾಡಿಸದೆ ಗುರುಗಳ ಮೂಲಕ ಮಾತನಾಡಿಸಲು ಪ್ರಯತ್ನಿಸುತ್ತಾರೆ. ಅನಂತರ ಮತ್ತೆ ಲಿಂಗಣ್ಣನ ಕೊಲೆಯಾದ ಮೇಲೆ ನಾಗತಿ ನೆನಪಾಗುತ್ತದೆ. ಆಗ ಪಟ್ಟದ ಸಮಸ್ಯೆ ಎದುರಾಗುತ್ತದೆ. ಆ ಹೊತ್ತಲ್ಲಿ ನಾಗತಿ ಏನಾದರೂ ಸಮಸ್ಯೆ ಎದುರಾದಾಗ ತನ್ನನ್ನು ಮಾಡನಾಡಿಸಲು ಬರುತ್ತಾರೆಂದು ತಿಳಿದು, ರಾಜಕಾರಣ ವಿಚಾರದಲ್ಲಿ ನಿರ್ಲಿಪ್ತಳಾಗಬೇಕೆಂದು ತೀರ್ಮಾನಿಸುತ್ತಾಳೆ. ಲಿಂಗಣ್ಣನಾಯಕನ ಅನಂತರ, ರಂಗಪ್ಪನಾಯಕ ಅಧಿಕಾರಕ್ಕೆ ಬಂದರೂ ಮುದ್ದಣ್ಣನ ಯೋಜನೆಯಂತೆ ಸ್ವತಂತ್ರವಾಗಿ ಅಧಿಕಾರ ನಡೆಸಲು ಸಾಧ್ಯವಾಗುವುದಿಲ್ಲ. ಹಾಗೂ ನಾಗತಿಯನ್ನು ನೆಪಮಾತ್ರಕ್ಕೆ ಕೇಳಲಾಗುತ್ತಿತ್ತು. ಹೀಗೆ ದುರ್ಗದ ರಾಜಕೀಯ ಕೇವಲ ರಕ್ತವನ್ನು ಚೆಲ್ಲುವುದಕ್ಕಷ್ಟೆ ಸೀಮಿತವಾಗುವುದರಿಂದ ಅದರ ವಿಚಾರವಾಗಿ ಭಯ ತಿರಸ್ಕಾರಗಳು ಮೂಡಿ ಜೀವನದಲ್ಲಿ ಜುಗುಪ್ಸೆ ಮೂಡಿ ನಾಗತಿ ಆತ್ಮಹತ್ಯೆ ಮಾಡಿಕೊಂಡಿರಬಹುದು. ಮಲ್ಲವ್ವನಾಗತಿ ರಾಜಕಾರಣದಲ್ಲೂ ಮುಂದೆ ಬರದೆ, ಧಾರ್ಮಿಕವಾಗಿಯೂ ಹೆಚ್ಚಿನದನ್ನು ಸಾಧಿಸದೆ, ಬದುಕೇ ಭಾರವಾಗಿ ಯಾತನೆಯನ್ನು ತಟ್ಟನೆ ನಿಲ್ಲಿಸಿಬಿಟ್ಟಂತೆ ಕಂಡು ಬರುತ್ತದೆ.

ಗೋಣೂರಿನ ಕಸ್ತೂರಿ ನಾಯಕನ ಮಡದಿ ಗಂಗವ್ವ ಅಸಾಮಾನ್ಯ ಹೆಣ್ಣು. ಸಮರತೆಯುಳ್ಳ ದಾಂಪತ್ಯ ಜೀವನ ಇವರದು. ರಾಜಕಾರಣದ ಸೆಳೆತಕ್ಕೆ ಸಿಕ್ಕ ಕಸ್ತೂರಿ ನಾಯಕ ಮನೆಮಠಗಳನ್ನೆಲ್ಲಾ ಮರೆಯುತ್ತಾನೆ. ಗಂಗವ್ವ ತುಂಬಾ ಜವಾಬ್ದಾರಿಯಿಂದ ನಡೆದುಕೊಳ್ಳುತ್ತಾಳೆ. ಆದರ್ಶ ಪತ್ನಿಯಷ್ಟೇ ಅಲ್ಲ ಸೊಸೆ, ಅತ್ತಿಗೆ, ಎಲ್ಲವೂ ಆಗಿದ್ದಳು. ಮಗನಾದ ಪಾಪನಾಯಕ ತನ್ನ ಸೊಸೆಯನ್ನು ದೇವತೆಯೆಂದು ತಿಳಿದಿದ್ದ. ತನ್ನ ಕುಟುಂಬದ ಪುರುಷರು ದಾರಿತಪ್ಪಿದಾಗ ಸರಿದಾರಿಗೆ ತರುವ ಪ್ರಯತ್ನವನ್ನು ಹೆಣ್ಣಾದವಳು ಮಾಡಬೇಕು. ಅದೇ ಕೆಲಸವನ್ನಿಲ್ಲಿ ಗಂಗವ್ವ ಮಾಡುವುದು. ಪ್ರೇಮ, ವಾತ್ಸಲ್ಯ, ಮಾನವೀಯತೆಗಳನ್ನೆಲ್ಲಾ ಪುರುಷರಲ್ಲಿ ಬಿತ್ತುವಂತಹವಳು ಗಂಗವ್ವನಾಗುತ್ತಾಳೆ

ಗಂಗವ್ವನನ್ನು. ನೆನಪಿಗೆ ತರುವಂತಹ ಮತ್ತೊಂದು ಪಾತ್ರವೆಂದರೆ ಮಲ್ಲಭಟ್ಟರ ಹಳ್ಳಿಯ ಗೌಡರ ಪತ್ನಿ, ಗಂಗವ್ವನಿಂದ ಅವಳ ಮನಸ್ಸು ಪರಿವರ್ತನೆಯಾದರೆ ಗೌಡತಿಯಿಂದ ದಾಸನಾಯಕ ಪರಿವರ್ತನೆ ಹೊಂದುತ್ತಾನೆ. ಗೌಡತಿಯ ವರ್ತನೆ ಗಾಂಧೀಜಿಯ ಅಸಹಕಾರ ಚಳವಳಿಯನ್ನು ನೆನಪಿಗೆ ತರುವಂತಹುದು. ದಾಸನಾಯಕನ ಮನಸ್ಸನ್ನು ಪರಿವರ್ತಿಸಿ, ಸೈನಿಕರ ನಿರ್ಧಾರವನ್ನು ಕಳುಹಿಸಿಬಿಟ್ಟಳು. ಜೊತೆಗೆ ಹುಚ್ಚಿ ಹನುಮವ್ವನ ಪಾತ್ರ ಮುಂತಾದವು 'ತಿರುಗುಬಾಣ' ಕಾದಂಬರಿಯಲ್ಲಿ ತುಂಬಾ ಪ್ರಾಮುಖ್ಯ ಪಡೆಯುತ್ತವೆ.

ಈ ರೀತಿಯಾಗಿ ತ.ರಾ.ಸು ಅವರ ಐತಿಹಾಸಿಕ ಕಾದಂಬರಿಗಳಲ್ಲಿ ಸ್ತ್ರೀ ತುಂಬಾ ಮುಖ್ಯಳೆನಿಸುತ್ತಾಳೆ. ಸ್ತ್ರೀಯಾದವಳು ಕೇವಲ ನಾಲ್ಕು ಗೋಡೆಗಳ ಮಧ್ಯೆ ಬಂಧಿಯಲ್ಲ. ಹೆಣ್ಣು ಆಡಳಿತವನ್ನು ಮಾಡಬಲ್ಲಳು. ಪುರುಷನಿಗೆ ಸರಿಸಮನಾಗಿ ನಿಲ್ಲಬಲ್ಲಳು. ಹಾಗೂ ಉತ್ತರಾಧಿಕಾರತ್ವದ ಪ್ರಶ್ನೆ ಬಂದಾಗ ತಳೆಯುವ ದಿವ್ಯ ನಿಲುವು ರಾಜಕೀಯವಾಗಿಯಷ್ಟೇ ಅಲ್ಲದೆ ಸಾಮಾಜಿಕವಾಗಿ, ಧಾರ್ಮಿಕವಾಗಿ ಮುಖ್ಯವೆನಿಸುತ್ತದೆ. ಸೈನ್ಯವನ್ನು ನಿಯಂತ್ರಿಸುವಂತಹ ಸಂದರ್ಭ ಕೂಡ ಬಂದಾಗ ಸ್ವಮತ ವಿವೇಚನೆಯಿಂದ ಸರಿದಾರಿಯಲ್ಲಿ ನಡೆಯುತ್ತಾಳೆಂಬುದನ್ನು ಓಬವ್ವನಾಗತಿ, ಗಿರಿಜೆ, ಗಂಗವ್ವ ಗೌಡತಿ ಮುಂತಾದವರಿಂದ ಕಂಡುಕೊಳ್ಳಬಹುದಾಗಿದೆ.

ಸುಮಾರು ೧೬-೧೭ನೆಯ ಶತಮಾನದ ಇತಿಹಾಸವು ತ.ರಾ.ಸು ಅವರ ಕಾದಂಬರಿಗಳಲ್ಲಿ ಕಂಡುಬರುತ್ತದೆ. ಬ್ರಿಟಿಷರ ಆಳ್ವಿಕೆ ಅದಾಗಿದ್ದರಿಂದ ಭಾರತೀಯ ಆಡಳಿತದಲ್ಲಿ ರಾಜನಿಗೆ ಗಂಡು ಸಂತಾನ ಇಲ್ಲದಿದ್ದಾಗ ದತ್ತು ತೆಗೆದುಕೊಳ್ಳುವ ಪದ್ಧತಿಯನ್ನು ನಿಷೇಧಿಸುತ್ತಾರೆ. ಅಂತಹ ಹೊತ್ತಿನರಾಜನ ಹೆಂಡತಿ ರಾಣಿಯಾದವಳು ಅಧಿಕಾರದ ಚುಕ್ಕಾಣಿ ಹಿಡಿಯಬೇಕಾಗುತ್ತಿತ್ತು. ಸಹಗಮನ ವಿಚಾರದಲ್ಲಿ ಹೆಣ್ಣಾದವಳು ಆಡಳಿತದ ಅನುಕೂಲಕ್ಕಾಗಿ ಪಟ್ಟದರಾಣಿ (ಹಿರಿಯ) ಸಹಗಮನ ಮಾಡಾಬೇಕಾದಾಗ ಅದಕ್ಕೆ ಬದಲಾಗಿ ಕಿರಿಯ ರಾಣಿಯರು ಸಹಗಮನ ಮಾಡುವುದರ ಮೂಲಕ ತ್ಯಾಗ ಮಾಡುವುದನ್ನು ತ.ರಾ.ಸು ಅವರ ಐತಿಹಾಸಿಕ ಕಾದಂಬರಿಗಳಲಿ ಕಾಣುತ್ತೇವೆ. ಹೀಗೆ ತ.ರಾ.ಸು ಅವರಲ್ಲಿ ಐತಿಹಾಸಿಕ್ಲ ಸ್ತ್ರೀಯಾದವಳ ಬದುಕು ವಿಭಿನ್ನ ನಡೆಗಳಲ್ಲಿ ಹೇಗೆ ಸಾಗಿ ಬಂದಿದೆ ಎಂಬುದು ಖಚಿತವಾಗಿ ಕಂಡು ಬರುತ್ತದೆ.

'ದುರ್ಗಾಸ್ತಮಾನ' ತ.ರಾ.ಸು ಅವರ ಕೊನೆಯ ಐತಿಹಾಸಿಕ ಕಾದಂಬರಿ ೬೯೮ ಪುಟಗಳನ್ನು ಹೊಂದಿರುವ ಈ ಕಾದಂಬರಿ ಚಿತ್ರದುರ್ಗದ ಜನಮನದಲ್ಲಿ ನೆಲೆಸಿರುವ ಕೊನೆಯ ಮದಕರಿನಾಯಕನ ಬದುಕು, ವ್ಯಕ್ತಿತ್ವ, ಯುದ್ಧ, ಸಾಹಸ ಮುಂತಾದವುಗಳ ನೆನಪಿಗೆ ಸಾಕ್ಷಿಯಾಗಿ ನಿಲ್ಲುತ್ತದೆ. ಚಿತ್ರದುರ್ಗದ ಜನರಿಗೆ ಮದಕರಿನಾಯಕನೆಂದರೆ ಚಿತ್ರದುರ್ಗ, ಚಿತ್ರದುರ್ಗವೆಂದರೆ ಮದಕರಿನಾಯಕನೆಂಬ ಭಾವನೆ. ಈ ಭಾವನೆ ಬರೀ ನಾಯಕ ಜನಾಂಗಕ್ಕಷ್ಟೆ ಅಲ್ಲ. ದುರ್ಗದ ನೀರು ಕುಡಿದ ಅಲ್ಲಿ ಹುಟ್ಟಿದವರೆಲ್ಲರಿಗೂ ದುರ್ಗ ನಮ್ಮದು ಮದಕರಿನಾಯಕ ನಮ್ಮವನೆಂಬ ಭಾವನೆ. ಈ ರೀತಿ ದುರ್ಗದ ಜನತೆ ಮತ್ತು ಮದಕರಿನಾಯಕನದು ಅವಿನಾಭಾವ ಸಂಬಂಧ.- ಕಾದಂಬರಿ ಮುನ್ನುಡಿಯಲ್ಲಿ ಕಾದಂಬರಿಕಾರರೆ ಹೇಳಿರುವ ಮಾತಿದು. "ಸಂತಾನವಿಲ್ಲದೆ ಮಡಿದ

ಕಸ್ತೂರಿರಂಗಪ್ಪನಾಯಕನ ಉತ್ತರಾಧಿಕಾರಿಯಾಗಿ ಓಬ್ಬವ ನಾಗತಿಯ ಆಣತಿಯಂತೆ ದೂರದ ಸಂಬಂಧಿ ೧೨ ವರ್ಷದ ಬಾಲಕ ಮದಕರಿನಾಯಕನನ್ನು ದೊರೆಯನ್ನಾಗಿ ಮಾಡುತ್ತಾರೆ".೬ ಈ ರೀತಿ ಮದಕರಿನಾಯಕನನ್ನು ಪಟ್ಟಕ್ಕೆ ತಂದ ಸಂದರ್ಭದಲ್ಲಿ ಈತನಿನ್ನು ಬಾಲಕನೆಂದು ತಾತ್ಸಾರ ಮಾಡಿದ್ದ ಸಾಮಂತ ಪಾಳೆಯಗಾರರಿಗೆಲ್ಲ ತಕ್ಕ ಪಾಠ ಕಲಿಸಿದೆ. ಓಬವ್ವ ನಾಗತೀಯ ದಿಟ್ಟತನ, ಶತ್ರುಗಳನ್ನು ಹಿಮ್ಮೆಟ್ಟಿಸಿದ ಪರಿ ಕಾದಂಬರಿಯಲ್ಲಿ ತುಂಬಾ ಮನೋಜ್ಞವಾಗಿ ಚಿತ್ರಿತವಾಗಿದೆ.

"ಓಬವ್ವನಾಗತಿ ಮದಕರಿನಾಯಕನಿಗೆ ಪ್ರತಿ ಹಂತದಲ್ಲಿ ದುರ್ಗದ ಒಳಿತಿಗಾಗಿ ಕೊಡುವ ಸೂಕ್ತಮಾರ್ಗದರ್ಶನ, ಧೈರ್ಯ ತುಂಬುವಿಕೆ, ಪ್ರೀತಿ, ವಾತ್ಸಲ್ಯ ಇವೆಲ್ಲ ಆತನ ಸಮರ್ಥ ರಾಜಕಾರಣಕ್ಕೆ ಭದ್ರ ಬುನಾದಿಯಾಗುತ್ತದೆ, ಆದರ್ಶವಾಗುತ್ತದೆ".೭ ಹಂಪನಾಗರಾಜ್ಯನವರ ಈ ಹೇಳಿಕೆ ವಯ್ಯಸ್ಸಾಗಿದ್ದರೂ ಕೂಡ ನಾಗತಿ ಆಡಳಿತದಲ್ಲಿ ಮದಕರಿನಾಯಕನಿಗೆ ಬೆಂಗಾವಲಾಗಿ ನಿಂತು ಶತೃಗಳ ಉಪಟಳವನ್ನಡಗಿಸುತ್ತಾಳೆಂಬುದು ಹಾಗೂ ಹೆಣ್ಣು ಪ್ರತೀಕಾರ ಮನೋಭಾವ ತಳೆದರೆ ಎಂಥ ಸಾಹಸಕ್ಕೂ ಮುಂದಾಗುತ್ತಾಳೆಂಬುದನ್ನು ತಿಳಿಸುತ್ತದೆ. ಅಲ್ಲದೆ ವಯಸ್ಸಾದ ನಾಗತಿ ತಾನು ಆಲೋಚಿಸುವ ವಿಧಾನ ಕೂಡ ತುಂಬಾ ಮನೋಜ್ಞವಾದುದೆ.

ಸುಮಾರು ಎಪ್ಪತ್ತಾರು ವರ್ಷದ ಓಬವ್ವ ನಾಗತಿ ಹೊನ್ನವ್ವೆಗೆ ಹೇಳುವ ಮಾತು ದುಃಖಕ್ಕೂ ವಯಸ್ಸಿಗೂ ಏನು ಸಂಬಂಧ ಹೊನ್ನವ್ವ, ಪ್ರಾಯ ನೋಡಿಕೊಂಡು ದುಃಖ ಬರುವುದಿಲ್ಲ. ಆದರೂ ಹೆಣ್ಣಾಗಿ ಇಷ್ಟು ವರ್ಷ ಬದುಕಬಾರದು. ನೂರು ವರ್ಷ ಬದುಕು ಎಂದು ಹರಸುವ ಜನಕ್ಕೆ ಬುದ್ದಿ ಇಲ್ಲ. ಆ ವಯಸ್ಸಿಗೆ ಎಷ್ಟು ಬಗೆಯ ದುಃಖದ ಬೇಗೆ ಅದರಲ್ಲೂ ಹೆಂಗಸಿಗೆ ಬಡಿಯುತ್ತದೆ. ಎಂದು ಗೊತ್ತಿದ್ದರೆ ಹಾಗೆ ಅರಸುತ್ತಿರಲಿಲ್ಲ" (ದುರ್ಗಾಸ್ತಮಾನ ಪುಟ-೭) ಈ ರೀತಿ ತಮ್ಮ ದುಃಖವನ್ನು ತೋಡಿಕೊಳ್ಳುವ ಮಹಿಳೆಯರು ಅನಂತರ ಹೆಣ್ಣಾಗಿ ಹುಟ್ಟಲೇ ಬಾರದಿತ್ತೆನ್ನುವ ಅಭಿಪ್ರಾಯದ ಸ್ತ್ರೀಯರೂ ಇದರ ಕಾದಂಬರಿಗಳಲ್ಲಿ ಕಂಡುಬರುತ್ತಾರೆ. ತಮ್ಮ ನೋವು ದುಃಖವನ್ನು ಇನ್ನೊಬ್ಬ ಸ್ತ್ರೀಯ ಹತ್ತಿರ ತೋಡಿಕೊಳ್ಳುವ ಮಹಿಳೆಯರು. "ಯಾರಿಗೆ ಯಾರು ಅಳಬೇಕೋ ಯಾರಿಗೆ ಯಾರು ಸಂತ್ರೈಸಬೇಕೋ. ಅಂತೂ ಹೆಣ್ಣಾಗಿ ಹುಟ್ಟೋದೇ ಕಷ್ಟಪಡಲಿಕ್ಕೆ ವಿಧಿ ಹೆಣ್ಣಿನ ಹಣೇಲಿ ಅದೊಂದನ್ನೇ ಬರೆದಿರೋದು"೮.(ದುರ್ಗಾಸ್ತಮಾನ ಪುಟ-೮) ಈ ರೀತಿ ಹೆಣ್ಣಾದವಳು ತನ್ನ ಬದುಕಿನ ಮಿತಿಯನ್ನು ತಾನೇ ಹೇಳಿಕೊಳ್ಳುತ್ತಾಳೆ.

ಈ ಕಾದಂಬರಿಯಲ್ಲಿ ಪ್ರಾದೇಶಿಕವಾದ ಅಭಿಮಾನ ಓತಪ್ರೋತವಾಗಿ ಹರಡಿದೆ. ಶತೃಗಳನ್ನು ಹಿಮ್ಮೆಟ್ಟಿಸುವಲ್ಲಿ ಮುದುಕಿಯಾಗಿದ್ದರೂ ನಾಗತಿಯ ಉತ್ಸಾಹ, ಪ್ರತಿಸ್ಪರ್ಧಿಗಳ ರಾಜಕೀಯಸ್ಥಿತಿ, ದೊರೆಗಳ ಪಾರಂಪರಿಕ ವ್ಯಕ್ತಿತ್ವ, ಆಗಿನ ಕಾಲದ ಯುದ್ಧ ಪರಿಕರಗಳು, ಶಿಕ್ಷೆ ವಿಧಾನಗಳು, ರಾಷ್ಟ್ರಪ್ರೇಮ, ಮಾನವೀಯತೆ ಮುಂತಾದವುಗಳು ಅನನ್ಯವೆಂಬಂತೆ ಚಿತ್ರಿತವಾಗಿದೆ.

ತ.ರಾಸು. ಅವರ ಐತಿಹಾಸಿಕ ಕಾದಂಬರಿಗಳಲ್ಲಿನ ಸ್ತ್ರೀಸಂವೇದನೆ ಗುರುತಿಸುವ ಸಂದರ್ಭದಲ್ಲಿ ಗಮನಿಸಬಹುದಾದ ಅಂಶಗಳಲ್ಲಿ ಮುಖ್ಯವಾದದ್ದೇನೆಂದರೆ, ಹೈದರಾಲಿಯೊಡನೆ ಯುದ್ಧ ಪ್ರಾರಂಭವಾಗಿ ಏಳೆಂಟು ತಿಂಗಳುಗಳು ಕಳೆದರೂ ಯುದ್ಧನಿಲ್ಲದೆ ಮುಂದುವರೆಯುತ್ತದೆ.

ದುರ್ಗದ ಜನತೆಗೆ ಇಂತಹ ಕಷ್ಟ ಬಂದುದನ್ನು ಕಂಡು ನಾಯಕ ತನ್ನ ಅದೃಷ್ಟ ಹಳಿದು ಕಂಬನಿಗರೆದಾಗ ತಾಯಿಯಾದ ನಿಂಗವ್ವ ಮಗನಿಗೆ ಬುದ್ಧಿ ಹೇಳುವ ಪ್ರಸಂಗ. "ಅರಸಾದೋನು ಆಳಬೇಕು; ಅಳಬಾರದು. ಅಪ್ಪಯ್ಯ, ಯುದ್ಧದಲ್ಲಿ ಗೆಲ್ಲೋಯೋಚನೆ ಮಾಡು, ಅದಕ್ಕೆ ತಲೆ ತಪ್ಪಿಸಿಕೋಬೇಡ. ಬೇರೆ ಚಿಲ್ಲರೆ ಮಾತಿಗೆಲ್ಲಾ ಮನಸ್ಸು ಸೋಲಲಿಕ್ಕೆ ಬಿಡಬೇಡ' ಎಂದು ಹೇಳುವ ಮಾತಿನಲ್ಲಿ ಓಬವ್ವನಾಗತಿಯ ವಾಣಿಯು ಪ್ರತಿಧ್ವನಿಸುತ್ತಿರುವಂತೆ ತೋರುತ್ತದೆ."೯ ಈ ರೀತಿ ನಿಂಗವ್ವ ಕೂಡ ಅರಮನೆಯಲ್ಲಿ ಉತ್ಸವಮೂರ್ತಿಯಾಗಿ ಕೂರದೆ ಯುದ್ಧದಲ್ಲಿ ಮದಕರಿನಾಯಕನಿಗೆ ನಿರಾಸಕ್ತಿ ಮೂಡಿದಾಗ ಅವನಲ್ಲಿ ಉತ್ಸಾಹ ಮತ್ತು ಧೈರ್ಯ ತುಂಬುತ್ತಾಳೆ. ಈ ರೀತಿ ದುರ್ಗದ ಇತಿಹಾಸದಲ್ಲಿ ಪ್ರತಿಯೊಬ್ಬ ಮಹಿಳೆಯದೂ ತನ್ನದೇ ಆದ ಕೊಡುಗೆ ಮತ್ತು ಸಾಲಿದೆ. ಅವರೆಲ್ಲರೂ ಧೀರ ಮಹಿಳೆಯರೇ.

ತ.ರಾ.ಸು ಅವರ ಐತಿಹಾಸಿಕ ಕಾದಂಬರಿಗಳಲ್ಲಿ ಚಿತ್ರದುರ್ಗದ ಇತಿಹಾಸ ಮತ್ತು ದುರ್ಗವನ್ನಾಳಿದ ನಾಯಕರ ಬದುಕು ಚಿತ್ರಿತವಾಗಿದೆ. "ದುರ್ಗವೆಂದರೆ ಮದಕರಿ, ಮದಕರಿಯೆಂದರೆ ದುರ್ಗ" ಎನ್ನುವುದು ಮನೆಮಾತಾಗಿದೆ. ಹಾಗೆಯೇ ದುರ್ಗದ ಜನತೆಯನ್ನು ರೋಮಾಂಚನಗೊಳಿಸುವ ಮತ್ತೊಂದು ಹೆಸರೆಂದರೆ ಒನಕೆಓಬವ್ವ ದುರ್ಗದ ಇತಿಹಾಸದಲ್ಲಿ ಓಬವ್ವನಿಗೂ ಪ್ರಮುಖವಾದ ಸ್ಥಾನವನ್ನು ಕಲ್ಪಿಸಲಾಗಿದೆ. ಮುಖ್ಯವಾಗಿ ದುರ್ಗದ ಜನತೆ ಸ್ವಾಮಿನಿಷ್ಠೆ, ಸಮಯಸ್ಫೂರ್ತಿ, ತ್ಯಾಗ ಈ ಮೂರು ಗುಣಗಳನ್ನು ಈಕೆಯಲ್ಲಿ ಗುರುತಿಸಿ ಕೊಂಡಾಡುತ್ತಾರೆ. ಹೈದರಾಲಿಗೂ, ಮದಕರಿನಾಯಕನಿಗೂ (೧೭೫೪-೧೭೭೯) ಯುದ್ಧ ನಡೆಯುವಾಗ, ಹೈದರಾಲಿ ಸೇನೆ ದುರ್ಗಕ್ಕೆ ಮುತ್ತಿಗೆ ಹಾಕಿ ಸೈನಿಕರು ಒಬ್ಬೊಬ್ಬರೆ ಕಿಂಡಿಯ (ಓಬವ್ವನ ಕಿಂಡಿ) ಮೂಲಕ ಕೋಟೆಯೊಳಗೆ ನುಸುಳುತ್ತಿರುವಾಗ ಒಬ್ಬೊಬ್ಬರನ್ನೆ ಒನಕೆಯಿಂದ ಹೊಡೆದು ಕೋಟೆ ಸಂರಕ್ಷಿಸಿದ್ದರಿಂದ_ಒನಕೆ ಓಬವ್ವನೆಂದು ಕರೆಯಲಾಗಿದೆ. ಈ ಹಿನ್ನೆಲೆಯಲ್ಲಿ ಓಬವ್ವಳ ಈ ಘಟನೆ ದುರ್ಗದ ಇತಿಹಾಸದಿಂದ ಬೇರ್ಪಡಿಸಲಾಗದ ರೀತಿಯ ಅವಿನಾಭಾವ ಸಂಬಂಧವನ್ನು ಹೊಂದಿರುವುದು ಸತ್ಯ.

ಓಬವ್ವೆಯ ಮೇಲಿನ ಘಟನೆ ಕುರಿತಂತೆ ವಿದ್ವಾಂಸರು ಬೇರೆಬೇರೆ ರೀತಿ ಗುರುತಿಸಿರುವುದುಂಟು. ಓಬವ್ವ ಚರಿತ್ರೆಯಲ್ಲಿ ಬರುವ ಹೆಣ್ಣೇ ದುರ್ಗದ ಕೋಟೆ ಉಳಿಸಲು ಈಕೆ ತೋರಿದ ಸಾಹಸ ವಾಸ್ತವವಾದುದೆ? ಓಬವ್ವನ ಅಂತ್ಯವಾದುದು ಯಾವ ರೀತಿ, ಕೋಟೆಯ ಕಿಂಡಿ ಮತ್ತು ಓಬವ್ವನ ಸಂಬಂಧ ಕಲ್ಪಿಸಿರುವುದು - ಇತ್ಯಾದಿ.

ಒನಕೆಓಬವ್ವಳ ಬಗ್ಗೆ ವಿದ್ವಾಂಸರ ಅಭಿಪ್ರಾಯಗಳೇನೆ ಇದ್ದರೂ ಪ್ರಸ್ತುತ ಮಹಾಪ್ರಬಂಧದ ಸಂದರ್ಭದಲ್ಲಿ ತ.ರಾ.ಸು. ಅವರ ದುರ್ಗಾಸ್ತಮಾನ ಕಾದಂಬರಿಯಲ್ಲಿ ಬರುವ ಓಬವ್ವ ನನಗೆ ಮುಖ್ಯಳಾಗುತ್ತಾಳೆ. ಕಾದಂಬರಿಯಲ್ಲಿ ಬರುವ "ಓಬವ್ವ ದುರ್ಗದ ಕೋಟೆಯನ್ನು ರಕ್ಷಿಸಿ ಮದಕರಿ ನಾಯಕನಿಂದ ಬಹುಮಾನ ಪಡೆದು ಅರಸರಿಂದ ಮತ್ತು ದುರ್ಗದ ಜನತೆಯಿಂದ ಪ್ರಶಂಸಿಸಲ್ಪಡುತ್ತಾಳೆ. "ಓಬವ್ವೆಯು" ಗುಡಿಕೋಟೆ ಸಂಸ್ಥಾನದಲ್ಲಿ ದೊರೆಗಳಿಗೆ

ಅಚ್ಚುಮೆಚ್ಚಿನ ಆಪ್ತ ಸೇವಕನೂ, ಕಹಳೆಯವನೂ ಆಗಿದ್ದ ಚಲವಾದಿ ಚಿನ್ನಪ್ಪನ ಮಗಳು. ಕದುರಪ್ಪ ಮತ್ತು ತಿಮ್ಮಣ್ಣ ಎಂಬುವರು ಈಕೆಯ ಸಹೋದರರು. ಓಬವ್ವಳನ್ನು ಚಿತ್ರದುರ್ಗದ ನಾಯಕರ ಬಳಿ ಕಹಳೆಯವನಾಗಿ ಸೇವೆ ಸಲ್ಲಿಸುತ್ತಿದ್ದ ಕಹಳೆ ದೊಡ್ಡಹನುಮಪ್ಪನ ಮಗ ಮದ್ದ ಹನುಮಪ್ಪನಿಗೆ ತಂದುಕೊಂಡು ಶಕ ೧೬೮೩ ವೃಷ ಸಂವತ್ಸರ ವೈಶಾಖ ಶುದ್ದ ಪಂಚಮಿಯಂದು ಇವರೀರ್ವರ ವಿವಾಹ ಕಾರ್ಯವನ್ನು ಚಿತ್ರದುರ್ಗದಲ್ಲಿ ಜರುಗಿಸಲಾಯಿತು".೧೦ ಹೀಗೆ ಚಿತ್ರದುರ್ಗ ಕೋಟೆಯಲ್ಲಿಯ ಕಹಳೆ ಬತೇರಿಯ ಕಾವಲಿನ ಕೆಲಸ ನಿರ್ವಹಿಸುವ ಮದ್ದ ಹನುಮಪ್ಪನ ಹೆಂಡತಿಯಾದಳು.

ಈ ರೀತಿ ಕೋಟೆ ರಕ್ಷಿಸಿದ ಓಬವ್ವನಿಗೆ ರಾಜ ಮರ್ಯಾದೆಗಳೊಂದಿಗೆ ಮೆರವಣಿಗೆ ಮಾಡಿಸಿ ಬಹುಮಾನ ನೀಡಿ ಶೌರ್ಯದ ನೆನಪಿಗಾಗಿ ಶಕವರ್ಷ ೧೯೯೯ರಲ್ಲಿ ಚಿತ್ರದುರ್ಗದ ಕೋಟೆಗೆ ಮತ್ತೊಂದು ಸುತ್ತು ಕೋಟೆಯನ್ನು ಕಟ್ಟಿಸಿ ಅದರ ಒಂದು "ಬಾಗಿಲಿಗೆ ಒನಕೆ ಕಿಂಡಿ ಬಾಗಿಲು" ಎಂದು ಹೆಸರಿಸುತ್ತಾನೆ. ಓಬವ್ವೆಯ ಒಂದು ಪ್ರತಿಮೆಯನ್ನು ಕರಿಯ ಕಲ್ಲಿನಲ್ಲಿ ಕೆತ್ತಿಸಿ ಕಳ್ಳಗಂಡಿಯ ಹತ್ತಿರದಲ್ಲಿ ಪೂರ್ವಾಭಿಮುಖವಾಗಿರುವಂತೆ ಸ್ಥಾಪಿಸಿದನು. ಅಲ್ಲದೆ ಅಗಸನಕಲ್ಲು ಗ್ರಾಮವನ್ನು ಜಹಗೀರಾಗಿ ನೀಡುತಾನ್ತೆ. ಆದರೆ ಹಲವು ಸ್ವಾರ್ಥಿಗಳ ಕುತಂತ್ರದಿಂದ ಅಗಸನಕಲ್ಲು ಗ್ರಾಮ ಜಹಗೀರು ತಪ್ಪಿಹೋಗುತ್ತದೆ. ಇಂದಿಗೂ ದುರ್ಗದ ಸುತ್ತಮುತ್ತ ಓಬವ್ವನ ವಂಶಸ್ಥರು ವಾಸಿಸುತ್ತಾರೆನ್ನುವ ಪ್ರತೀತಿ ಇದೆ. ಈ ವಿಷಯಕ್ಕೆ ಪೂರಕವಾಗಿ ಸುವರ್ಣ ಜಾನಪದ ಸಂಪುಟ - ೨ ಪುಸ್ತಕದಲ್ಲಿ ಪ್ರೊ.ಲಕ್ಷ್ಮಣ ತೆಲಗಾವಿಯವರು ಬರೆದಿರುವ "ಚಿತ್ರದುರ್ಗದ ಒನಕೆ ಓಬವ್ವೆಯ ಘಟನೆ: ಚಾರಿತ್ರಿಕ ವಿಮರ್ಶೆ" ಎಂಬ ಲೇಖನದಲ್ಲಿ ಪ್ರಕಟವಾಗಿರುವ ಓಬವ್ವೆಯ ವಂಶವೃಕ್ಷವನ್ನು ತೆಗೆದುಕೊಳ್ಳಲಾಗಿದೆ.

**ಅನುಬಂಧ-೧**

**ಓಬವ್ವೆಯ ವಂಶವೃಕ್ಷ:- (೧೩೫೮-೧೯೯೨)**

## ಅನುಬಂಧ

**ಚಿತ್ರದುರ್ಗ ಸಂಸ್ಥಾನದ ಬಿರುದಿನ ಹದಿಮೂರು ಗಡಿ ಕಹಳೆಯವರ ಹಾಗೂ ಓಬವ್ವಳ ಮೂಲ ವಂಶವೃಕ್ಷ : ಕ್ರಿ.ಶ. 1358 ರಿಂದ 1992ರ ವರೆಗೆ***

**1. ಒನಕೆ ಓಬವ್ವಳ ನೇರ ವಂಶವೃಕ್ಷ**




ಆನೆಪ್ಪ (ಹುಚ್ಚಪ್ಪ)
ದೊಡ್ಡಹನುಮಪ್ಪ (2)
(ಈತನು ಚಿತ್ರದುರ್ಗದಲ್ಲಿ ಪ್ರತಿಷ್ಠಾಪಿಸಲ್ಪಟ್ಟಿದ್ದ ಮಂದಲವರ ಕಟ್ಟೇಮನೆ ದೇವರುಗಳಾದ ಲಕ್ಷ್ಮೀ ದೇವರು ಮತ್ತು ಕಂಬದ ಲಕ್ಷ್ಮೀನರಸಿಂಹಸ್ವಾಮಿಯನ್ನು ಕಿತ್ತು ತೆಗೆದು ಚಳ್ಳಕೆರೆ ತಾಲ್ಲೂಕು ಬೆಳಗೆರೆ ಗ್ರಾಮದಲ್ಲಿ ಸ್ಥಾಪಿಸಿದನು)
ಬಾಲಪ್ಪ (1)
(ಹೆಂಡತಿ ಸಂಜೀವಮ್ಮ)
ಏಕನಾಥಪ್ಪ (1)
(ಮಕ್ಕಳಿಲ್ಲ)
ಚಿಕ್ಕಹನುಮಪ್ಪ (1)
(ವಂಶಸ್ಥರು ಗುಡಿಬಂಡೆ, ಮಂದಲಹಳ್ಳಿ, ಉದುಗೂರು-ಮಡಕಶಿರಾ ತಾಲ್ಲೂಕುಗಳಲ್ಲಿರುವರು)
ಏಕನಾಥಪ್ಪ (2)
ಸಿದ್ಧೋಜಪ್ಪ
ಆನೆಪ್ಪ (2)
ಕಹಳೆ ಹನುಮಪ್ಪ (1)
ಪರಶುರಾಮಪ್ಪ
(ಮದುವೆಯಿಲ್ಲ)
ಏಕನಾಥಪ್ಪ (3)
ಉಗಾದಪ್ಪ
ಸಿದ್ದಪ್ಪ
ಕಹಳೆ ಗೋಡಪ್ಪ
ಕರೇ ಹನುಮಪ್ಪ
(ಮಕ್ಕಳಿಲ್ಲ)
ಏಕನಾಥಪ್ಪ (4)
ಕಹಳೆ ತಿಮ್ಮಪ್ಪ
ಬಸಪ್ಪ
ಮಾದಪ್ಪ
ಶ್ರೀಕಂಠಪ್ಪ
(4 ಮಕ್ಕಳು)
ಕೈಲಾಸಪ್ಪ
(2 ಮಕ್ಕಳು)
ತಿಪ್ಪೇರುದ್ರಯ್ಯ
(ಒಬ್ಬನೇ ಮಗ)
ರಾಮಯ್ಯ
(3 ಮಕ್ಕಳು)
ಕೃಷ್ಣಯ್ಯ
(ಪ್ರೊ|| ಎ.ಡಿ. ಕೃಷ್ಣಯ್ಯ)
(3 ಮಕ್ಕಳು)
ಬಾಲಚಂದ್ರರಾವ್
(ಒಬ್ಬ ಮಗ)
ನರಸಿಂಹಯ್ಯ
(ಎ.ಡಿ. ನರಸಿಂಹಯ್ಯ)
(ಒಬ್ಬ ಮಗ)
ಶ್ರೀನಿವಾಸಪ್ಪ
(3 ಮಕ್ಕಳು)

## 2. ಓಬವ್ವಳ ಮೂರುಜನ ಭಾವಂದಿರು ಮತ್ತು ಒಬ್ಬ ಮೈದುನನ ವಂಶವೃಕ್ಷ





ಹನುಮಪ್ಪ
(ಮಕ್ಕಳಿಲ್ಲ)
ಮರಕೆಂಚಪ್ಪ
ಯಕನಾಥಪ್ಪ
(ಲಗ್ನವಿಲ್ಲ)
ಹನುಮಪ್ಪ (2)
ಸಣ್ಣ ಕೆಂಚಪ್ಪ
ವಕೀಲ್ ಕೆಂಚಪ್ಪ
ಬಾಲಪ್ಪ
ಕೆಂಚಪ್ಪ
(ಪೋಸ್ಟಲ್)
ದೊಡ್ಡಕೆಂಚಪ್ಪ
ರಾಮಣ್ಣ
ದೊಡ್ಡಹನುಮಪ್ಪ
(1)
ಸಣ್ಣಹನುಮಂತಪ್ಪ
(1)
ದೊಡ್ಡಕೆಂಚಪ್ಪ (1)
ಹನುಮಪ್ಪ (3)
(ಅತ್ತಿಗೆರೆ)
(ವಿವರವಿಲ್ಲ)
ಸಣ್ಣಹನುಮಪ್ಪ (2)
(ಗಂಡು ಸಂತಾನವಿಲ್ಲ)
ಭೀಮಪ್ಪ (1)
(ಮಕ್ಕಳಿಲ್ಲ)
ಬಸಪ್ಪ
ಹನುಮಪ್ಪ (3)
ಕೆಂಚಪ್ಪ
ಭೀಮಪ್ಪ (2)
ರಾಮಪ್ಪ
ರಂಗಪ್ಪ

ನಗಾರಿ ಬಾಲಪ್ಪನ ಮನೆತನದವರು ಮತ್ತು ಅವರ ವಂಶಸ್ಥರು ಭರಮಪುರ, ಕೊಳಹಾಳು, ರಾಮಗಿರಿ, ಚಿರ್ಲೊಣ, ಪಾಂಡುಮಟ್ಟಿ, ಅಬ್ಬಾಯಕನಹಳ್ಳಿ, ಬಸಾಪುರ, ಅಲಟ್ಟಿ, ಬ್ಯಾಡಿಗೆರೆ, ಕಂಚೆನಹಳ್ಳಿ, ಬೊಮ್ಮನಹಳ್ಳಿ, ಹುಲೇಮಳಲಿ, ಬೂದಾಳು (ಶಿವಪುರ), ಕುನುಗಲು, ಸಮುದ್ರದಹಳ್ಳಿ, ಮ್ಯಾದನಹೊಳೆ, ಚನ್ನಾಪುರ, ದೊಡ್ಡಘಟ್ಟ, ನೆಹರೂನಗರ ಮೊದಲಾದೆಡೆಗಳಲ್ಲಿ ವಾಸಿಸುತ್ತಿರುವರು.



## ಮೂರನೆಯ ಗಡ್ಡದ ಹುಚ್ಚಪ್ಪನ ಸಂತತಿ

ಗಂಡು ಸಂತಾನವಿಲ್ಲ-ಇಬ್ಬರು ಹೆಣ್ಣು ಮಕ್ಕಳು

1. ಸಣ್ಣ ಬಾಲವ್ವ → ದುಮ್ಮಿಯಲ್ಲಿರುವ ಪರುಸಪ್ಪನ ಸಂತತಿ
2. ದೊಡ್ಡಬಾಲವ್ವ




* ಎ.ಡಿ. ನರಸಿಂಹಯ್ಯ ಮತ್ತು ಸಿ. ತಿಪ್ಪೇರುದ್ರಯ್ಯ ಅವರುಗಳು ಸಂಗ್ರಹಿಸಿ ಸಿದ್ಧಪಡಿಸಿದ (ದಿ. 2-9-1989) 'ಚಿತ್ರದುರ್ಗ ಸಂಸ್ಥಾನದ ಬಿರುದಿನ ಹದಿಮೂರು ಗಡಿ ಕಹಳೆಯವರ ವಂಶವೃಕ್ಷದ ನಕ್ಷೆ: ಕ್ರಿ.ಶ. 1358 ರಿಂದ 1980' -ಇದನ್ನು ಪರಿಷ್ಕರಿಸಿ ಪ್ರೊ.॥ ಎ.ಡಿ. ಕೃಷ್ಣಯ್ಯ ಅವರು ಪ್ರತ್ಯೇಕವಾಗಿ ಸಿದ್ಧಪಡಿಸಿರುವ ಕ್ರಿ.ಶ. 1358 ರಿಂದ 1992ರ ವರೆಗಿನ ಮೇಲ್ಕಂಡ ವಂಶವೃಕ್ಷವನ್ನು ಇಲ್ಲಿ ಯಥಾವತ್ತಾಗಿ ಕೊಟ್ಟಿದೆ. ಇದನ್ನು ವಿಶ್ವಾಸದಿಂದ ಒದಗಿಸಿ ಪ್ರಕಟಣೆಗೂ ಅವಕಾಶ ನೀಡಿದ ಪ್ರೊ.॥ ಕೃಷ್ಣಯ್ಯ ಅವರಿಗೆ ನಾನು ಋಣಿಯಾಗಿದ್ದೇನೆ.

ಚಿತ್ರದುರ್ಗದ ಇತಿಹಾಸ ಬಿಂಬಿಸುವ ತ.ರಾ.ಸು ಅವರ ಕಾದಂಬರಿಗಳಲ್ಲಿ "ಓಬವ್ವ" ಎನ್ನುವ ಶಬ್ಧ ನಾಗತಿಯರ ಹೆಸರುಗಳ ಹಿಂದೆ ಸೇರಿ ಓಬವ್ವ ನಾಗತಿಯರೆಂತಲು ಬಳಕೆಯಾಗಿದೆ. ಆದರೆ ಒನಕೆ ಓಬವ್ವ ಕೆಳಜಾತಿಗೆ (ಚಲವಾದಿ) ಸೇರಿದ ಕಹಳೆ ಊದುವ ಬತೇರಿಯ ಕಾವಲುಗಾರ ಮದ್ದ ಹನುಮಪ್ಪನ ಹೆಂಡತಿ. ಇಂದಿಗೂ ಕೂಡ ದುರ್ಗದ ಜನಕ್ಕೆ ತಮ್ಮ ಮಕ್ಕಳ ಹೆಸರನ್ನು ಮದಕರಿಯೆಂತಲೂ (ಗಂಡು ಮಕ್ಕಳು) ಹೆಣ್ಣು ಮಕ್ಕಳಿಗೆ ಓಬವ್ವನೆಂತಲೂ ನಾಮಕಾರಣ ಮಾಡುವ ಪರಿಪಾಟವಿದೆ. ಈ ರೀತಿ ಕೆಳ ಜಾತಿಗೆ ಸೇರಿದ ಹೆಣ್ಣು ಓಬ್ಬವ್ವ ದುರ್ಗದ ಸುತ್ತ ಮುತ್ತಲ ಜನತೆಯಲ್ಲಿ ಮನೆಮಾತಾಗಿದ್ದಾಳೆ. ಹೀಗೆ ಎಲ್ಲಾ ಜಾತಿಯ ಎಲ್ಲಾ ವರ್ಗದ ಸ್ತ್ರೀಯರು, ನಾಗತಿಯರು, ದಾಸಿಯರು, ಸೇವಕಿಯರು, ಬೆಲೆವೆಣ್ಣುಗಳು (ದುರ್ಗಾಸ್ತಮಾನದ ಕಡೂರಿಯಂತಹವರು), ಹಾಲು, ಮೊಸರು ಮಾರುವ ಹಳ್ಳಿ ಹೆಣ್ಣು ಮಕ್ಕಳು, ಪಶುಪಾಲಕ ವೃತ್ತಿಯ ಗೋವಳಿಗರು ಹೀಗೆ ನಾನಾ ರೀತಿಯ ಜನತೆ ತ.ರಾ.ಸು ಅವರ ಐತಿಹಾಸಿಕ ಕಾದಂಬರಿಗಳಲ್ಲಿ ಬಂದು ಹೋಗುತ್ತಾರೆ.

'ಸಿಡಿಲಮೊಗ್ಗು' ತ.ರಾ.ಸು ಅವರ ಮತ್ತೊಂದು ಐತಿಹಾಸಿಕ ಕಾದಂಬರಿ. ಶಾಂತಲೆಯ ಪರಿಚಯದೊಂದಿಗೆ ಕಾದಂಬರಿ ಮುಕ್ತಾಯವಾಗುತ್ತದೆ. ಬಳ್ಳಿಗಾವಿಯ ಶಿವಪುರಿಯಲ್ಲಿದ್ದ ಮಾರಸಿಂಗಮಯ್ಯನ ಮಗಳ ದಿಟ್ಟತನ ಓದುಗರಿಗೆ ಮೆಚ್ಚುಗೆಯಾಗುತ್ತದೆ. ಅವಳ ಸೌಂದರ್ಯವೂ ಅಸಾಮಾನ್ಯವಾದುದೆ. ಕಾದಂಬರಿಕಾರರು ಕಣ್ಣಿಗೆ ಕಟ್ಟುವಂತೆ ವರ್ಣಿಸುವುದು ಹೀಗಿದೆ. "ಕುಶಲಶಿಲ್ಪಿ ರೂಪಲಕ್ಷ್ಮಿಯನ್ನು ಕುರಿತು ತಪಸ್ಸು ಮಾಡಿ, ಆ ಆರಾಧನೆಯಿಂದ ಪುಟಗೊಂಡ ತನ್ನ ಪ್ರತಿಭೆಯೆಲ್ಲವನ್ನೂ ಧಾರೆಯೆರೆದು ಸೃಷ್ಟಿಸಿದಷ್ಟು ಕಮನೀಯವಾಗಿತ್ತು. ಶಾಂತಲೆಯ ಮುಖ ಒಳಗೆ ಹರಿವ ರಕ್ತದ ಕಾಂತಿಯಿಂದ ಅರುಣವರ್ಣವಾಗಿ, ತೆರೆದ ಕನ್ನಡಿಯಂತೆ ಥಳಥಳಿಸುವ ಕಪೋಲಗಳು, ಹವಳದ ಬಣ್ಣದ ತುಂಬು ತುಟಿಗಳು, ಮಿಂಚಿನ ಮರಿಗಳೆರಡನ್ನು ನೀರಿನಲ್ಲಿ ಸೆಳೆಯುವಂತೆ ಥಳಥಳಿಸುವ ಕಣ್ಣುಗಳು, ಆ ಕಣ್ಣು ತುಟಿಗಳ ಮಧ್ಯೆ ಸೌಂದರ್ಯ ಸೇತುವಿನಂತೆ ರಂಜಿಸುವ ಎಳಸಾದ ನಾಸಿಕ...... ಏಚಲಾದೇವಿಯ ಕಣ್ಣಲ್ಲಿ ಬಿಂಬಿಸಿ ಹೃದಯವನ್ನು ಗೆದ್ದು ಸೆರೆಹಿಡಿದುವು"೧೧ ಹೀಗೆ ಎಂದು ಅವಳ ಸೌಂದರ್ಯ ಕುರಿತು ವರ್ಣಿಸುತ್ತಾರೆ.ರಾಜನ ಉನ್ನತಿಗೆ ಎಲ್ಲಾ ರೀತಿಯಿಂದಲೂ ಏಚಲಾದೇವಿಯು ರಾಜಕಾರಣದಲ್ಲಿ ಭಾಗಿಯಾಗಲೇಬೇಕಾಗುತ್ತದೆ. ತನ್ನ ಮಗ ಮತ್ತು ಪತಿಯ ವಿಚಾರದಲ್ಲಿ ಏಚಲಾದೇವಿಯು ತುಂಬಾ ಜಾಗರೂಕತೆಯಿಂದ ನಡೆದುಕೊಳ್ಳಬೇಕಾಗುತ್ತದೆ.

'ನೃಪತುಂಗ' ಕಾದಂಬರಿಯಲ್ಲಿ ರಾಣಿ ಲಕ್ಷ್ಮೀದೇವಿಯು ಚಕ್ರವರ್ತಿ ನೃಪತುಂಗನ ಪಟ್ಟಮಹಿಷಿ, ಆಕೆಯ ನಡತೆ ಚಕ್ರವರ್ತಿಯಷ್ಟೇ ಗಂಭೀರವಾದುದ್ದು. ಮೊದಲನೆಯ ಮಗಳು ಶಂಬಾದೇವಿಯು ಪಲ್ಲವ ರಾಜಕುಮಾರ ನಂದಿವರ್ಮನನ್ನು ವಿವಾಹವಾಗಿ ನೆಮ್ಮದಿಯ ಬಾಳನ್ನು ಕಂಡುಕೊಂಡಿದ್ದಳು. ಕೊನೆಯ ಮಗಳು ಚಂದಲೆ ಗಂಗಬೂತುಗನನ್ನು ವಿವಾಹವಾಗಿ ರಾಜಕೀಯ

ಶಾಂತಿಗೆ ಕಾರಣಳಾಗುತ್ತಾಳೆ. ತ.ರಾ.ಸು. ಅವರು ತಮ್ಮ ಐತಿಹಾಸಿಕ ಕಾದಂಬರಿಗಳಲ್ಲಿ ಚಿತ್ರದುರ್ಗದ ನಾಯಕರ ಆಡಳಿತವನ್ನು ಚಿತ್ರಿಸಿರುವುದರ ಜೊತೆಗೆ 'ನೃಪತುಂಗ', 'ಸಿಡಿಲಮೊಗ್ಗು' ಮುಂತಾದ ಕಾದಂಬರಿಗಳಲ್ಲಿ ಹೊಯ್ಸಳರ ಆಳ್ವಿಕೆಯನ್ನು 'ಶಿಲ್ಪಶ್ರೀ' ಕಾದಂಬರಿಯಲ್ಲಿ ಅಂದಿನ ವಾಸ್ತುಶಿಲ್ಪವನ್ನು ಚಿತ್ರಿಸಿದ್ದಾರೆ. ಆ ವೇಳೆಗಾಗಲೆ ಗಳಗನಾಥರು ವಿಜಯನಗರ ಸಾಮ್ರಾಜ್ಯ ಕುರಿತಂತೆ, ಮಾಸ್ತಿ ಮತ್ತು ನಿರಂಜನರು ಕೊಡಗಿನ ಆಡಳಿತವನ್ನು ಕುರಿತಂತೆ ಐತಿಹಾಸಿಕ ಕಾದಂಬರಿಗಳನ್ನು ರಚಿಸಿದ್ದರು. ಇವೆರಡು ವಿವಾಹದ ನಡುವೆ ಚಕ್ರವರ್ತಿ ಮಾನಸಿಕ ಯಾತನೆಗೆ ಗುರಿಯಾಗಬೇಕಾಗುತ್ತದೆ. ವಿವಾಹಗಳೂ ರಾಜಕೀಯ ವಿಷಯಗಳಾಗಿದ್ದ ಅಂದಿನ ದಿನಮಾನದಲ್ಲಿ ರಾಜಕುಮಾರಿಯರ ಸ್ವಂತ ಇಚ್ಚೆಗಳಿಗೆ ಯಾವ ಬೆಲೆ: ನಗುನಗುತ್ತ ಒಪ್ಪಿ ತಂದೆ ತೋರಿಸಿದವರ ಕೈ ಹಿಡಿಯಬೇಕು. ಈ ರೀತಿ ತ.ರಾ.ಸು. ಅವರ ಕಾದಂಬರಿಗಳಲ್ಲಿ ಸ್ತ್ರೀ ಸ್ವಾತಂತ್ರ್ಯವಿಲ್ಲದೆ ಪುರುಷನ ಅಧೀನದಲ್ಲಿಯೂ ಇದ್ದಾಳೆ. ಮತ್ತೆ ಕೆಲವೆಡೆ 'ಕಂಬನಿಯಕುಯಿಲು', 'ರಕ್ತರಾತ್ರಿ', 'ರಾಜ್ಯದಾಹ', 'ತಿರುಗುಬಾಣ' ಕಾದಂಬರಿಗಳಲ್ಲಿ ಆಡಳಿತದಲ್ಲಿ ಪುರುಷನಷ್ಟೆ ಸರಿಸಮಾನಳು. ನಾಯಕರ ಮರಣದ ಅನಂತರ ಉತ್ತರಾಧಿಕಾರಿಯಾರಾಗಬೇಕೆಂಬ ವಿಚಾರದಲ್ಲಿ ದಿಟ್ಟವಾದ ನಿಲುವನ್ನು ತಳೆಯುತ್ತಾಳೆ. ದಳವಾಯಿಗಳ ವಿರುದ್ದ ಸೆಟೆದು ನಿಲ್ಲುವ ಓಬವ್ವ ನಾಗತಿ, ದಳವಾಯಿಗಳ ವಿರುದ್ದ ಹಳ್ಳಿ-ಹಳ್ಳಿಗೆ ಹೋಗಿ ಅಲ್ಲಿನ ಗೌಡರನ್ನ, ಮುಖಂಡರನ್ನು ಒಗ್ಗೂಡಿಸಿ ದಳವಾಯಿಗಳ ವಿರುದ್ದ ಸಂಚನ್ನು ಹೂಡಿ ಯುದ್ದಕ್ಕೆ ಸಿದ್ಧತೆ ಮಾಡುವ ಗಿರಿಜೆ, ಅಲ್ಲದೆ ಸಹಗಮನ ಮತ್ತು ದತ್ತು ಸ್ವೀಕಾರದ ವಿಷಯಗಳು ಎದುರಾದಾಗ ನಾಗತಿಯವರು ನಡೆದು ಕೊಳ್ಳುವ ರೀತಿ ಕಾದಂಬರಿಯಲ್ಲಿ ಮುಖ್ಯವೆನಿಸುತ್ತವೆ.

ಈ ರೀತಿ ತ.ರಾ.ಸು ತಮ್ಮ ಐತಿಹಾಸಿಕ ಕಾದಂಬರಿಗಳಲ್ಲಿ ಸ್ತ್ರೀ ಸಂವೇದನೆಯನ್ನು ಪ್ರಧಾನವಾಗಿ ಹಿಡಿಯುವಲ್ಲಿ ವಿಶಿಷ್ಟವಾಗಿ ಕಾಣುತ್ತಾರೆ. ಆ ಸಮಕಾಲೀನ ಸನ್ನಿವೇಶಗಳನ್ನು ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ. ಈ ರೀತಿ ಕ್ಷಾತ್ರ ಪ್ರಧಾನ ಸಂದರ್ಭದಲ್ಲಿ ಸ್ತ್ರೀಯರ ಸ್ಥಾನಮಾನಗಳು ಕೂಡ ಮುಖ್ಯವಾಗುತ್ತದೆ. ಡಾ.ಎಂ. ರಾಮಕೃಷ್ಣ ಅವರು ಅಭಿಪ್ರಾಯ ಪಡುವಂತೆ "ಭಾರತದ ಮಧ್ಯಯುಗದಲ್ಲಿ ಸ್ತ್ರೀಯರ ಸ್ಥಾನಮಾನಗಳ ಉನ್ನತೀಕರಣ ನಡೆಯಲಿಲ್ಲ, ಸಮಷ್ಟಿರೂಪದಲ್ಲಿ ಪರಿಭಾವಿಸಿಕೊಂಡಾಗ ಆಧುನಿಕ ಪ್ರಜ್ಞಾವಂತನಿಗೆ ವಿಶೇಷವಾದುದೇನೂ ಕಂಡುಬರುವುದಿಲ್ಲ. ಆದರೆ ಅಪ್ರಸಿದ್ದ ಗೃಹಿಣಿಯರು, ಯೋಧ ಪತ್ನಿಯರು, ರಾಣಿಯರು, ವೇಶ್ಯೆಯರು ಮತ್ತು ದಾಸಿಯರು ಐತಿಹಾಸಿಕ ಕಾದಂಬರಿಗಳಲ್ಲಿ ಮಿಂಚಿ ಮರೆಯಾಗುತ್ತಾರೆ. ನಿಂತು ತೆರಳುತ್ತಾರೆ, ಕುಳಿತು ಮಾತನಾಡುತ್ತಾರೆ, ಹಾಡಿ ನರ್ತಿಸುತ್ತಾರೆ, ರಾಜ್ಯಸೂತ್ರ ಹಿಡಿಯುತ್ತಾರೆ. ಹಿಂದುಮುಂದೆ ನೋಡದೆ ಪ್ರಾಣಪಕ್ಷಿಗಳನ್ನು ಪಂಜರದಿಂದ ಹೊರಗೆ ಹಾರಿಬಿಡುತ್ತಾರೆ. ಅನೇಕ ವೇಳೆ ಇಂತಹ ಸ್ತ್ರೀಯರು. ಕವಿಕಲ್ಪಿತ ಸುಧಾರಿತ ಸೃಷ್ಟಿಯಾಗಿರುವುದು ಆಶ್ಚರ್ಯವಲ್ಲ" ಎನ್ನುವ ಈ ಹೇಳಿಕೆಯು ಕಾದಂಬರಿಕಾರನೊಬ್ಬ ಸ್ತ್ರೀಯನ್ನು ಹಾಗೂ ಅವಳ ಬದುಕಿನ ವಿವಿಧ ಸ್ತರಗಳನ್ನು ಹೇಗೆ ಚಿತ್ರಸಬಲ್ಲನೆಂಬುದಕ್ಕೆ ಸಾಕ್ಷಿಯಾಗುತ್ತದೆ. ತ.ರಾ.ಸು ಅವರ

ಐತಿಹಾಸಿಕ ಕಾದಂಬರಿಗಳಲ್ಲಿ ಮೇಲಿನಂತೆ ಸ್ತ್ರೀ ಸಂವೇದನೆ ಗುರುತಿಸಿದ್ದೇನೆ. ನನ್ನ ಪ್ರಬಂಧವನ್ನು ಇಲ್ಲಿಗೆ ಸೀಮಿತಗೊಳಿಸಿರುತ್ತೇನೆ.

**ಅಡಿಟಿಪ್ಪಣಿಗಳು :**

| | | |
|---|---|---|
| ೧. ಶ್ರೀ ಶೈಲ ಆರಾಧ್ಯ ಹೆಚ್.(ಸಂ). | : | ಗಿರಿಮಲ್ಲಿಗೆ<br>ಪುಟ–೨೨೫ |
| ೨. ಸುಬ್ಬರಾವ್.ತ.ರಾ. | : | ಕಂಬನಿಯ ಕುಯಿಲು<br>ಪುಟ–೫೮ |
| ೩. ಶ್ರೀಶೈಲ ಆರಾಧ್ಯ. ಹೆಚ್.(ಸಂ) | : | ಗಿರಿಮಲ್ಲಿಗೆ<br>ಪುಟ–೨೩೯ |
| ೪. ಸುಬ್ಬರಾವ್.ತ.ರಾ. | : | ರಕ್ತರಾತ್ರಿ<br>ಪುಟ–೧೧೫ |
| ೫. ಸುಬ್ಬರಾವ್.ತ.ರಾ. | : | ರಕ್ತರಾತ್ರಿ<br>ಪುಟ–೧೪೮ |
| ೬. ಶ್ರೀಶೈಲ ಆರಾಧ್ಯ.ಹೆಚ್.(ಸಂ) | : | ಗಿರಿಮಲ್ಲಿಗೆ<br>ಪುಟ–೧೬೮ |
| ೭. ಶ್ರೀಶೈಲ ಆರಾಧ್ಯ.ಹೆಚ್.(ಸಂ) | : | ಗಿರಿಮಲ್ಲಿಗೆ<br>ಪುಟ–೧೬೯ |
| ೮. ಸುಬ್ಬರಾವ್.ತ.ರಾ. | : | ದುರ್ಗಾಸ್ತಮಾನ<br>ಪುಟ–೦೮ |
| ೯. ಶ್ರೀಶೈಲ ಆರಾಧ್ಯ.ಹೆಚ್.(ಸಂ) | : | ಗಿರಿಮಲ್ಲಿಗೆ<br>ಪುಟ–೨೮೫ |
| ೧೦. ಲಕ್ಕಪ್ಪಗೌಡ.ಎಚ್.ಜೆ.(ಪ್ರ.ಸಂ) | : | ಸುವರ್ಣ ಜಾನಪದ ಸಂಪುಟ ೨<br>ಪುಟ–೩೪೬ |
| ೧೧. ಶ್ರೀಶೈಲ ಆರಾಧ್ಯ.ಹೆಚ್.(ಸಂ) | : | ಗಿರಿಮಲ್ಲಿಗೆ<br>ಪುಟ–೨೩೨ |

## ಅಧ್ಯಾಯ-೬

## ತ.ರಾ.ಸು. ಅವರ ಕಾದಂಬರಿಗಳು ಸಮೂಹ ಮಾಧ್ಯಮದ ಮೂಲಕ ಬೀರಿದ ಪ್ರಭಾವ :

ಸಮಾಜದ ಅಭಿವೃದ್ಧಿಯಲ್ಲಿ ಸಮೂಹ ಮಾಧ್ಯಮಗಳ ಪಾತ್ರ ಮಹತ್ತರವಾದುದು. ಅನೇಕ ಜನರನ್ನು ಏಕಕಾಲಕ್ಕೆ ತಲುಪುವಂತಹ ಸಾಧನಗಳೆಂದರೆ ರೇಡಿಯೋ, ದೂರದರ್ಶನ, ಪತ್ರಿಕೆಗಳು ಮತ್ತು ಚಲನಚಿತ್ರಗಳು. ಆದ ಕಾರಣದಿಂದಲೇ ಇವುಗಳನ್ನು ಸಮೂಹ ಮಾಧ್ಯಮಗಳೆಂದು ಕರೆಯಲಾಗಿದೆ. ಸಮೂಹ ಮಾಧ್ಯಮಗಳು ಬರೀ ಸುದ್ದಿಯನ್ನು ಬಿತ್ತರಿಸುವಂತಹವುಗಳಲ್ಲ, ಬದಲಾಗಿ ಜನತೆಯ ಅಭಿಪ್ರಾಯ, ಜೀವನಶೈಲಿ, ಜೀವನವನ್ನು ಕುರಿತ ದೃಷ್ಟಿಕೋನಗಳನ್ನ ಬದಲಾಯಿಸುವಂಥ ಕೆಲಸವನ್ನೂ ಈ ಮಾಧ್ಯಮಗಳು ಮಾಡುತ್ತವೆ. ಸಮಾಜದಲ್ಲಿ ಬದಲಾವಣೆಯನ್ನುಂಟುಮಾಡುವ ನಿಟ್ಟಿನಲ್ಲಿ ಸಮೂಹ ಮಾಧ್ಯಮಗಳು ತುಂಬಾ ಮುಖ್ಯವಾದ ಪಾತ್ರವಹಿಸುತ್ತವೆ. ಗ್ರಾಮೀಣ ಪ್ರದೇಶದಲ್ಲಿ ವಾಸಮಾಡುವ ಹೆಚ್ಚಿನ ಜನತೆ ಅವಿದ್ಯಾವಂತರಾಗಿರುವುದರಿಂದ ಸಮೂಹ ಮಾಧ್ಯಮಗಳ ಜವಾಬ್ದಾರಿ ಹೆಚ್ಚಿನದು. ನಾನಾ ತರಹದ ಜವಾಬ್ದಾರಿಗಳನ್ನು ಸಮೂಹ ಮಾಧ್ಯಮಗಳು ನಿರ್ವಹಿಸಬೇಕಾಗಿದೆ. "ಯಾವುದೇ ವಿಷಯವನ್ನು ಕುರಿತಂತೆ ವಿಭಿನ್ನ ದೃಷ್ಟಿಕೋನಗಳಿಗೆ ಜನರನ್ನು ತಲುಪುವಂಥ ಅವಕಾಶವನ್ನು ನೀಡುವುದು. ಏಕಮುಖವಾದ ಅಥವಾ ಏಕಪಕ್ಷೀಯವಾದ ನಿಲುವುಗಳನ್ನು ವಾಸ್ತವದಲ್ಲಿ ಮಾಧ್ಯಮಗಳು ತಳೆಯುವಹಾಗಿಲ್ಲ"[೧]. ಈ ರೀತಿ ಸಮೂಹ ಮಾಧ್ಯಮಗಳ ಜವಾಬ್ದಾರಿ ಒಂದೇ ರೀತಿಯ ದೃಷ್ಟಿಕೋನವನ್ನು ಹೊಂದಿರಬಾರದು ಎಂಬುದು ಈ ಮಾತಿನಿಂದ ವ್ಯಕ್ತವಾಗುತ್ತದೆ. ಸಮೂಹ ಮಾಧ್ಯಮದ ಕಾಳಜಿಗಳು ಮತ್ತು ಜವಬ್ದಾರಿಗಳು ವಿಭಿನ್ನವಾಗಿರಬೇಕೆಂಬುದು. ಸಮೂಹ ಮಾಧ್ಯಮಗಳು ಏಕಕಾಲಕ್ಕೆ ಸಾಮಾಜಿಕ ಕಾಳಜಿ ಮತ್ತು ಜವಾಬ್ದಾರಿಗಳನ್ನು ಬೆಳೆಸಿಕೊಳ್ಳಬೇಕು.

ಸಮೂಹ ಮಾಧ್ಯಮಗಳು ಸಾಮಾಜಿಕ ಬದಲಾವಣೆಯ ಸಾಧನಗಳೆಂದು ಗುರುತಿಸಲ್ಪಟ್ಟಿದ್ದರೂ, ಮಹಿಳೆಯರ ವಿಚಾರದಲ್ಲಿ ನಕರಾತ್ಮಕವಾದ ದೃಷ್ಟಿಕೋನವನ್ನೆ ತಳೆದಿವೆ. ಇತ್ತೀಚಿನ ದಿನಗಳಲ್ಲಿ ಸಮೂಹ ಮಾಧ್ಯಮಗಳು ನೀಡುತ್ತಿರುವ ಕಾರ್ಯಕ್ರಮಗಳ ಗುಣಮಟ್ಟ ಕ್ಷೀಣಿಸುತ್ತಿದ್ದು ಹಣಗಳಿಕೆಯೇ ಮುಖ್ಯವಾದ ಉದ್ದೇಶವಾಗಿದೆ. ಅಭಿವ್ಯಕ್ತಿ ಸ್ವಾತಂತ್ರ್ಯದ ಹೆಸರಲ್ಲಿ ಕೀಳು ಅಭಿರುಚಿಯುಳ್ಳ ಸುದ್ದಿಯನ್ನ ಬಿತ್ತರಿಸುವುದು ಸಮೂಹ ಮಾಧ್ಯಮ ಕ್ಷೇತ್ರದಲ್ಲಿ ತೀರಾ ಸಾಮಾನ್ಯವಾಗಿಬಿಟ್ಟಿದೆ.

## ೬.೧ ಮಹಿಳೆ ಮತ್ತು ದೃಶ್ಯ ಮಾಧ್ಯಮ :

ಚಲನಚಿತ್ರ ಮತ್ತು ದೂರದರ್ಶನಗಳಂಥ ದೃಶ್ಯ ಮಾಧ್ಯಮಗಳು ಜನತೆಯ ಮೇಲೆ ನೇರವಾಗಿ ಪ್ರಭಾವ ಬೀರುತ್ತವೆ. "ಈ ಮಾಧ್ಯಮಗಳು ಕೇವಲ ಮನರಂಜನೆಯ ಸಾಧನಗಳೇ ಆಗಿರದೆ, ಮೌಲ್ಯಗಳನ್ನು ಬೆಳೆಸುವ ಹಾಗೂ ಬದಲಾಯಿಸುವ ನಿಯೋಗಿಗಳೂ ಆಗಿವೆ"[೨]. ಅಂದರೆ ಸಮೂಹ ಮಾಧ್ಯಮಗಳು ಸಾಮಾಜಿಕ ಚಿತ್ರಣವನ್ನೂ ಬದಲಾಯಿಸುವಲ್ಲಿ ಸಹಕಾರಿಯಾಗುತ್ತವೆಂಬುದು. ಅಲ್ಲದೆ ಜನತೆಯಲ್ಲಿ ವೈಚಾರಿಕ ಪ್ರಜ್ಞೆಯನ್ನೂ ಮೂಡಿಸುತ್ತವೆ. ದೂರದರ್ಶನ ಮತ್ತು ಚಲನಚಿತ್ರಗಳಲ್ಲಿ ಹೆಣ್ಣು ಅಳುವ, ಬೇಡುವಂತಹ ಕಷ್ಟ ಕೋಟಲೆಗಳು ಇತ್ತೀಚಿಗೆ ಹೆಚ್ಚಾಗಿ ಚಿತ್ರಿತವಾಗುತ್ತಿವೆ. "ಮಹಿಳೆಯು ತ್ಯಾಗ, ಬಲಿದಾನ, ಬದುಕಿನಲ್ಲಿ ಅವರಿಗಾಗುವ ನಿರಾಶೆಗಳು, ಜೀವನದಲ್ಲಿ ಅವರು ಎದುರಿಸುವ ವೈಫಲ್ಯಗಳು, ಅವರಿಗಾಗುವ ಅನ್ಯಾಯ–ಅವಮಾನಗಳು ಇಂಥ ವಿಚಾರಗಳನ್ನೇ ಕೇಂದ್ರವಾಗಿರಿಸಿಕೊಂಡ ಅನೇಕ ಕಾರ್ಯಕ್ರಮಗಳು ದೂರದರ್ಶನ ಮತ್ತು ಚಲನಚಿತ್ರಗಳಲ್ಲಿ ಚಿತ್ರಿಸಲ್ಪಡುತ್ತವೆ"ನ್ನುವ ಡಾ.ಆರ್. ಇಂದಿರಾ ಅವರ ಮಾತು ದೃಶ್ಯ ಮಾಧ್ಯಮಗಳಲ್ಲಿ ಮಹಿಳೆ ಹೇಗೆ ಚಿತ್ರಿಸಲ್ಪಡುತ್ತಾಳೆಂಬುದನ್ನು ತಿಳಿಸುತ್ತದೆ. ಆದರೂ ಮಹಿಳೆಯರನ್ನು ಸಾಂಪ್ರಾದಾಯದಿಂದ ಹೊರಬರುವಂತೆ ಮಾಡುತ್ತವೆ. ಸಮಾಜ ಮತ್ತು ಜನತೆಯ ಮನಸ್ಸಿನಲ್ಲಿ ಬೇರೂರಿರುವ ಪೂರ್ವಾಗ್ರಹಗಳನ್ನು ದೃಶ್ಯ ಮಾಧ್ಯಮ ಮತ್ತಷ್ಟು ಪ್ರಬಲಗೊಳಿಸುತ್ತವೆಂಬುದರಲ್ಲಿ ಯಾವುದೇ ಅತಿಶಯೋಕ್ತಿಯಿಲ್ಲ. ಸಾಹಿತ್ಯ ಕೃತಿಯೊಂದರ ಘಟನೆಗಳು ಓದುಗರ ಮನಸ್ಸಿನಲ್ಲಿ ಪರಿಣಾಮವನ್ನುಂಟುಮಾಡಿ ದೀರ್ಘಕಾಲ ಉಳಿಯುವುದಕ್ಕಿಂತ ಹೆಚ್ಚಾಗಿ ದೃಶ್ಯಮಾಧ್ಯಮಗಳ ಮೂಲಕ ಚಿತ್ರಿಸಲ್ಪಟ್ಟ ಘಟನೆ ಮತ್ತು ಪಾತ್ರಗಳು ದೀರ್ಘಕಾಲ ಪ್ರೇಕ್ಷಕರ ಮನಸ್ಸಿನಲ್ಲಿ ಉಳಿಯುತ್ತವೆ. ಹಾಗಾಗಿಯೇ ತ.ರಾ.ಸು. ಅವರ ಕಾದಂಬರಿಗಳು ದೃಶ್ಯ ಮಾಧ್ಯಮ ಸಿನೆಮಾದ ಮೂಲಕವಾಗಿಯೂ ಜನಮನವನ್ನು ಗೆದ್ದಿವೆಯೆಂದರೆ ತಪ್ಪಾಗಲಾರದು. ಸಕಾರಾತ್ಮಕವಾದ ಪಾತ್ರಗಳು ದೃಶ್ಯಮಾಧ್ಯಮದಲ್ಲಿ ಮೂಡಿಬಂದಾಗ ಅವು ಪ್ರೇಕ್ಷಕರ ಮನಸ್ಸಿನಲ್ಲಿ ಉಳಿಯಲು ಸಾಧ್ಯ. ಸಮಾಜದ ಮೌಲ್ಯಗಳನ್ನು ಎತ್ತಿಹಿಡಿಯುವಂತಹ ಪಾತ್ರಗಳನ್ನು ಪ್ರಯೋಗಿಸಿದಾಗ ವೀಕ್ಷಕರ ಮನಸ್ಸಿನಲ್ಲಿ ಸಕಾರಾತ್ಮಕ ಚಿತ್ರಣ ಮೂಡುತ್ತದೆ.

ಸಮೂಹ ಮಾಧ್ಯಮದಲ್ಲಿ ಮಹಿಳೆಯರ ಚಿತ್ರಣ ತುಂಬಾ ಶೋಚನೀಯವಾಗಿದೆ. ಈ ನಿಟ್ಟಿನಲ್ಲಿ ಅನೇಕ ಸಂಶೋಧನೆಗಳೂ ನಡೆದಿವೆ. ಉದಾ: ೧೯೭೭ ರಲ್ಲಿ ಇಳಾಪಾಠಕ್ ರವರು ಪ್ರಕಟಿಸಿರುವ ಹದಿನೆಂಟು ಚಲನಚಿತ್ರಗಳ ವಿಶ್ಲೇಷಣಾತ್ಮಕ ಅಧ್ಯಯನದ ವರದಿ ಮುಖ್ಯವಾದುದೆಂದು ಡಾ.ಕೆ.ಸರೋಜ ಅವರು ಮಹಿಳೆ ಮತ್ತು ಸಮೂಹ ಮಾಧ್ಯಮಗಳು ಎನ್ನುವ ಕೃತಿಯಲ್ಲಿ ದಾಖಲಿಸಿದ್ದಾರೆ. ಈ ವರದಿಯ ಮೊದಲನೆಯ ಅಧ್ಯಾಯದಲ್ಲಿ ಗಂಡುಮಕ್ಕಳಿಗೆ ಪ್ರಾಮುಖ್ಯತೆ ಕೊಟ್ಟು ಹೆಣ್ಣುಮಕ್ಕಳನ್ನು ಅಪಮೌಲ್ಯಗೊಳಿಸಿರುವುದರ ಬಗ್ಗೆ ದಾಖಲಿಸಿದ್ದಾರೆ. ಅಲ್ಲದೆ ಮಹಿಳೆಯರನ್ನು ತ್ಯಾಗಮಯಿಗಳಾಗಿ ಎಲ್ಲವನ್ನು ಸಹಿಸಿಕೊಳ್ಳುವ

ಮನೋಭಾವದವರನ್ನಾಗಿ ಚಿತ್ರಿಸಿದ್ದಾರೆಂದು ದಾಖಲು ಮಾಡಲಾಗಿದೆ. ಮನರಂಜನೆಗಾಗಿಯೇ ರೂಪುಗೊಳ್ಳುವ ಇಂದಿನ ಕಮರ್ಷಿಯಲ್ ಚಲನಚಿತ್ರಗಳ ಉದ್ದೇಶ ಹಣಸಂಪಾದಿಸುವುದಾಗಿದೆ. ಇಂತಹ ಚಲನಚಿತ್ರಗಳನ್ನು ಅಧ್ಯಯನ (ಹನ್ನೆರೆಡು ಹಿಂದಿ ಮತ್ತು ಆರು ಗುಜರಾತಿ) ಮಾಡಿದ ಸಂಶೋಧಕ ಪಾಠಕ್ ಅವರು ಕೆಲವು ಅಂಶಗಳನ್ನು ಪಟ್ಟಿಮಾಡಿದ್ದಾರೆ. ಅವೆಂದರೆ

೧) "ಎಲ್ಲ ಚಿತ್ರಗಳಲ್ಲಿ ಎಳೆಹರೆಯದ, ಸುಂದರವಾದ ಮತ್ತು ಲೈಂಗಿಕವಾಗಿ ಹೆಚ್ಚು ಆಕರ್ಷಣೀಯರಾದ ಸ್ತ್ರೀಯರಿಗೆ ಹೆಚ್ಚು ಪ್ರಾಮುಖ್ಯತೆ ನೀಡಲಾಗಿತ್ತು.

೨) ಮಹಿಳೆಯರನ್ನು ಮೂಲಭೂತವಾಗಿ, ಪುರುಷರೊಂದಿಗೆ ಅವರಿಗಿರುವ ಸಂಬಂಧದ ಮೂಲಕವೇ ಪ್ರಧಾನವಾಗಿ ಚಿತ್ರಿಸಲಾಗಿತ್ತು. (ಉದಾ: ತಾಯಿ, ಮಡದಿ, ಮಗಳು,ಸೊಸೆ, ಗೆಳತಿ, ಇತ್ಯಾದಿ)

೩) ಈ ಚಿತ್ರಗಳಲ್ಲದೆ ನಲವತ್ತಾರು ಸ್ತ್ರೀ ಪಾತ್ರಗಳಲ್ಲಿ ಕೇವಲ ಹನ್ನೆರಡು ಸ್ತ್ರೀ ಪಾತ್ರಗಳನ್ನು ಮಾತ್ರ ವೇತನ ಪಡೆಯುವ ಉದ್ಯೋಗಿಗಳನ್ನಾಗಿ ಹಾಗೂ ಒಂಬತ್ತು ಸ್ತ್ರೀಪಾತ್ರಗಳನ್ನು ಪರಂಪರಾಗತ ವೃತ್ತಿಗಳಲ್ಲಿ ನಿರತರಾಗಿರುವಂತೆ ಚಿತ್ರಿಸಲಾಗಿತ್ತು.

೪) ಮಿತಿಮೀರಿದ ಭಾವುಕರಂತೆ, ಆಶ್ರಿತ ಅಬಲೆಯರಂತೆ, ಅಂಜುಬುರುಕಿಯರಂತೆ, ಕುರುಡು ನಂಬಿಕೆಗಳುಳ್ಳವರಂತೆ ಹಾಗೂ ಯಾವುದೇ ವಿವೇಚನೆಯಿಂದ ಕೆಲಸ ಮಾಡಲು ಅಥವಾ ಚರ್ಚೆ ಮಾಡಲು ಅಶಕ್ತರಾದ ವ್ಯಕ್ತಿಗಳಂತೆ ಮಹಿಳೆಯರನ್ನು ಚಿತ್ರಿಸಲಾಗಿತ್ತು.

೫) ಮಹಿಳೆಯರಿಗೆ ಮದುವೆಯೇ ಅಂತಿಮ ಗುರಿಯೆನ್ನುವಂತೆ ಚಿತ್ರಿಸಲಾಗಿತ್ತಲ್ಲದೆ, ಸಮಾಜದಲ್ಲಿರುವ ಸ್ತ್ರೀಯರಿಗೊಂದು ಪುರುಷರಿಗೊಂದು ಇರುವ ಇಬ್ಬಗೆಯ ನೈತಿಕತೆಯನ್ನು ಪ್ರತಿಪಾದಿಸುವಂತೆ ಚಿತ್ರಿಸಲಾಗಿತ್ತು. ಅಲ್ಲದೆ ದೈಹಿಕ ಹಿಂಸೆ ಮತ್ತು ಕ್ರಿಯೆಗಳನ್ನು ಒಪ್ಪಿ ಅಪ್ಪಿಕೊಂಡ ರೀತಿಯಲ್ಲಿ ಮಹಿಳೆಯರನ್ನು ಚಿತ್ರಿಸಲಾಗಿತ್ತು"[೩]. ಹೀಗೆ ಮಹಿಳೆಯರನ್ನು ಚಲನಚಿತ್ರಗಳಲ್ಲಿ ತುಂಬಾ ಕೀಳಾಗಿ ಚಿತ್ರಿಸಲಾಗಿದೆಯೆಂದು ಎಪ್ಪತ್ತರ ದಶಕದಲ್ಲಿ ಪಾಠಕ್ ಅವರು ಹೇಳಿರುವ ಮಾತನ್ನು ಗಮನಿಸಿದರೆ ಅದು ಇಂದಿಗೂ ಸತ್ಯವೆನಿಸುತ್ತದೆ. ಏಕೆಂದರೆ ಚಲನಚಿತ್ರಗಳಲ್ಲಿ ಮಹಿಳೆಯರನ್ನು ಇಂದಿಗೂ ಅದೇ ರೀತಿಯಲ್ಲಿ ಚಿತ್ರಿಸಲಾಗುತ್ತಿದೆ. ಯಾವುದೇ ತರಹದ ಸುಧಾರಣೆಯಾಗಲಿ, ಬದಲಾವಣೆಯಾಗಲಿ ಕಂಡುಬರುತ್ತಿಲ್ಲ.

ಪ್ರಸ್ತುತ ದಿನಮಾನದಲ್ಲಿ ಹೊಸ ಅರ್ಥನೀತಿಯ ಫಲದಿಂದ, ಜಾಗತೀಕರಣ, ಖಾಸಗೀಕರಣ ಮತ್ತು ಉದಾರೀಕರಣಗಳ ಭರಾಟೆಯಲ್ಲಿ ನಮ್ಮ ಮಾರುಕಟ್ಟೆಗಳು, ವ್ಯಾಪಾರಿ ಸಂಸ್ಥೆಗಳ ಲಾಭಗಳಿಕೆಯ ದೃಷ್ಟಿಯಿಂದ, ದೃಶ್ಯಮಾಧ್ಯಮಗಳಲ್ಲಿ ಪ್ರಾಯೋಜಿಸುತ್ತಿರುವ ಕಾರ್ಯಕ್ರಮಗಳಂತೂ ಜೊತೆಗೆ ಮಸಾಲೆ ಚಲನ ಚಿತ್ರಗಳೂ ಸೇರಿ, ಮಹಿಳೆಯರ ಬದುಕಲ್ಲಿ ಬದಲಾವಣೆಗೆ ಇನ್ನೂ ಎಷ್ಟರಮಟ್ಟಿಗೆ ಪೂರಕವಾಗುತ್ತವೆ? ಎನ್ನುವ ಪ್ರಶ್ನೆಯನ್ನು ಪ್ರತಿಯೊಬ್ಬರೂ

ಹಾಕಿಕೊಳ್ಳಬೇಕಾಗಿದೆ. ಸ್ತ್ರೀಯರ ಬಗ್ಗೆ ಗೌರವ ಭಾವನೆ ಮೂಡುವಂತಹ ವಸ್ತುನಿಷ್ಠ ಮತ್ತು ಕಲಾತ್ಮಕವಾದ 'ಅರ್ಥ್', ಬೆಳ್ಳಿಮೋಡ, ಭೂಮಿಕಾದಂತಹ ಚಲನಚಿತ್ರಗಳು ತೆರೆಕಾಣುತ್ತಿರುವುದು ತುಂಬಾ ಕಡಿಮೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ದೃಶ್ಯಮಾಧ್ಯಮಗಳಲ್ಲಿ ಮಹಿಳೆಯರನ್ನು ಅಶ್ಲೀಲವಾಗಿ ಈ ರೀತಿ ಚಿತ್ರಿಸುವುದರ ವಿರುದ್ಧ ಮಹಿಳಾ ಸಂಘಟನೆಗಳು ಹೋರಾಟ ಮಾಡಬೇಕಾಗಿದೆ. ಜೊತೆಗೆ ಸಾಮಾಜಿಕ ಕಾಳಜಿ ಇರುವ ಪ್ರತಿಯೊಬ್ಬ ವ್ಯಕ್ತಿ ಮತ್ತು ಸಂಘಟನೆಗಳು ಸುಧಾರಣೆಗೆ ಪ್ರಯತ್ನಿಸಬೇಕಾಗಿದೆ. "ಚಲನಚಿತ್ರ ಮಾಧ್ಯಮಗಳಲ್ಲಿಯಂತೂ ಒಂದು ಗಾಳಿ ಬೀಸಬೇಕಾಗಿದೆ. ಹೊಸದೊಂದು ಪ್ರೇಕ್ಷಕ ವರ್ಗವನ್ನು ನಿರ್ಮಿಸಬೇಕಾಗಿದೆ"[೪] ಯೆಂದು ಕೊಟ್ಟಿರುವ ಸಲಹೆಯಂತೂ ತುಂಬಾ ಉಪಯುಕ್ತವಾದುದು. ನಮ್ಮ ಚಲನಚಿತ್ರರಂಗಕ್ಕೆ ಇದು ತುಂಬಾ ಅಗತ್ಯಕೂಡ. ಕಲಾತ್ಮಕವಾದ ಚಿತ್ರಗಳು ಪ್ರಶಸ್ತಿಗಳಿಸಿದರೂ ಕೂಡ ಬಾಕ್ಸ್ ಆಫೀಸಿನಲ್ಲಿ ಸೋತಿರುವುದೇ ಇದಕ್ಕೇ ಸಾಕ್ಷಿ.

**೬.೨ ಭಾರತೀಯ ಚಲನಚಿತ್ರರಂಗ ನಡೆದು ಬಂದ ದಾರಿ :**

ಭಾರತೀಯ ಚಿತ್ರರಂಗದ ಚರಿತ್ರೆ ಅವಲೋಕಿಸಿದಾಗ ಅದರ ಇತಿಹಾಸ ತುಂಬಾ ರೋಮಾಂಚನಕಾರಿಯಾದುದು. ಪ್ರಪಂಚದ ಚಲನಚಿತ್ರ ನಿರ್ಮಾಣ ಗಮನಿಸಿದರೆ ಇದರಲ್ಲಿ ಭಾರತದ ಸ್ಥಾನ ಮೊದಲನೆಯದೆಂದು ತಿಳಿದುಬರುತ್ತದೆ. ಭಾರತೀಯ ಚಿತ್ರರಂಗಕ್ಕೆ ಸುಮಾರು ಎಪ್ಪತ್ತೈದು ವರ್ಷಗಳು ಸಂದಿವೆ. ಹರಿಶ್ಚಂದ್ರ ಸುಖರಾಂ ಭಟವಾಡೇಕರ್ (ಸವೆದಾದರೆಂದೆ ಪ್ರಸಿದ್ಧಿ ಪಡೆದಿದ್ದಾರೆ) ಭಾರತದ ಚಿತ್ರನಿರ್ಮಾಣದಲ್ಲಿ ತೊಡಗಿದ ಮೊದಲಿಗರು. ೧೮೯೯ರಲ್ಲಿ ಸವೆದಾದರು "ದಿ ರೆಸ್ಲರ್ಸ್", "ಮ್ಯಾನ್ ಅಂಡ್ ಮಂಕಿ" ಎನ್ನುವ ಮೂಕಿ ಚಿತ್ರಗಳನ್ನು ಮೊಟ್ಟ ಮೊದಲಬಾರಿಗೆ ನಿರ್ಮಿಸಿದರು. ಅನಂತರ ದುಂಡಿರಾಜ್ ಗೋವಿಂದ ಫಾಲ್ಕೆ (ದಾದಾ ಸಾಹೇಬ್ ಫಾಲ್ಕೆ ಎಂದು ಖ್ಯಾತಿ ಪಡೆದರು) "ರಾಜಹರಿಶ್ಚಂದ್ರ" ಚಿತ್ರ ನಿರ್ಮಿಸಿ ಮೇ.೩.೧೯೧೩ ರಂದು ಬಿಡುಗಡೆ ಮಾಡುತ್ತಾರೆ. ಭಾರತೀಯ ಚಿತ್ರರಂಗದಲ್ಲಿ ದಾದಾ ಸಾಹೇಬ್ ಫಾಲ್ಕೆ ಅವರು ಭಾರತೀಯ ಚಿತ್ರರಂಗದ ಬ್ರಹ್ಮ ಎನ್ನುವ ಗೌರವಕ್ಕೆ ಪಾತ್ರರಾಗುತ್ತಾರೆ.

ಭಾರತೀಯ ಚಿತ್ರರಂಗದಲ್ಲಿ ಮೂಕಿಚಿತ್ರಗಳು ಹಿಂದೆ ಸರಿದು ವಾಕ್ಚಿತ್ರಗಳು ಪ್ರವೇಶಿಸಿದ್ದು ಅತ್ಯಂತ ಮಹತ್ತರವಾದ ಘಟ್ಟವೆಂದು ಹೇಳಬಹುದಾಗಿದೆ. "ಆಲಂಆರಾ" ಭಾರತದ ಮೊಟ್ಟ ಮೊದಲ ಟಾಕಿ ಚಿತ್ರ (ವಾಕ್ಚಿತ್ರ). ಇಂಪೀರಿಯಲ್ ಕಂಪೆನಿಯ ಅರ್ದೇಶಿರ್ ಇರಾನಿ ಚಿತ್ರ ನಿರ್ಮಾಪಕರು. ೧೯೩೧ ರ ವೇಳೆಗೆ ದಕ್ಷಿಣ ಭಾರತದ ಚಿತ್ರರಂಗದಲ್ಲಿ ವಾಕ್ಚಿತ್ರಗಳ ಹೊಸಶಾಖೆ ಆರಂಭವಾಗುತ್ತದೆ. "ಭಕ್ತಪ್ರಹ್ಲಾದ" (ತಮಿಳಿನಲ್ಲಿ) "ಕಾಳಿದಾಸ" (ತೆಲುಗಿನಲ್ಲಿ) ಚಿತ್ರಗಳು ತೆರೆಕಂಡವು. ಇದೇ ವೇಳೆಗೆ ಸಾಮಾಜಿಕ ಅಸಮಾನತೆಗಳ ವಿರುದ್ಧ ದನಿಯೆತ್ತುವ ಹಲವಾರು ಚಿತ್ರಗಳು ನಿರ್ಮಾಣಗೊಂಡವು. ಇಂತಹ ಹೊತ್ತಲ್ಲಿ ಚಲನಚಿತ್ರ ಮಾಧ್ಯಮಕ್ಕೆ ಹೊಸ ಆಯಾಮ ನೀಡಿದವರೆಂದರೆ ವಿ.ಶಾಂತರಾಂ ಪಡೋಸಿ, ದುನಿಯಾ ನಮಾನೆ ಚಿತ್ರ, ಪಿ.ಸಿ.ಬೆರುವಾ

"ದೇವದಾಸ್", "ಮುಕ್ತಿ", ದೇವಕಿಬೋಸ್ ಅವರು ವಿದ್ಯಾಪತಿ, ಸೀತಾ, ಡಾಲ್ಮಿ ಹಾಗೂ ಫತೇಲಾಲ್ ಅವರು ಸಂತತುಕರಾಂ ಚಿತ್ರಗಳನ್ನು ನಿರ್ದೇಶಿಸುವುದರ ಮೂಲಕ ಭಾರತೀಯ ಚಿತ್ರರಂಗಕ್ಕೆ ಹೊಸ ತಿರುವನ್ನು ತಂದುಕೊಟ್ಟರು. ೧೯೩೭ ರಲ್ಲಿ ಅರ್ದೇಶಿಕ್ ಇರಾನಿ ಅವರು "ಕಿಸಾನ್ಕನ್ಯಾ" ಚಿತ್ರ ನಿರ್ಮಾಣದ ಮೂಲಕ ಬಣ್ಣದ ಚಿತ್ರವನ್ನು ತೆರೆಗೆ ತಂದರು. ೧೯೪೦ರಲ್ಲಿ ಸೋಹ್ರಾಬ್ ಮೋದಿ ಅವರು ಸಿಕಂದರ್, ಪೃಥ್ವಿವಲ್ಲಿಬ್, ಮುಂತಾದ ಐತಿಹಾಸಿಕ ಚಿತ್ರಗಳನ್ನು ನಿರ್ಮಿಸಿ ಹೊಸದಾಖಲೆ ಮಾಡಿದರು.

೧೯೫೨ ಭಾರತೀಯ ಚಿತ್ರರಂಗದಲ್ಲಿ ಮಹತ್ತರವಾದ ವರ್ಷ. ಏಕೆಂದರೆ ಅದೇ ವರ್ಷ ಮೊಟ್ಟಮೊದಲ ಬಾರಿ ಮುಂಬಯಿಯಲ್ಲಿ "ಭಾರತೀಯ ಚಿತ್ರೋತ್ಸವ" ನಡೆಯುತ್ತದೆ. ಇದರ ಪರಿಣಾಮವಾಗಿ ಹಾಲಿವುಡ್ ಚಿತ್ರಗಳಿಂದ ಹೊಸ ಆಯಾಮಗಳು ಮೂಡಿ ಬರುತ್ತವೆ. ೧೯೫೫ ಭಾರತೀಯ ಚಿತ್ರರಂಗದಲ್ಲಿ ಸುವರ್ಣಾಕ್ಷರಗಳಲ್ಲಿ ಬರೆದಿಡಬೇಕಾದ ವರ್ಷ. ಕಾರಣ ಸತ್ಯಜಿತ್‌ರೇ ಚಿತ್ರರಂಗ ಪ್ರವೇಶಿಸಿದ್ದು. ಇವರು ನಿರ್ಮಿಸಿದ 'ಪಥೇರ್ ಪಾಂಚಾಲಿ' ಚಿತ್ರಕ್ಕೆ ಅಂತರ್‌ರಾಷ್ಟ್ರೀಯ ಮನ್ನಣೆ ದಕ್ಕುತ್ತದೆ. ಅನಂತರ ರೇ ನಿರ್ಮಿಸಿದ ಚಿತ್ರಗಳು ಯಶಸ್ಸು ಪಡೆಯುವುದರ ಜೊತೆಗೆ ಗೌರವ ಮತ್ತು ಕೀರ್ತಿ ತಂದು ಕೊಡುತ್ತವೆ. ಐವತ್ತರ ದಶಕದಲ್ಲಿಯೇ ಭಾರತ ಮತ್ತು ರಷ್ಯಾ ಸಹಯೋಗದೊಂದಿಗೆ ಕೆ.ಎ.ಅಬ್ಬಾಸ್ ಅವರು 'ಪರದೇಸಿ' ಚಿತ್ರ ನಿರ್ಮಿಸುತ್ತಾರೆ.

ಅರವತ್ತರ ದಶಕದ ವೇಳೆಗೆ ವರ್ಣಚಿತ್ರಗಳು ತೆರೆಕಾಣುವುದರ ಮೂಲಕ ಭಾರತೀಯ ಚಿತ್ರರಂಗಕ್ಕೆ ಕಳೆ ಮೂಡುತ್ತದೆ. "ಕೆ.ಅಸೀಫ್ ಅವರ 'ಮೊಘಲ್ ಎ ಆಗಂ ಚಿತ್ರ ಅಪಾರವಾದ ಜನಮನ್ನಣೆ ಗಳಿಸುತ್ತದೆ. ಅಲ್ಲದೆ ಹಿಂದಿ ಚಿತ್ರರಂಗದ ಸಾಮ್ರಾಟನೆನಿಸಿದ ರಾಜ್‌ಕಪೂರ್ ನಿರ್ದೇಶನದ 'ಜಿಸ್ ದೇಶ್ ಮೆ ಗಂಗ ಬಹತಿ ಹೈ', 'ಸಂಗಮ್', ದಿಲೀಪ್‌ಕುಮಾರ್ ಅವರ 'ಗಂಗಾ ಜಮುನಾ' ಬಿ.ಆರ್. ಛೋಪ್ರಾ ಅವರ 'ವಕ್ತ್' ಶಕ್ತಿ ಸಾಮಂತರ 'ಆರಾಧನಾ'. ಮನೋಜ್‌ಕುಮಾರ್‌ರ 'ಉಪಕಾರ್' ಇವೇ ಮೊದಲಾದವು ಅರವತ್ತರ ದಶಕದ ಮಹತ್ವಪೂರ್ಣ ಚಿತ್ರಗಳಾಗಿ ಸ್ಮರಣೀಯವೆನಿಸಿವೆ"[೨] ಈ ರೀತಿ ವರ್ಣಚಿತ್ರಗಳು ತೆರೆಕಂಡು ಭಾರತೀಯ ಚಿತ್ರರಂಗ ಸಮೃದ್ಧವಾಗಿ ಬೆಳೆಯಲು ಸಾಧ್ಯವಾಯಿತು. ಎಪ್ಪತ್ತರ ದಶಕದಲ್ಲಿ ಅದ್ದೂರಿ ಚಲನಚಿತ್ರಗಳು ನಿರ್ಮಿಸಲ್ಪಟ್ಟವು. ಬಂಡವಾಳಶಾಹಿಗಳು ಚಿತ್ರರಂಗ ಪ್ರವೇಶಿಸಿದರು. ಪಾಕೀಜಾ, ಶೋಲೆ ಮೊದಲಾದ ಚಿತ್ರಗಳು ತೆರೆಕಂಡವು. ಎಂಬತ್ತರ ದಶಕದಲ್ಲಿಯೂ ಮಹತ್ತರ ಸಿನಿಮಾಗಳು ನಿರ್ಮಾಣಗೊಂಡವು. ಹೀಗೆ ಹಿಂದಿ ಚಿತ್ರರಂಗದ ಜೊತೆ ಜೊತೆಯಲ್ಲೇ ಪ್ರಾದೇಶಿಕ ಭಾಷೆಗಳ ಚಿತ್ರಗಳೂ ಹೆಚ್ಚಿನ ಸಂಖ್ಯೆಯಲ್ಲಿ ತೆರೆಕಂಡು ಭಾರತೀಯ ಚಿತ್ರರಂಗವನ್ನು ಶ್ರೀಮಂತಗೊಳಿಸಿದ್ದಷ್ಟೇ ಅಲ್ಲದೆ ಗುಣಮಟ್ಟದಲ್ಲಿಯೂ ದಾಖಲೆ ಮಾಡಿವೆ.

## ೬.೩ ಕನ್ನಡ ಚಲನಚಿತ್ರರಂಗ :

ಕನ್ನಡ ಚಲನಚಿತ್ರ ರಂಗವು ಹೆಚ್ಚು ಕಡಿಮೆ ಭಾರತೀಯ ಚಿತ್ರರಂಗದಷ್ಟೇ ಹಳೆಯದು. "ಮನೋರಂಜನೆ ಹಾಗೂ ವಿಕಾಸಕ್ಕೆ ಅತ್ಯುತ್ತಮ ಹಾಗೂ ಅತ್ಯಾಧುನಿಕ ಮಾಧ್ಯಮವಾಗಲಿದ್ದ ಚಲನಚಿತ್ರದ ಮಹತ್ವವನ್ನೂ, ಭವಿಷ್ಯದ ದಿನಗಳಲ್ಲಿ ಅದು ವಹಿಸಲಿದ್ದ ಪ್ರಮುಖ ಪಾತ್ರವನ್ನು ಕರ್ನಾಟಕದ ಜನರು, ಉದ್ಯಮಿಗಳೂ ಪ್ರಥಮ ವಾಕ್ಚಿತ್ರದ ತಯಾರಿಕೆಗೂ ಮೊದಲಿನಿಂದಲೂ ಅರಿತುಕೊಂಡಿದ್ದರು" ಎಂಬುದು ಗಮನಾರ್ಹವಾದ ಸಂಗತಿಯೆಂದು ಡಿ.ಎಲ್. ವಿಜಯಕುಮಾರಿ ಅವರು 'ನಮ್ಮ ಕನ್ನಡ' ಕೃತಿಯಲ್ಲಿ ದಾಖಲಿಸಿದ್ದಾರೆ. ಅಂದರೆ ೧೯೩೧ರ ಆದಿಭಾಗದಿಂದ ಚಲನಚಿತ್ರಗಳ ಯುಗ ಆರಂಭವಾಯಿತು. ಮೂಕಿಚಿತ್ರಗಳು ಹಿಂದೆ ಸರಿದು ವಾಕ್ಚಿತ್ರಗಳು ತೆರೆಕಂಡವು.

ವಾಕ್ಚಿತ್ರಗಳು ಅಂದರೆ ಮಾತನಾಡುವ ಚಿತ್ರಗಳು ವಿದೇಶದಿಂದ ಬರಲಾರಂಭಿಸಿದಾಗ ಮೂಕಿಚಿತ್ರಗಳಿಗಿದ್ದ ಬೇಡಿಕೆ ಕಡಿಮೆಯಾಗುತ್ತಾ ಬಂದಿತು. ಕನ್ನಡದಲ್ಲಿ ಮೂಡಿಬಂದ ಮೊಟ್ಟಮೊದಲ ವಾಕ್ಚಿತ್ರ "ಸತಿಸುಲೋಚನಾ" ಸೌತ್ ಇಂಡಿಯಾ ಮೂವಿಟೋನ್ ಸಂಸ್ಥೆಯವರು ಈ ಚಿತ್ರ ನಿರ್ಮಿಸಿದವರು. ವೈ.ವಿ.ರಾವ್ ಅವರು ಇದರ ನಿರ್ದೇಶಕರು. ಮಾರ್ಚ್ ೩೧. ೧೯೩೪ ರಲ್ಲಿ ಈ ಚಿತ್ರ ತೆರೆ ಕಂಡದ್ದು. ಬೆಳ್ಳಾವಿ ನರಹರಿಶಾಸ್ತ್ರಿಗಳು ಬರೆದ ನಾಟಕ ಈ ಚಿತ್ರದ ಕಥಾವಸ್ತು. ಸಂಭಾಷಣೆಯನ್ನೂ ಶಾಸ್ತ್ರಿಯವರೆ ಬರೆದಿದ್ದಾರೆ. ಆ ಸಂದರ್ಭದಲ್ಲಿ ನಾಟಕಕ್ಕಾಗಲಿ, ಚಲನಚಿತ್ರಕ್ಕಾಗಲಿ ಪುರಾಣದ ಕಥಾಹಂದರವೇ ವಸ್ತುವಾಗುತ್ತಿತ್ತು. ರಂಗಭೂಮಿಯ ಕಲಾವಿದರೇ ಸಿನಿಮಾ ನಟರಾಗುತ್ತಿದ್ದರು. "ಸತಿಸುಲೋಚನಾ" ಚಿತ್ರವನ್ನು ಕನ್ನಡಿಗರು ಹೃದಯಪೂರ್ವಕವಾಗಿ ಸ್ವೀಕರಿಸುತ್ತಾರೆ. ಈ ರೀತಿ ವಾಕ್ಚಿತ್ರಗಳು ತೆರೆಗೆ ಬಂದು ಯಶಸ್ಸು ಗಳಿಸಲಾರಂಭಿಸಿದಾಗ ವೃತ್ತಿರಂಗಭೂಮಿಯ ಕಲಾವಿದರಿಗೆ ಆತಂಕವುಂಟಾಗುತ್ತದೆ. ಏಕೆಂದರೆ ರಂಗಭೂಮಿಗೆ ತೊಂದರೆಯಾಗಬಹುದೆಂದು.

"ಸತಿಸುಲೋಚನಾ" ಚಿತ್ರಕ್ಕಿಂತ ಮುಂಚಿತವಾಗಿಯೇ ರಂಗಭೂಮಿಯ ಬಗ್ಗೆ ವಿಶೇಷವಾದ ಅಧ್ಯಯನ ನಡೆಸಿದ ನಾಟಕಕಾರ, ಕಲಾವಿದ ತಿರುಚರಾಪಳ್ಳಿ ಪರಮಶಿವಯ್ಯ ಕೈಲಾಸಂ, ಜಿ.ಕೆ.ನಂದಾ, ಏಣಾಕ್ಷಿಭವಾನಾನಿ ಮೊದಲಾದ ಸಾಹಿತಿಗಳು ಮತ್ತು ಮೇಧಾವಿಗಳು "ಮೃಚ್ಛಕಟಿಕಾ" ಚಿತ್ರ ತಯಾರಿಸಿದ್ದು. ಕನ್ನಡದ ಆರಂಭದ ಚಲನಚಿತ್ರ ಬೆಳವಣಿಗೆಯಲ್ಲಿ ಗಮನಾರ್ಹವಾದದ್ದು. ಕನ್ನಡದ ಮೊದಲ ಚಿತ್ರ "ಸತಿಸುಲೋಚನಾ"ಎಂತಲೂ "ಭಕ್ತಧ್ರುವ" ಎಂತಲೂ ಜಿಜ್ಞಾಸೆಯಿದೆ. "ಭಕ್ತಧ್ರುವ" ಚಿತ್ರ ತಯಾರಿಕೆ "ಸತಿಸುಲೋಚನಾ"ಕ್ಕಿಂತಲೂ ಮುಂಚೆಯೇ ಆರಂಭವಾಗಿದ್ದರೂ ಮೊದಲು ಬಿಡುಗಡೆಯಾದದ್ದು "ಸತಿಸುಲೋಚನಾ" ಹಾಗಾಗಿ ಇದೇ ಕನ್ನಡದಲ್ಲಿ ಮೊದಲ ವಾಕ್ಚಿತ್ರವೆಂದು ಗುರುತಿಸಲ್ಪಟ್ಟಿತು. ಇದೇ ಹೊತ್ತಿನಲ್ಲಿ ಕನ್ನಡದ ಕಾದಂಬರಿಯೊಂದನ್ನು ಚಿತ್ರಮಾಡುವ ಪ್ರಯತ್ನದ ಫಲವಾಗಿ ದೇವುಡು ಅವರ "ಕಳ್ಳರಕೂಟ"

"ಸಾಂಗ್ ಆಫ್ ಲೈಫ್" ಎನ್ನುವ ಹೆಸರಲ್ಲಿ ಚಲನಚಿತ್ರವಾಗಿ ರೂಪುಗೊಂಡಿತು. ಇಲ್ಲಿ ಗಮನಿಸಬಹುದಾದ ಅಂಶವೆಂದರೆ ಕನ್ನಡ ಚಿತ್ರರಂಗದ ಬೆಳವಣಿಗೆಯಲ್ಲಿ ಸಾಹಿತ್ಯಕ್ಷೇತ್ರ ಮತ್ತು ಸಿನಿಮಾರಂಗದಲ್ಲಿ ನಿಕಟವೂ, ಆತ್ಮೀಯವೂ ಆದ ಸಂಬಂಧವೇರ್ಪಟ್ಟಿದ್ದು.

ಕನ್ನಡ ಚಲನಚಿತ್ರ ರಂಗದಲ್ಲಿ ಗುಬ್ಬಿ ವೀರಣ್ಣನವರ ಹೆಸರು ಸ್ಮರಣೀಯವಾದದ್ದು. ಏಕೆಂದರೆ ತಮ್ಮ ಕಂಪೆನಿ ಮೂಲಕ ಅನೇಕ ಕಲಾವಿದರನ್ನು ಸಿನಿಮಾರಂಗಕ್ಕೆ ಪರಿಚಯಿಸಿದ್ದು. ೧೯೩೫ರಲ್ಲಿ ಗುಬ್ಬಿವೀರಣ್ಣನವರು ತಮ್ಮ ಕಂಪನಿಯ ಜನಪ್ರಿಯ ನಾಟಕವಾದ "ಸದಾರಮೆ"ಯನ್ನು ಚಲನಚಿತ್ರವಾಗಿ ತಯಾರಿಸಿದರು. ಸ್ವತಃ ಗುಬ್ಬಿವೀರಣ್ಣನವರೆ ಆದಿಮೂರ್ತಿ ಹಾಗೂ ಕಳ್ಳನ ಪಾತ್ರದಲ್ಲಿ ಕಾಣಿಸಿಕೊಳ್ಳುತ್ತಾರೆ. ರಾಜಾಚಂದ್ರಶೇಖರ್ ಇದರ ನಿರ್ದೇಶಕರು. ಹಾಸ್ಯಪ್ರಧಾನವಾದ ಈ ಚಿತ್ರ ಯಶಸ್ವಿಯಾಗಿ ಪ್ರದರ್ಶನಗೊಳ್ಳುತ್ತದೆ. ಅನಂತರ ನಾಟಕರತ್ನ ಗುಬ್ಬಿವೀರಣ್ಣನವರು ೧೯೪೧-೪೭ ರ ಅವಧಿಯಲ್ಲಿ ಸುಭದ್ರ, 'ಜೀವನ ನಾಟಕ' ಹಾಗೂ 'ಹೇಮರೆಡ್ಡಿಮಲ್ಲಮ್ಮ' ಎನ್ನುವ ಮೂರು ಚಿತ್ರಗಳನ್ನು ನಿರ್ಮಿಸಿದರು. ಜೀವನ ನಾಟಕ ಚಿತ್ರದ ಕಥೆ ಹಾಗೂ ಚಿತ್ರಕತೆ ಕನ್ನಡದ ಖ್ಯಾತ ಕಾದಂಬರಿಕಾರರಾದ ಅ.ನ.ಕೃ.ಅವರದು. ೧೯೫೮ ರಲ್ಲಿ 'ಭೂ ಕೈಲಾಸ' ಪೌರಾಣಿಕ ಚಿತ್ರ ತೆರೆಗೆ ಬಂದಿತು.

ಪ್ರಾರಂಭದ ದಿನಗಳಲ್ಲಿ ಚಲನಚಿತ್ರ ತಯಾರಿಕೆಗೆ ಸಾಮಾನ್ಯವಾಗಿ ಪೌರಾಣಿಕ ಕಥಾವಸ್ತುವನ್ನು ಅವಲಂಬಿಸಬೇಕಾಗುತ್ತಿತ್ತು. ಜೊತೆಗೆ ಜನಪ್ರಿಯವಾದ ಕಂಪನಿ ನಾಟಕಗಳನ್ನು ಆಧರಿಸಿ ಸಿನಿಮಾ ತಯಾರಿಸುವ ಪರಿಪಾಠವಿತ್ತು. ಪೌರಾಣಿಕ ನಾಟಕಗಳಿಗೆ ಸೀಮಿತವಾಗಿದ್ದ ಕನ್ನಡ ರಂಗಭೂಮಿಗೆ ಹೊಸ ಆಯಾಮ ನೀಡಿದ್ದು ಸಾಮಾಜಿಕ ನಾಟಕ "ಸಾಂಸಾರ ನೌಕೆ"ಯನ್ನು ಚಲನಚಿತ್ರವಾಗಿ ಮಾಡಿದ್ದು. ೧೯೩೬ರಲ್ಲಿ ದಕ್ಷಿಣ ಭಾರತದಲ್ಲೇ ಪ್ರಪ್ರಥಮ ಬಾರಿಗೆ "ಸಂಸಾರನೌಕೆ" ಸಿನಿಮಾ ತಯಾರಿಸಿದ ಕೀರ್ತಿ ಸೇಲಂನ ರಾಜಗೋಪಾಲಚೆಟ್ಟಿ ಅವರಿಗೆ ಸಲ್ಲುತ್ತದೆ. ಸಂಗೀತ, ಸಾಹಿತ್ಯ, ಅಭಿನಯ ವಿಷಯಗಳಲ್ಲಿ ಉತ್ತಮವಾದ ಚಿತ್ರ "ಸತ್ಯಹರಿಶ್ಚಂದ್ರ" ೧೯೪೩ರಲ್ಲಿ ಬಿಡುಗಡೆಯಾಯಿತು.

೧೯೫೪ ರಿಂದ ೧೯೬೩ ಕನ್ನಡ ಚಿತ್ರರಂಗದಲ್ಲಿ ಮಹತ್ವದ ವರ್ಷ. ಏಕೆಂದರೆ "ಬೇಡರಕಣ್ಣಪ್ಪ" ಚಿತ್ರದ ಮೂಲಕ ಡಾ.ರಾಜಕುಮಾರ್ ಮತ್ತು ಹಾಸ್ಯ ಕಲಾವಿದ ನರಸಿಂಹರಾಜು ಅವರು ರಂಗಪ್ರವೇಶಿಸಿದ್ದು. ಕನ್ನಡ ಚಿತ್ರವೊಂದು ಪ್ರಥಮಬಾರಿಗೆ ರಾಷ್ಟ್ರಪ್ರಶಸ್ತಿಗಳಿಸುವುದರ ಮೂಲಕ ಕನ್ನಡ ಚಿತ್ರರಂಗಕ್ಕೆ ಹೆಮ್ಮೆ ತಂದುಕೊಟ್ಟಿದೆ. ಚಿತ್ರ ನಿರ್ಮಾಪಕ ಗುಬ್ಬಿವೀರಣ್ಣನವರು. ೧೯೫೭ರಲ್ಲಿ ತಯಾರಾದ "ಬೆಟ್ಟದಕಳ್ಳ" ಕನ್ನಡದ ಮೊದಲ ರಿಮೇಕ್ ಚಿತ್ರವೆಂದು ಹೇಳಬಹುದಾಗಿದೆ. ೧೯೫೭ರಲ್ಲಿ ಬಿಡುಗಡೆಯಾದ "ರಾಯರಸೊಸೆ" ರಾಜ್‌ಕುಮಾರ್ ಅಭಿನಯದ ಮೊದಲ ಸಾಮಾಜಿಕ ಚಿತ್ರ. ೧೯೬೦ ರಲ್ಲಿ ಬಿಡುಗಡೆಯಾದ ಮೈಸೂರು ರಾಜಪರಂಪರೆಗೆ ಸೇರಿದ ಕಂಠೀರವ ನರಸಿಂಹರಾಜ ಒಡೆಯರ ಜೀವನ ಕುರಿತಾದ

ಸಿನಿಮಾ"ರಣಧೀರ ಕಂಠೀರವ" ಚಿತ್ರ ಬಿಡುಗಡೆಯಾದದ್ದು ಒಂದು ಮಹತ್ತರ ವಿಷಯವೇ ಸರಿ. ಅರವತ್ತರ ದಶಕ ಕನ್ನಡ ಚಿತ್ರರಂಗದ ಸ್ವರ್ಣಯುಗದ ಆರಂಭ, ವರ್ಣಚಿತ್ರಗಳು ತೆರೆಕಾಣಲಾರಂಭಿಸಿದ್ದು. ೧೯೬೦ರಲ್ಲಿ ಡಾ.ರಾಜ್‌ಕುಮಾರ್ ಅಭಿನಯದ "ದಶಾವತಾರ" ಮೊದಲ ಭಾಗಶಃ ವರ್ಣಚಿತ್ರ ತೆರೆಕಂಡಿತು. ೧೯೬೪ರಲ್ಲಿ "ಅಮರಶಿಲ್ಪಿಜಕಣಾಚಾರಿ" ವರ್ಣಚಿತ್ರ ಬಿಡುಗಡೆಯಾಗಿ ತುಂಬಾ ಹೆಸರು ಮಾಡಿತು. ಇದೇ ಕನ್ನಡದ ಮೊದಲ ವರ್ಣಚಿತ್ರ

### ೬.೪. ಕಾದಂಬರಿ ಆಧಾರಿತ ಚಲನಚಿತ್ರಗಳು :

೧೯೬೭ರ ವೇಳೆಗೆ ಕಾದಂಬರಿ ಆಧಾರಿತ ಚಿತ್ರಗಳು ತೆರೆಕಾಣಲಾರಂಭಿಸಿದವು. ಕನ್ನಡದ ಜನಪ್ರಿಯ ಕಾದಂಬರಿಕಾರರಾದ ತ.ರಾ.ಸು. ಅವರ "ಚಂದವಳ್ಳಿ ತೋಟ" (೧೯೬೪), ಕನ್ನಡ ಚಿತ್ರರಂಗದ ಚಿತ್ರಬ್ರಹ್ಮರೆನಿಸಿದ್ದ ಪುಟ್ಟಣ್ಣಕಣಗಾಲ್ ನಿರ್ದೇಶಿಸಿದ ಚಿತ್ರ "ಗೆಜ್ಜೆಪೂಜೆ". ಇದು ಹೆಸರಾಂತ ಕಾದಂಬರಿಕಾರ್ತಿ ಎಂ.ಕೆ. ಇಂದಿರಾ ಅವರ ಕಾದಂಬರಿ ಆಧರಿತ ಚಿತ್ರ ಜಿ.ವಿ.ಅಯ್ಯರ್ ನಿರ್ದೇಶಿಸಿದ "ಹಂಸಗೀತೆ". ತ.ರಾ.ಸು. ಅವರ ಸುಮಾರು ಸಾಮಾಜಿಕ ಕಾದಂಬರಿಗಳು ಪುಟ್ಟಣ್ಣ ಕಣಗಾಲ್ ನಿರ್ದೇಶನದಲ್ಲಿ ಸಿನಿಮಾಗಳಾದವು. ಚಿತ್ರರಂಗವನ್ನು ಉದಾಸೀನ ಭಾವನೆಯಿಂದ ನೋಡುತ್ತಿದ್ದ ಬುದ್ಧಿಜೀವಿಗಳೂ ತಮ್ಮ ದೃಷ್ಟಿಯನ್ನು ಚಿತ್ರರಂಗದತ್ತ ಹರಿಸಿದರು. ಪಿ.ಲಂಕೇಶ್, ಬಿ.ವಿ.ಕಾರಂತ್, ಯೂ.ಆರ್.ಅನಂತಮೂರ್ತಿ ಮುಂತಾದವರನ್ನು ಹೆಸರಿಸಬಹುದು. ೧೯೭೨ರಲ್ಲಿ ಭೈರಪ್ಪ ಅವರ 'ವಂಶವೃಕ್ಷ' ಕಾದಂಬರಿಯನ್ನು ಜಿ.ವಿ.ಅಯ್ಯರ್ ಅವರು ತೆರೆಗೆ ತಂದರು. ಈ ನಿಟ್ಟಿನಲ್ಲಿ ಶಿವರಾಮ ಕಾರಂತರ 'ಚೋಮನದುಡಿ', ಅನಂತಮೂರ್ತಿ ಅವರ ವಂಶವೃಕ್ಷ, ಎಂ.ಕೆ.ಇಂದಿರಾ ಅವರ ಫಣಿಯಮ್ಮ, ಲಂಕೇಶ್ ಅವರ 'ಎಲ್ಲಿಂದಲೋ ಬಂದವರು' ಅಲನಹಳ್ಳಿಯವರ ಪರಸಂಗದಗೆಂಡೆತಿಮ್ಮ, ಭುಜಂಗಯ್ಯನ ದಶಾವತಾರ ಮುಂತಾದ ಕಾದಂಬರಿಗಳು ತೆರೆಕಂಡವು.

ಭಾರತೀಯ ಚಿತ್ರರಂಗಕ್ಕೆ ·ಕನ್ನಡ ನಿರ್ದೇಶಕರ ಕೊಡುಗೆ ಅಪಾರವಾದುದೆಂದೇ ಹೇಳಬಹುದಾಗಿದೆ. ಈ ಹಿನ್ನೆಲೆಯಲ್ಲಿ ಹಂತ ಹಂತವಾಗಿ ಬೆಳೆದು ಬಂದ ನಿರ್ದೇಶಕರುಗಳೇ ಸಾಕ್ಷಿ. ಬಿ.ಆರ್.ಪಂತುಲು,ಜೀ.ವಿ.ಅಯ್ಯರ್, ಹುಣಸೂರು ಕೃಷ್ಣಮೂರ್ತಿ, ಪುಟ್ಟಣ್ಣ ಕಣಗಾಲ್, ಸಿದ್ದಲಿಂಗಯ್ಯ, ರಾಜೇಂದ್ರಸಿಂಗ್‌ಬಾಬು,ಬಿ.ಎಸ್.ರಂಗಾ,ದೊರೆ-ಭಗವಾನ್,ಗಿರೀಶ್‌ಕಾಸರವಳ್ಳಿ ಎಂ.ಎಸ್.ಕಾರಂತ್ ಅಲ್ಲದೆ ನಟರು ಮತ್ತು ನಿರ್ದೇಶಕರೂ ಆಗಿರುವ ಕನ್ನಡದ ಹೆಚ್ಚಿನ ಸಿನಿಮಾನಟರನ್ನು ಹೆಸರಿಸಬಹುದು.

ಕೆಲವು ಬಾರಿ ಮುಖ್ಯವೆನಿಸುತ್ತದೆ. ತ.ರಾ.ಸು. ಅವರ ಕೃತಿಗಳು ಈ ರೀತಿ ಎರೆಡೂ ದೃಷ್ಟಿಯಿಂದಲೂ ಜನಮನ್ನಣೆ ಗಳಿಸಿದವು. ಈ ಹಿನ್ನೆಲೆಯಲ್ಲಿ ತ.ರಾ.ಸು. ಅವರ ಕೆಲವು ಕೃತಿಗಳು ದೃಶ್ಯಮಾಧ್ಯಮಕ್ಕೆ ಅಳವಡಿಸಲ್ಪಟ್ಟವು.ಅವುಗಳಲ್ಲಿ ನನ್ನ ಅಧ್ಯಯನದ ಮಿತಿಯಲ್ಲಿ ಕೆಲವನ್ನಿಲ್ಲಿ ಅವಲೋಕನ ಮಾಡಿದ್ದೇನೆ.

**ಗಾಳಿಮಾತು** : ಗಾಳಿಮಾತು ತ.ರಾ.ಸು. ಅವರ ಸಾಮಾಜಿಕ ಕಾದಂಬರಿ ಪುಟ್ಟಣ್ಣಕಣಗಾಲ್ ನಿರ್ದೇಶನದಲ್ಲಿ ಈ ಕಾದಂಬರಿ ಚಲನಚಿತ್ರವಾಗಿದೆ. ಸಿನಿಮಾದಲ್ಲಿ ಪ್ರಧಾನವಾಗಿ ಸ್ತ್ರೀಪಾತ್ರಗಳೇ ಕಂಡುಬರುತ್ತವೆ. ನಾಯಕನ ಪಾತ್ರದಲ್ಲಿ ಜೈಜಗದೀಶ್ ಕಾಣಿಸಿಕೊಂಡರೆ ನಾಯಕಿ ಪಾತ್ರದಲ್ಲಿ ಅಭಿನಯ ತಾರೆ ಲಕ್ಷ್ಮಿ ಕಾಣಿಸುತ್ತಾಳೆ. ಖಳನಾಯಕಿ ಪಾತ್ರದಲ್ಲಿ ಹೇಮಾಚೌದರಿ ಕಂಡುಬರುತ್ತಾಳೆ. ಉಳಿದಂತೆ ಇನ್ನೂ ಹಲವು ಪಾತ್ರಗಳು ಪೂರಕಪಾತ್ರಗಳಾಗಿ ಬಿಂಬಿತವಾಗಿವೆ.

ಸಿನಿಮಾದಲ್ಲಿ ಪ್ರಧಾನವಾಗಿ ಚಿತ್ರಿಸಲ್ಪಟ್ಟಿರುವುದು ಸ್ತ್ರೀಬದುಕನ್ನ. ಸಂಪ್ರದಾಯ ಕುಟುಂಬದಿಂದ ಬಂದ ಹೆಣ್ಣೊಬ್ಬಳು ಕಾಲೇಜಿಗೆ ಹೋಗುವುದು ಬೇಡವೆಂದು ಗೌರಿ ತಾಯಿ ವಿರೋಧಿಸಿದಾಗ, ಗೌರಿಯ ತಂದೆ ಮಗಳಿಗೆ ಸಹಕಾರ ಕೊಡುವುದರ ಮೂಲಕ ಕಾಲೇಜಿಗೆ ಕಳುಹಿಸಲು ಸೂಚಿಸುತ್ತಾರೆ. ದುರಂತವೆಂದರೆ ಅವ್ಯಕ್ತ ಪತ್ರವೊಂದು ಕಾಲೇಜಿನ ವಿಳಾಸಕ್ಕೆ ಬಂದು ಗೌರಿಯ ಬದುಕಲ್ಲಿ ಅಲ್ಲೋಲಕಲ್ಲೋಲವನ್ನುಂಟುಮಾಡುತ್ತದೆ. ಇದಕ್ಕೆ ಪೂರಕವಾಗಿ ಕನಕ ಅವ್ಯಕ್ತ ಪತ್ರದ ವಿಷಯವನ್ನು ಮುಂದಿಟ್ಟುಕೊಂಡು ಹುಡುಗಾಟಿಕೆಯನ್ನಾಡುತ್ತಲೇ ಗಂಭೀರ ಸ್ವರೂಪ ತಾಳುವಂತೆ ಮಾಡಿ, ಪರಿಸ್ಥಿತಿ ಕೈಮೀರಿ ಗೌರಿ ಆತ್ಮಹತ್ಯೆ ಮಾಡಿಕೊಂಡಾಗ ಕನಕ ಆತ್ಮವಿಮರ್ಶೆ ಮಾಡಿಕೊಂಡು ತಾನೂ ಸಾವನ್ನಪ್ಪುತ್ತಾಳೆ. ಇನ್ನು ಸಿನಿಮಾದಲ್ಲಿನ ನಾಯಕ ಶ್ರೀಮಂತ ಕುಟುಂಬದಲ್ಲಿ ಜನಿಸಿದರೂ ಹಣದ ಬಗ್ಗೆ ಮೋಹವನ್ನು ಹೊಂದಿಲ್ಲದವನು. ಈತನ ತಂದೆ ಮಾತ್ರ ತುಂಬಾ ಧನ ಪಿಶಾಚಿ. ನಾಯಕ (ಜೈಜಗದೀಶ್) ಬಡವರ ಪರ ಇದ್ದು ಶ್ರೀಮಂತಿಕೆಯನ್ನು ವಿರೋಧಿಸುವವನು. ಹೇಗೆಂದರೆ ತನ್ನ ತಂದೆ ಬಡ್ಡಿ ವಸೂಲಿ ಮಾಡಿಕೊಂಡು ಬರುವಂತೆ ಸಾಲ ಪತ್ರಗಳನ್ನು ಕೊಟ್ಟು ಕಳುಹಿಸಿದಾಗ ಸಾಲ ಪತ್ರಗಳನ್ನು ಹರಿದುಹಾಕಿ (ತನ್ನ ಜಮೀನಿನಲ್ಲಿ ಕೆಲಸ ಮಾಡುವವರು) ಅವರು ಸಾಲವನ್ನು ವಾಪಸ್ಸು ಕೊಡುವುದು ಬೇಡವೆಂದು ಹೇಳಿದ್ದಲ್ಲದೆ, ಸಂತ್ರಸ್ಥ ಜನತೆಗೆ ಚಂದಾ ವಸೂಲಿ ಮಾಡುವ ಸಭೆಯಲ್ಲಿ ತಂದೆಗಿಂತಲೂ ಮುಂಚೆಯೇ ಹತ್ತುಸಾವಿರ ರೂಗಳನ್ನು ಕೊಡುತ್ತೇವೆಂದು ತನ್ನ ತಂದೆಯ ಪರವಾಗಿ ತಾನೇ ಘೋಷಿಸುತ್ತಾನೆ. ಅಲ್ಲದೆ ಇಡೀ ಸಿನಿಮಾದುದ್ದಕ್ಕೂ ಬಡವರ ಪರವಾಗಿ, ನೊಂದ ಜನತೆಯ ಪರವಾಗಿ ನಿಲ್ಲುವ ಪಾತ್ರವಾಗಿ ಅಲ್ಲದೆ, ತನ್ನ ತಂದೆಯ ಅಭಿಪ್ರಾಯಕ್ಕೆ ವಿರುದ್ಧವಾಗಿ ಬಡತನದಲ್ಲಿರುವ ಗೌರಿಯನ್ನು ಮದುವೆಯಾಗಲು ಮುಂದೆ ಬರುವುದು. ತಂದೆ ಒಪ್ಪದಿದ್ದಾಗ ಗಾಳಿಸುದ್ದಿಗಳಿಗೆಲ್ಲಾ ಕಿವಿಗೊಡಬಾರದೆನ್ನುವ ನಿಲುವನ್ನು ತಿಳಿಯುತ್ತಾನೆ. "ಒಂದು ಹೆಣ್ಣಿನ ಮಾತು ಕೇಳಿ ನಂಜಿನ ನಾಲಗೆಯಿಂದ ಒಂದು ಸಂಸಾರ ಕೊಲ್ತೀರ" ಎಂದು ತನ್ನ ತಂದೆಗೆ ಕೇಳುತ್ತಾನೆ.

ಈ ಸಂದರ್ಭದಲ್ಲಿ ನಾಯಕ ಹೆಣ್ಣಿನ ಪರವಾಗಿ ಮಾತನಾಡುತ್ತಾನೆ.ನಮ್ಮ ಕಾರಣದಿಂದ ಒಂದು ಹೆಣ್ಣಿನ ಬದುಕು ಹಾಳಗಬಾರದೆಂದು ನಾಯಕನ ಒತ್ತಾಸೆ.

ಹೆಣ್ಣಾದವಳು ವಿದ್ಯೆಕಲಿಯುವುದು ಬೇಡವೆಂಬುದು ಗೌರಿ ತಾಯಿಯ ಧೋರಣೆ. ಅಂದಿನ ಸಾಮಾಜಿಕವಾದ ಧೋರಣೆ ಕೂಡ ಅದೇ ಆಗಿತ್ತು. ಸಂಪ್ರದಾಯ ಕುಟುಂಬದ ಹೆಣ್ಣುಮಕ್ಕಳು (ಅದರಲ್ಲೂ ಬ್ರಾಹ್ಮಣ ಕುಟುಂಬ) ಆಧುನಿಕ ಪದ್ದತಿ ಶಿಕ್ಷಣ ಪಡೆಯಲು ಶಾಲಾಕಾಲೇಜಿಗೆ ಹೋಗುವುದನ್ನು ವಿರೋಧಿಸುತ್ತಿದ್ದರು. ಈ ಪದ್ಧತಿಯಲ್ಲಿ ಸುಧಾರಣೆಯಾಗಬೇಕೆನ್ನುವ ಸಂದೇಶವನ್ನು ಪ್ರೇಕ್ಷಕರಿಗೆ ತಲುಪಿಸಬೇಕೆಂಬುದು ಸಿನಿಮಾದ ಉದ್ದೇಶ. ಆ ಕಾರಣಕ್ಕಾಗಿಯೇ ಗೌರಿ ಕಾಲೇಜಿಗೆ ಹೋಗುವುದು. ಸಂಪ್ರದಾಯ, ಹಳೆಯ ಮೌಲ್ಯಗಳನ್ನು ಬಿಡಲಾರದ ಹಾಗೂ ಆಧುನಿಕತೆಗೆ ಹೊಂದಿಕೊಳ್ಳಲಾರದ ಬಿಕ್ಕಟ್ಟು, ಒಂದು ರೀತಿಯ ಇಬ್ಬಂದಿತನ ಅಂದಿನ ಲೇಖಕರ ಮುಂದಿದ್ದ ಸಮಸ್ಯೆ. ಈ ಸಮಸ್ಯೆಯನ್ನ ಸವಾಲಾಗಿ ಸ್ವೀಕರಿಸಿ ತಮ್ಮ ಕೃತಿಗಳಲ್ಲಿ ತಂದವರೆಂದರೆ ಕೈಲಾಸಂ ಮತ್ತು ತ.ರಾ.ಸು.ಸಂಪ್ರದಾಯ ಕುಟುಂಬದಿಂದ ಬಂದ ತ.ರಾ.ಸು. ಆ ಚೌಕಟ್ಟನ್ನು ಮೀರಿ ತಮ್ಮ ಕೃತಿಗಳಲ್ಲಿ ಸ್ತ್ರೀಯನ್ನು ಚಿತ್ರಿಸಿದರು. ಇವರ ಸಾಮಾಜಿಕ ಕಾದಂಬರಿಗಳ ಸ್ತ್ರೀ ಆಧುನಿಕ ಬದುಕಿಗೆ ತಮ್ಮನ್ನು ತೆರೆದುಕೊಂಡಂತಹವರೇ. ಆದರೆ ಕೈಲಾಸಂ ಅವರ ನಾಟಕಗಳಲ್ಲಿನ ಸ್ತ್ರೀ ಇಬ್ಬಂದಿತನಕ್ಕೆ, ದ್ವಂದ್ವಕ್ಕೆ ಸಿಲುಕಿರುವವರು. ಉದಾ: 'ಟೊಳ್ಳುಗಟ್ಟಿ' ನಾಟಕದಲ್ಲಿನ ನಾಗತ್ತೆ ಸಂಪ್ರದಾಯ ತ್ಯಜಿಸದೆ ಆಧುನಿಕತೆಗೆ ಹೊಂದಿಕೊಳ್ಳದೆ ತೊಳಲಾಡುವಂತಹವಳು. ಇಲ್ಲಿನ ಗೌರಿಯ ತಾಯಿ ಆಧುನಿಕತೆ ಮತ್ತು ಶಿಕ್ಷಣದ ವಿರೋಧಿ. ಅವಳಾಡುವ ಮಾತು "ಹೆತ್ತೋರ ಹೊಟ್ಟೆಗೆ ಬೆಂಕಿ ಸುರಿದು ಓದಬೇಕೇನೆ" ಎನ್ನುವ ನುಡಿ.

ಸಿನಿಮಾದ ನಾಯಕನಿಲ್ಲಿ ಆದರ್ಶವಾದಿ.ಕಮ್ಯೂನಿಷ್ಟ್ ಪ್ರಭಾವಕ್ಕೊಳಗಾಗಿದ್ದ ತ.ರಾ.ಸು ಅವರು ಸಮಾನತೆಗೆ ಒತ್ತು ಕೊಟ್ಟಿದ್ದಾರೆ. ನಾಯಕ ಜೈಜಗದೀಶ್ ಹಾಡುವ ಹಾಡೊಂದರ ಧ್ವನಿ ಸಮಾನತೆ ಬಿಂಬಿಸುತ್ತದೆ. "ನಾನೇನು ನೀನೇನು ಅವನೇನು ಒಂದೇ ಅಲ್ಲವೇ, ಬಡಜನರು..." ಹೀಗೆ ಹಾಡು ಮುಂದುವರಿಯುತ್ತದೆ.. ಇಲ್ಲಿ ಬರುವ ಪಾತ್ರಗಳಲ್ಲಿ ಹೆಚ್ಚಿನವು ಸ್ತ್ರೀ ಪಾತ್ರಗಳು. ಸ್ತ್ರೀಯಾದವಳಿಗಿರುವ ಹಠದಸ್ವಭಾವ, ಸಿನಿಕತನ, ಹೊಟ್ಟೆಕಿಚ್ಚು ಮತ್ತು ಅವರ ದಿಟ್ಟತನಗಳನ್ನು ಪ್ರೇಕ್ಷಕರ ಮನಮುಟ್ಟುವಂತೆ ಚಿತ್ರಿಸಿದ್ದಾರೆ.

ಗಾಳಿಮಾತು ಹೆಣ್ಣಿನ ಬದುಕನ್ನು ಕುರಿತಾದ ಯಶಸ್ವಿ ಸಾಂಸಾರಿಕ ಚಿತ್ರವಾಗಿ ಪ್ರೇಕ್ಷಕರ ಮನಗೆದ್ದಿತು. ಒಟ್ಟಾರೆ ಸಿನಿಮಾದ ಆಶಯ ಕುರಿತಂತೆ ಕೆಲವು ಅಂಶಗಳನ್ನು ಗುರುತಿದಬಹುದಾಗಿದೆ ಅವೆಂದರೆ

೧) ಆದರ್ಶವಾದ (ನಾಯಕ ಜೈಜಗದೀಶ್)

೨) ಶ್ರೀಮಂತಿಕೆ ಬದುಕು(ಹಣ ಮುಖ್ಯವೆನ್ನುವ ನಾಯಕನ ತಂದೆ)

೩) ಬಡತನ, ಸಾಂಪ್ರಾದಾಯ ಮತ್ತು ಗಾಂಬೀರ್ಯ(ಗೌರಿ ಪಾತ್ರದಲ್ಲಿ)

೪) ಮತ್ಸರ, ಅಸೂಯೆ ಮತ್ತು ಆತ್ಮ ವಿಮರ್ಶೆ(ಖಳನಾಯಕಿ ಹೇಮಚೌದರಿ)

೫) ನೀರಸವಾಗಿ ಅಂತ್ಯ ಕಾಣುವ ಪಾತ್ರಗಳು (ಗೌರಿ ಮತ್ತು ಕನಕ ಮುಂತಾದ ಪಾತ್ರಗಳು)

ಗಾಳಿಮಾತು ಸಿನಿಮಾದಲ್ಲಿನ ಬಡತನ ಮತ್ತು ಮಸಣದಹೂವು ಸಿನಿಮಾದಲ್ಲಿನ ಬಡತನ ಭಿನ್ನ ರೀತಿಯಲ್ಲಿ ಚಿತ್ರಿಸಲ್ಪಟ್ಟಿದೆ. ಇಲ್ಲಿನ ಸ್ತ್ರೀಯರು ಪ್ರೇಕ್ಷಕರ ನಾಡಿಮಿಡಿತವನ್ನಿಡಿಯುವ ಸ್ತ್ರೀ ಪಾತ್ರಗಳು. ಅವ್ಯಕ್ತ ಪತ್ರವೊಂದು ಗೌರಿಯ ಬದುಕಲ್ಲಿ ದುರಂತವನ್ನು ತಂದೊಡ್ಡುತ್ತದೆ. ಆದರೆ ಆಧುನಿಕತೆ ಪರ, ಆಧುನಿಕ ಶಿಕ್ಷಣ ಪಡೆದು ಬದುಕಲ್ಲಿ ಹೊಸತನ ರೂಢಿಸಿಕೊಳ್ಳಬೇಕೆನ್ನುವ ಹಂಬಲ ಗೌರಿಪಾತ್ರದಲ್ಲಿ ಕಂಡುಬರುತ್ತದೆ. ಸಾಮಾಜಿಕ ಧೋರಣೆ (ಸಂಪ್ರದಾಯ)ಯಲ್ಲಿ ಮಾರ್ಪಾಡು ಕಂಡುಬರುತ್ತದೆ. ಗಾಳಿಮಾತೊಂದು ಹೆಣ್ಣಿನ ಬದುಕಲ್ಲಿ ಏನೆಲ್ಲಾ ಅವಾಂತರಗಳನ್ನು ತಂದೊಡ್ಡುತ್ತದೆ.

ಸಿನಿಮಾದಲ್ಲಿ ಬಳಕೆಯಾಗಿರುವ ತಂತ್ರಗಾರಿಕೆ ತುಂಬಾ ಯಶಸ್ಸು ಪಡೆಯುತ್ತದೆ. ಅವ್ಯಕ್ತ ಪತ್ರವೊಂದು ಸಿನಿಮಾದಲ್ಲಿ ಕೊನೆಯವರೆಗೂ ಕುತೂಹಲ ಭರಿಸುತ್ತದೆ. ಅವ್ಯಕ್ತ ಪತ್ರ ಬರೆದವನ ನಿರೀಕ್ಷೆಯಲ್ಲೇ ಪ್ರೇಕ್ಷಕರಿರುತ್ತಾರೆ. ಪತ್ರ ಬರೆದವನು ಪರದೆಯ ಮೇಲೆ ಎಲ್ಲಿಯೂ ಪ್ರವೇಶವಾಗುವುದಿಲ್ಲ. ಅತಿಯಾದ ಲೈಂಗಿಕ ಮತ್ತು ಪ್ರಣಯದ ದೃಶ್ಯಗಳು ಎಲ್ಲಿಯೂ ಕಂಡುಬರುವುದಿಲ್ಲ. ಉತ್ತಮವಾದ ಸಾಂಸಾರಿಕ ಚಿತ್ರ ಗಾಳಿಮಾತು.

ಒಟ್ಟಾರೆಯಾಗಿ ಸ್ತ್ರೀಯರು ಈ ತರಹದ ಶೋಷಣೆಗಳಿಂದ ವಿಮುಕ್ತಿ ಹೊಂದಬೇಕು ಎನ್ನುವ ನಾಯಕ ಗೌರಿಯನ್ನು ತಿರಸ್ಕರಿಸಿದಾಗ ಅಪ್ಪ ಅಮ್ಮನ ವಿರುದ್ಧ ಸೆಟೆದು ನಿಲ್ಲುತ್ತಾನೆ. ಹೇಮಚೌದರಿ ಮತ್ತು ಲಕ್ಷ್ಮಿ ಉತ್ತಮವಾಗಿ ನಟಿಸಿದ್ದಾರೆ. ಕೊನೆಗೆ ಇಬ್ಬರೂ ಆತ್ಮಹತ್ಯೆಗೆ ಶರಣಾಗುತ್ತಾರೆ. ತ.ರಾ.ಸು. ಅವರ ಸಾಮಾಜಿಕ ಕಾದಂಬರಿಗಳ ಸ್ತ್ರೀಯರೆಲ್ಲರೂ ರೋಚಕತೆಯ ಅಂತಿಮ ಹಂತವನ್ನು ತಲುಪಿ ನೀರಸವಾಗಿ ಅಂತ್ಯವನ್ನು ಕಾಣುತ್ತಾರೆ. ಇದು ತ.ರಾ.ಸು. ಅವರ ಸ್ತ್ರೀಪಾತ್ರಗಳ ದೌರ್ಬಲ್ಯ.

ಸಿನಿಮಾದ ಮೂಲಕ ಪ್ರೇಕ್ಷಕರಿಗೆ ತಲುಪುವ ಸಂದೇಶವೆಂದರೆ "ಅಸೂಯೆ ಅಂತ್ಯಕ್ಕೆ ನಾಂದಿ, ಸುಳ್ಳು ಸರ್ವನಾಶಕ್ಕೆ ನಾಂದಿ".

**ಮಸಣದಹೂವು :**

ಪುಟ್ಟಣ್ಣ ಕಣಗಾಲ್ ನಿರ್ದೇಶಿಸಿರುವ ಕೊನೆಯ ಸಿನಿಮಾವಿದು. ಸಿನಿಮಾದ ವಸ್ತು ವೇಶ್ಯಾಸಮಸ್ಯೆ. ತ.ರಾ.ಸು. ಅವರ 'ಮಸಣದಹೂವು' ಕಾದಂಬರಿಯಾಧರಿತ ಸಿನಿಮಾ. ಹಿರಿಯ ಮತ್ತು ವೇಶ್ಯಾಗೃಹದ ಮಾಲಿಕ ಪಾತ್ರದಲ್ಲಿ ಹಿರಿಯ ನಟಿ ಜಯಂತಿ ನಟಿಸಿದ್ದರೆ, ನಾಯಕ

ಪಾತ್ರದಲ್ಲಿ ಅಂಬರೀಶ್ ಕಾಣಿಸಿಕೊಳ್ಳುತ್ತಾರೆ. ವೇಶ್ಯಾಗೃಹದ ಮಾಲಿಕಳಾಗಿ ಜಯಂತಿ ಹಾಗೂ ಇಲ್ಲಿಗೆ ಗಿರಾಕಿಗಳನ್ನು ಹುಡುಕಿ ತರುವ ಕೆಲಸ ಸಿಂಗಾರವಿನದು(ಅಂಬರೀಶ್).

ಸಿನಿಮಾದುದ್ದಕ್ಕೂ ಈ ವೇಶ್ಯಾ ವೃತ್ತಿಗಿಳಿಯಲು ಕಾರಣವಾಗುವ ಅಂಶವೆಂದರೆ ಹಣಗಳಿಕೆ. ಪುರುಷನಿರಲಿ, ಸ್ತ್ರೀಯಿರಲಿ, ಕಿತ್ತುತಿನ್ನುವ ಬಡತನ ಒಂದೆಡೆಯಾದರೆ, ನರಸಿಂಹರೆಡ್ಡಿಯಂತಹ ಯುವಕರು ಸುಂದರ ಹೆಣ್ಣುಗಳನ್ನು ತಂದು ಹಣಕ್ಕಾಗಿ ವೇಶ್ಯಾಗೃಹಗಳಿಗೆ ಮಾರಾಟ ಮಾಡುವುದು ಹಣಗಳಿಸುವುದಕ್ಕಾಗಿಯೇ.

ಇಲ್ಲಿ ಗಂಭೀರವಾಗಿ ಪರಿಗಣಿಸಬಹುದಾದ ಅಂಶಗಳೆಂದರೆ

೧) ಹಸಿವು

೨) ಅಂತಸ್ತು

೩) ವಯಸ್ಸು ಮತ್ತು ಸಂಪಾದನೆ

ಸಿನಿಮಾದ ಉದ್ದೇಶ (ಆಶಯ) ನಮ್ಮ ಸಮಾಜವನ್ನು ಅರ್ಬುದರೋಗದಂತೆ ಕಾಡುವ ವೇಶ್ಯಾಸಮಸ್ಯೆಯನ್ನು ಹೋಗಲಾಡಿಸಬೇಕೆನ್ನುವುದು. ಇಂತಹ ಸಮಸ್ಯೆಗಳಿಗಿರುವ ಕಾರಣ ಮತ್ತು ಸಮಾಜದ ಮೇಲೆ ಅವು ಬೀರುವ ಪರಿಣಾಮವನ್ನು ಪರದೆಮೇಲೆ ತೋರಿಸುವುದರ ಮೂಲಕ ಪ್ರೇಕ್ಷಕರ ಮನಸ್ಸಿನಲ್ಲಿ ಪರಿವರ್ತನೆಯನ್ನುಂಟುಮಾಡುವುದೇ ಆಗಿದೆ. ವೇಶ್ಯಾವೃತ್ತಿಯಲ್ಲಿ ತೊಡಗಿಸಿಕೊಂಡಿರುವ ಸ್ತ್ರೀಯರಲ್ಲಿ ಬಹಳಷ್ಟು ಸ್ತ್ರೀಯರು ಬಡತನಕ್ಕೆ ಸಿಲುಕಿದವರೇ. ನಾಯಕ ಸಿಂಗಾರುವೂ ಸೇರಿದಂತೆ. ಮನೆಬಾಡಿಗೆ ಕಟ್ಟುವುದು, ತಾಯಿಯ ಪಾಲನೆ ಪೋಷಣೆಯೂ ಅವನದೇ ಆಗಿರುತ್ತದೆ. ತಾನೂ ಪಡೆದಿರುವ ಪದವಿಗೆ ಎಲ್ಲಿಯೂ ನೌಕರಿ ದೊರೆಯುವುದಿಲ್ಲ. ಹಾಗಾಗಿ ವೇಶ್ಯಾಸ್ತ್ರೀಯರನ್ನು ಕಾಡುವ ಹಸಿವು ಸಿಂಗಾರುವನ್ನು ಕಾಡುತ್ತಿತ್ತು. ಬದುಕಲ್ಲಿ ತುಂಬಾ ಹತಾಶನಾಗಿ, ಆತ್ಮಹತ್ಯೆ ಮಾಡಿಕೊಳ್ಳುವ ಹಂತಕ್ಕೂ ಯೋಚಿಸಿ ಕೊನೆಗೆ ಈ ವೃತ್ತಿಗಿಳಿಯುತ್ತಾನೆ.

ಪ್ರತಿಷ್ಠೆಗಾಗಿಯೋ, ಮೋಜಿಗಾಗಿಯೋ ಈ ವೃತ್ತಿಗಿಳಿಯುವವರೂ ಉಂಟೆಂಬುದಕ್ಕೆ ಸಿನಿಮಾದಲ್ಲಿ ವೇಶ್ಯಾಗೃಹಕ್ಕೆ ಬರುವ ಸರ್ಕಾರಿ ನೌಕರರು ಒಂದು ಕಡೆಯಾದರೆ, ರಾಜಕಾರಣಿಗಳೂ ಮತ್ತೊಂದುಕಡೆ, ಪೋಲೀಸ್ ಅಧಿಕಾರಿಗಳೂ ಹೀಗೆ ಉನ್ನತ ಅಧಿಕಾರಿಗಳೆಲ್ಲ, ಮಂತ್ರಿಮಹೋದಯರೆ ವೇಶ್ಯಾವೃತ್ತಿ ಮಾಲಿಕಳ (ಜಯಂತಿ) ಸಖ್ಯವನ್ನು ಬೆಳೆಸಿರುವವರೇ. ಕಾನೂನಿನ ದೃಷ್ಟಿಯಲ್ಲಿ ರಕ್ಷಣೆ ಕೊಡಬೇಕಾದವರು ಭಕ್ಷಕರಾಗಿರುವುದನ್ನು ಪ್ರೇಕ್ಷಕರ ಕಣ್ಣಿಗೆ ಕಟ್ಟುವಂತೆ ಪರದೆ ಮೇಲೆ ತರಲಾಗಿದೆ. ಪ್ರಜಾಪ್ರಭುತ್ವದಲ್ಲಿ ಕಾನೂನಿನ ಸಡಿಲಿಕೆಯನ್ನು, ಬಿಗಿಯಾದ ಕ್ರಮವನ್ನು ಅನುಸರಿಸದೇ ಇರುವುದನ್ನು ಚಿತ್ರಿಸಲಾಗಿದೆ. ಮತ್ತೊಂದೆಡೆ ಈ ವೃತ್ತಿಗಿಳಿಯಲು ಹಣಸಂಪಾದನೆ ಒಂದೆಡೆಯಾದರೆ ಅವರ ವಯಸ್ಸೂ ಮತ್ತೋಂದು ರೀತಿಯಲ್ಲಿ

ಕಾರಣವೆನ್ನಬಹುದು. ಇಲ್ಲಿನ ಸಂಭಾಷಣೆ ಗಮನಿಸಿದಾಗ "ಪ್ರಾಯಕಳೆದ ಹೆಣ್ಣು, ಕೊಳೆತುಹೋದ ಹಣ್ಣು ಎರಡೂ ಒಂದೇ" ಎಂದು ವೇಶ್ಯಾಗೃಹದ ಮಾಲಿಕಳು ಅಲ್ಲಿನ ವೇಶ್ಯೆಯರಿಗೆ ಹೇಳುವ ಮಾತು. ವಯಸ್ಸಿರುವ ಯುವತಿಯರು, ಕಾಲೇಜು ಹುಡುಗಿಯರು ಕುತೂಹಲದಿಂದಲೂ, ಹಣದಾಸೆಯಿಂದಲೂ ಈ ಮಾಯಾಜಾಲಕ್ಕೆ ಸಿಲುಕುತ್ತಾರೆ.

ಹಣ ಮತ್ತು ಅಂತಸ್ತು ಹೆಚ್ಚಿದಂತೆಲ್ಲಾ ಮನುಷ್ಯ ಮೋಜಿಗಾಗಿ ಈ ವೇಶ್ಯಾ ಸಹವಾಸಕ್ಕೆ ತೊಡಗಿಸಿಕೊಳ್ಳುತ್ತಾನೆ. ರಾಜಕಾರಣಿಗಳು, ಮಂತ್ರಿಗಳು, ಸರ್ಕಾರಿ ನೌಕರರು, ಶಿಕ್ಷಕರಾದಿಯಾಗಿ ಈ ವೃತ್ತಿಗಿಳಿಯುವುದು ಮೋಜಿಗಾಗಿ. ಸಿಂಗಾರು ರಾಜಕಾರಣಿಯ ಮನೆಗೆ ಪಾರ್ವತಿಯನ್ನು ಕರೆದುಕೊಂಡು ಹೋಗುವುದು. ಅಂದರೆ ಈ ಕಸುಬಿಗೆ ಗಂಡಸರೆ (ಪುರುಷ ಸಮಾಜವೇ) ಕಾರಣ. ವೇಶ್ಯೆಯಾದರೂ ಅವಳಲ್ಲಿ ಮಾನವೀಯತೆ, ಅನುಕಂಪ ಇವೆಯೆಂಬುದು ಸಿನಿಮಾದಲ್ಲಿ ಕಂಡುಬರುತ್ತದೆ. ತನ್ನ ಮಗಳನ್ನು ಹುಡುಕಿಕೊಂಡು ಬಂದ ವ್ಯಕ್ತಿಯೊಬ್ಬನಿಗೆ ಅಲ್ಲಿರುವ ಎಲ್ಲ ಹೆಣ್ಣುಗಳನ್ನು ತೋರಿಸಿದಾಗ ಆತ ಯಾರನ್ನೂ ಒಪ್ಪುವುದಿಲ್ಲ. ಕೊನೆಗೆ ಸಿಂಗಾರು ಆತನಿಗೆ ಹಿಯ್ಯಾಳಿಸಿ ಮಾತನಾಡುತ್ತಾನೆ. ಆ ವ್ಯಕ್ತಿ ವಾಪಸ್ಸು ಹೋಗಲು ಅನುವಾದಾಗ ವೇಶ್ಯಾಗೃಹದ ಮಾಲೀಕಳೇ (ಜಯಂತಿ) ಬಂದು ಇಲ್ಲಿಗೆ ಬಂದವರು ಯಾರೂ ವಾಪಸ್ಸು ಹಾಗೆಯೇ ಹೋಗಬಾರದೆಂದಾಗ, ನಾನು ಬಂದಿರುವುದು ಅದಕ್ಕಲ್ಲಮ್ಮ ನನ್ನ ಮಗಳನ್ನು ಹುಡುಕಿಕೊಂಡು ಬಂದೆನೆಂದಾಗ, ಆ ಮಾಲಿಕಳು ಭಾವುಕಳಾಗಿ ಕಣ್ಣೀರು ಹಾಕುತ್ತಾ "ಇಲ್ಲಿಗೆ ಬರುವ ಯಾರೊಬ್ಬರಿಂದಲೂ ಈ ತರಹದ ಮಾತುಗಳು ಕೇಳುವುದಿಲ್ಲ, ಇಲ್ಲಿ ಅಮ್ಮ, ತಾಯಿ, ಮಗಳು ಎನ್ನುವ ಮಾತುಗಳನ್ನು ಕೇಳಿಯೇ ಇಲ್ಲ"ವೆಂದು ಕಣ್ಣೀರು ಹಾಕುತ್ತಾಳೆ. ಇದನ್ನು ಕೇಳಿಸಿಕೊಂಡ ಸಿಂಗಾರು ಆತನ ಮಗಳನ್ನು ಹುಡುಕಿ ಕರೆದುಕೊಂಡು ಹೋಗಿ ಆತನಿಗೊಪ್ಪಿಸುತ್ತಾನೆ.

ವೇಶ್ಯಾಗೃಹದಿಂದ ಪಾರ್ವತಿಯನ್ನು ಪಾರುಮಾಡಿ ಅವಳ ಇಚ್ಚೆಯಂತೆ ನಾಗನಿಗೆ ಒಪ್ಪಿಸಿದಾಗ ನಾಗ ಪಾರ್ವತಿಯನ್ನು ತಿರಸ್ಕರಿಸುತ್ತಾನೆ. ನೀನು "ಮಸಣದ ಹೂವು" ಆ ಹೂವು ದೇವರ ಮುಡಿಗೇರುವುದಿಲ್ಲವೆಂದು ಪಾರ್ವತಿಯನ್ನು ತಿರಸ್ಕರಿಸುತ್ತಾನೆ. ಪಾರ್ವತಿ ಕೊನೆಗೆ ಕಡಲಿಗೆ ಬಿದ್ದು ಸಾವನ್ನಪ್ಪುತ್ತಾಳೆ. ನಾಗ ಮತ್ತು ಪಾರ್ವತಿ ಪ್ರೀತಿ ಕಡಲ ನೀರಲ್ಲಿ ಕೊಚ್ಚಿ ಹೋಗುತ್ತದೆ. ಅನಂತರ ಸಿಂಗಾರು ಹಾಡುವ ಹಾಡು "ಮಸಣದಹೂವೆಂದು ನೀನೇಕೆ ಕೊರಗುವೆ, ಮಸಣದ ವಾಸಿಯು ಮಹಾದೇವನಲ್ಲವೆ... ಪಾರ್ವತೀ..." ಹೀಗೆ ಅವಳ ನೆನಪು ಈತನನ್ನು ಕಾಡುತ್ತದೆ. ಹೂವನ್ನು ಎಲ್ಲರೂ ಮುಟ್ಟಲು, ಮುಡಿಯಲು ಮುಂದೆ ಬರುತ್ತಾರೆ. ಆದರೆ ಅದು ಸ್ಮಶಾನದಲ್ಲಿ ಅರಳಿದ ಹೂವಾದರೆ ಯಾರಿಗೂ ಬೇಡ, ಇದು "ಮಸಣದಹೂವು" ಶೀರ್ಷಿಕೆ ಔಚಿತ್ಯ. ಈ ರೀತಿ ವೇಶ್ಯೆಯಾದವಳ ಬದುಕು ನರಕಯಾತನೆಯಾಗಿರುತ್ತದೆ.

ವೇಶ್ಯಾವೃತ್ತಿಯ ಮಾಲಿಕಳಾದರೂ(ಜಯಂತಿ) ಹೇಮಾಚೌದರಿಯಂತಹ ಸುಂದರ ಹೆಣ್ಣು ಸಹಾಯ ಯಾಚಿಸಿ ಬಂದಾಗ ಈ ಕೂಪಕ್ಕೆ ತಳ್ಳದೆ ನಾಟ್ಯಶಾಲೆ ಆರಂಭಿಸುವುದಕ್ಕೆ ಸಹಾಯ

ಮಾಡುತ್ತಾಳೆ. "ಕಾಮದಾಹ, ಹಣದಾಹ, ಬಡತನ ಇರೂವವರೆಗೂ ನಾನೂ ಸಾಯುವುದಿಲ್ಲ, ನಾನು ಉಳಿದು ಬೆಳೆಯುತ್ತಿರುತ್ತೇನೆ" ಎಂದು ಸಿನಿಮಾದಲ್ಲಿ ಧ್ವನಿಸುವ ಮಾತು ಈ ವೇಶ್ಯಾಸಮಸ್ಯೆ ಇಂದು ನೆನ್ನೆಯದಲ್ಲ ಪ್ರಾಚೀನ ದಿನಗಳಿಂದಲೂ, ರಾಜ ಮಹಾರಾಜರ ಕಾಲದಿಂದಲೂ ನಿರಂತರವಾಗಿ ನಡೆಯುತ್ತಲೇ ಬಂದಿದೆ.

ಇಲ್ಲಿನ ಪಾತ್ರಗಳಲ್ಲಿ ಹೆಚ್ಚಿನವು ಸ್ತ್ರೀಪಾತ್ರಗಳು. ಸಂಭಾಷಣೆ, ಪಾತ್ರಗಳು ಮಾತನಾಡುವ ಭಾಷೆ ಸರಳವಾದ ಸ್ಪಷ್ಟವಾದ ಮಾತುಗಳಿಂದ ಕೂಡಿದೆ. ಪುಟ್ಟಣ್ಣ ಕಣಗಾಲ್ ಅವರು ನಿರ್ದೇಶಿಸಿದ ಕೊನೆಯ ಸಿನಿಮಾವಿದು.

ನಮ್ಮ ಸಮಾಜವನ್ನು ಎಡಬಿಡದೆ ಕಾಡುವ ಸಾಮಾಜಿಕ ಸಮಸ್ಯೆಯಾದ ವೇಶ್ಯಾ ವೃತ್ತಿಯಂತಹ ಅನಿಷ್ಟ ಪದ್ಧತಿಯ ಮೇಲೆ ಬೆಳಕನ್ನು ಚೆಲ್ಲುವ ಉದ್ದೇಶದಿಂದ ನಿರ್ಮಿಸಲ್ಪಟ್ಟ ಈ ಸಿನಿಮಾ ಉತ್ತಮ ಚಲನಚಿತ್ರವೆಂದು ಜನಮನ್ನಣೆಗಳಿಸುವುದರ ಜೊತೆಗೆ ಸರ್ಕಾರದ ಕಣ್ಣನ್ನು ತೆರೆಸುತ್ತದೆ. ರಾಜ್ಯಸರ್ಕಾರದಿಂದ ಉತ್ತಮ ಚಲನಚಿತ್ರ ಪ್ರಶಸ್ತಿಯನ್ನೂ ಪಡೆಯುತ್ತದೆ. ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳಲ್ಲಿ ಅದರಲ್ಲೂ ಸ್ತ್ರೀ ಸಂವೇದನೆಗೆ ಸಂಬಂಧಿಸಿದ ಉತ್ತಮವಾದ ಕಾದಂಬರಿ ಬೆಳ್ಳಿ ತೆರೆಯ ಮೇಲೆ ಯಶಸ್ಸನ್ನೂ ಪಡೆಯುತ್ತದೆ.

**ನಾಗರಹಾವು :** ತ.ರಾ.ಸು ಅವರು ಸಾಮಾಜಿಕ ಸಮಸ್ಯೆಗಳನ್ನೊಳಗೊಂಡ ಕಾದಂಬರಿ ಮಾಲೆಗಳನ್ನು ರಚಿಸಿದ್ದಾರೆ. 'ನಾಗರ ಹಾವು', 'ಸರ್ಪಮತ್ಸರ, 'ಒಂದು ಗಂಡು ಎರಡು ಹೆಣ್ಣು' ಕಾದಂಬರಿಮಾಲೆಯನ್ನಾಧರಿಸಿ ನಿರ್ದೇಶಿಸಿದ ಸಿನಿಮಾ ನಾಗರಹಾವು. ಸಿನಿಮಾದ ನಿರ್ದೇಶಕರು ಪುಟ್ಟಣ್ಣ ಕಣಗಾಲ್ ಅವರು.

ಸಿನಿಮಾದ ಕೇಂದ್ರ ಪಾತ್ರ ರಾಮಚಾರಿಯದು. ಮೂರು ಕಾದಂಬರಿಗಳಲ್ಲೂ ಪ್ರಧಾನವಾದ ಪಾತ್ರ ರಾಮಚಾರಿ ಹಾಗೂ ಇವನ ಸುತ್ತಲೂ ಸುತ್ತುವ ಎರೆಡು ಹೆಣ್ಣು ಪಾತ್ರಗಳು. ದುರ್ಗದ ಜನತೆಯ ಬಾಯಲ್ಲಿ ಕೆಟ್ಟವ್ಯಕ್ತಿಯಾಗಿದ್ದ ರಾಮಾಚಾರಿ ಚಾಮಯ್ಯ ಮೇಷ್ಟ್ರೀಗೆ ಅಚ್ಚುಮೆಚ್ಚಿನ ಶಿಷ್ಯ. ಅವರ ಮಾತನ್ನು ನಡೆಸಿಕೊಡುವ ಅವರಿಗೆ ಮಾತ್ರ ಬೆಲೆಕೊಡುವ ರಾಮಾಚಾರಿ ಕಾಲೇಜಿನಲ್ಲಿಯೂ ತುಂಬಾ ತುಂಟನಂತೆ ನಡೆದು ಕೊಳ್ಳುತ್ತಾನೆ. ಕಾಲೇಜಿಗೆ ಬರುವ ಹುಡುಗಿಯರನ್ನು ಯಾರಾದರು ಕೆಣಕಿದರೆ ಕೆರಳುವ ರಾಮಾಚಾರಿ.

ಹಠ, ರೋಷ, ಕೆಚ್ಚನ್ನು ಚಿಕ್ಕಂದಿನಿಂದಲೂ ರಾಮಾಚಾರಿ ಮೈಗೂಡಿಸಿಕೊಂಡಿದ್ದಾನೆ. ರಾಮಾಚಾರಿ ಒರಟನಾಗಿದ್ದರೂ, ಅವನ ತಲೆಗೆ ವಿದ್ಯೆ ಹತ್ತದಿದ್ದರೂ ಅನ್ಯಾಯವನ್ನು ಕಂಡಾಗ ಸಿಡಿದೇಳುವ ಸ್ವಭಾವದವನು. ಜಲೀಲಿನ ಕಾಟದಿಂದ (ಕೀಟಲೆ) ಅಲುಮೇಲುವನ್ನು ಪಾರುಮಾಡಿದ ರಾಮಚಾರಿ ಆಕೆಯನ್ನು ಪ್ರೀತಿಸುತ್ತಾನೆ ಅವಳ ಅಣ್ಣ ವರದನ ಮಾತನ್ನು ನಂಬಿ. ಆದರೆ ಅಲುಮೇಲುವಿನ ಅಪ್ಪ ಅಮ್ಮ ಒಪ್ಪದಿದ್ದಾಗ ಚಾಮಯ್ಯ ಮೇಷ್ಟ್ರು ರಾಮಚಾರಿಗೆ

ಮನವೊಲಿಸಿ ಅಲುಮೇಲುವಿನಿಂದ ದೂರ ಉಳಿಯುವಂತೆ ಮಾಡಿ, ರಾಮಚಾರಿಯೇ ಮುಂದೆ ನಿಂತು ಅಲುಮೇಲುವಿನ ವಿವಾಹ ನಡೆಸಿಕೊಡುತ್ತಾನೆ. ಆದರೆ ಒಲ್ಲದ ಮನಸ್ಸಿನಿಂದ ಅಲುಮೇಲು ಹಿರಿಯರ ಅಣತಿಯಂತೆ ಮದುವೆಗೊಪ್ಪುತ್ತಾಳೆ. ಆದರೆ ಅವಳ ಬದುಕು ನರಕವಾಗುತ್ತದೆ.

ಅನಂತರ ಹೊಸದಾಗಿ ಕಾಲೇಜಿಗೆ ಬಂದ ಮಾರ್ಗರೇಟಳನ್ನು ಪ್ರೀತಿಸುತ್ತಾನೆ. ಕಾಲೇಜಿನಲ್ಲಿ ಮಾರ್ಗರೇಟ್ ರಾಮಚಾರಿಯನ್ನು ಕೆಂಪು ಗೆರಿಲ್ಲಾವೆಂದು ಕರೆದು ಅವನ ಕೋಪಕ್ಕೆ ಗುರಿಯಾಗಿ ಅನಂತರ ಅವನನ್ನೇ ಪ್ರೀತಿಸುತ್ತಾಳೆ. ಮದವೆ ಮಾಡಿಕೊಳ್ಳಲು ಮನೆಯವರು ಅಡ್ಡಿ ಪಡಿಸುತ್ತಾರೆ. ಇವರಿಬ್ಬರ ಮುದುವೆಗೆ ಅಡ್ಡ ಬರುವ ಅಂಶ ಧರ್ಮ. ಮಾರ್ಗರೇಟ್ ಕ್ರೈಸ್ತಧರ್ಮದ ಹುಡುಗಿ ಸಂಪ್ರದಾಯ ಕುಟುಂಬದ ರಾಮಚಾರಿಯ ಅಪ್ಪ ಅಮ್ಮ ಈ ಮದುವೆಗೆ ಒಪ್ಪುವುದಿಲ್ಲ. ಅಲುಮೇಲುವಿನಿಂದ ದೂರವಾದ ರಾಮಚಾರಿ ಮಾರ್ಗರೇಟ್‌ಳನ್ನು ತನ್ನಿಂದ ದೂರಮಾಡುವುದಿಲ್ಲ.

ಅಲುಮೇಲು ಮತ್ತು ಮಾರ್ಗರೇಟ್‌ಳ ಪ್ರೀತಿಗೆ ಸಿಲುಕಿದ ರಾಮಾಚಾರಿ ತುಂಬಾ ದ್ವಂದ್ವಕ್ಕೆ ಸಿಲುಕಿ ಮಾರ್ಗರೇಟ್‌ಳ ಕೈ ಹಿಡಿಯುತ್ತಾನೆ. ಕ್ರೈಸ್ತಧರ್ಮದ ಕುಟುಂಬವೊಂದು, ಅನಂತರ ಸಂಪ್ರದಾಯದ ಕುಟುಂಬಗಳೆರೆಡು ಹಾಗೂ ಚಾಮಯ್ಯಮೇಷ್ಟ್ರು ಮತ್ತು ಅವರ ಹೆಂಡತಿ ತುಂಗಮ್ಮ ಹಾಗೂ ಜಲೀಲ ಪ್ರಮುಖವಾದ ಪಾತ್ರಗಳು.

ಇಡೀ ದುರ್ಗದ ಜನತೆ ರಾಮಾಚಾರಿಯನ್ನು ಶಪಿಸಿದರೆ ಚಾಮಯ್ಯಮೇಷ್ಟ್ರ ರಾಮಾಚಾರಿಯನ್ನು ಆ ಜನತೆಯ ಮುಂದೆ ಸಮರ್ಥಿಸಿಕೊಳ್ಳುತ್ತಾರೆ. ಆರಂಭದಿಂದ ಕೊನೆಯ ತನಕ ರಾಮಾಚಾರಿ ತನ್ನ ಸಿಟ್ಟು ರೊಚ್ಚನ್ನೇ ಪ್ರದರ್ಶಿಸುತ್ತಾನೆ.

ಸಿನಿಮಾ ತಿರುವನ್ನು ಪಡೆದುಕೊಳ್ಳುವುದು ಅರ್ಧದಿಂದ. ಅಲುವೇಲುವಿನ ಮದುವೆಯಾದ ಅನಂತರ ಸಿನಿಮಾ ಸ್ತ್ರೀಸಂವೇದನೆಗೆ ಹೆಚ್ಚಿನ ಒತ್ತುಕೊಡುತ್ತದೆ. ರಾಮಾಚಾರಿಯಿಂದ ದೂರವಾದ ಅಲುವೇಲು ಮದುವೆಯಾಗಿ ತನ್ನ ಪತಿಯ ಹಣದ ದಾಹ ನೀಗಿಸಲು ವೇಶ್ಯಾಗೃಹಕ್ಕೆ ತಳ್ಳಲ್ಪಡುತ್ತಾಳೆ. ಆಕಸ್ಮಾತ್ತಾಗಿ ರಾಮಾಚಾರಿಯನ್ನು ಬೇಟಿಯಾಗುವ ಸಂದರ್ಭ ಒದಗಿ ಬಂದಾಗ ತನ್ನ ಬದುಕಿನ ಕತೆಯನ್ನು ರಾಮಾಚಾರಿಗೆ ಒಂದು ಹಾಡಿನ ಮೂಲಕ ವಿವರಿಸುತ್ತಾಳೆ. "ಕತೆ ಹೇಳುವೆ ನನ್ನ ಕತೆಹೇಳುವೆ.......... ನೀ ತಂದ ಅರಿಶಿನ ಕುಂಕುಮದ ಕಾಣಿಕೆ ........... ಅಪರಾತ್ರಿ ಮೀರಿಲ್ಲ, ಹಣದಾಹ ನೀಗಿಲ್ಲ" ಈ ರೀತಿ ಹಾಡು ಮುಂದುವರಿಯುತ್ತದೆ. ಅಲುಮೇಲುವನ್ನು ಬದುಕಿನ ಕತೆ ಕೇಳಿದ ರಾಮಾಚಾರಿ ಅಲುವೇಲನ್ನು ವಾಪಸ್ಸು ದುರ್ಗಕ್ಕೆ ಕರೆಯುತ್ತಾನೆ. ಅಲುಮೇಲು ತನ್ನ ಗಂಡನ ಹಣದ ದಾಹ ನೀಗಿಸಬೇಕು. "ಈ ಆಳು ಯೌವ್ವನ ಇರುವ ತನಕ ನನ್ನನ್ನು ನನ್ನ ಗಂಡ ಮಾರುತ್ತಾನೆ. ಆಮೇಲೆ ನನಗೆ ದುರ್ಗವೇ ಗತಿ"ಯೆನ್ನುತ್ತಾಳೆ. ಈ ರೀತಿ ಅಲುಮೇಲು ತನ್ನ ಯೌವ್ವನ ಮತ್ತು ಸೌಂದರ್ಯವೇ ನನ್ನ ಬದುಕಿಗೆ ಮುಳುವಾಯಿತಲ್ಲ ಎಂದು ದುಃಖಿಸುತ್ತಾಳೆ.

ತ.ರಾ.ಸು. ಅವರ ಸಾಮಾಜಿಕ ಕಾದಂಬರಿಗಳಲ್ಲಿ ಮುಖ್ಯವಾಗಿ ಬಿಂಬಿಸಲ್ಪಟ್ಟಿರುವ ವಿಷಯಗಳೆಂದರೆ ಹಣ, ಜಾತಿ,ಧರ್ಮ, ಸಂಪ್ರದಾಯ, ಆಧುನಿಕತೆ, ಬ್ರಾಹ್ಮಣದಂತಹ ವಿಷಯಗಳು. ಮತ್ತು ಇಲ್ಲಿನ ಕೇಂದ್ರಪಾತ್ರಗಳೆಲ್ಲಾ ಸ್ತ್ರೀಯರೆ. ರಾಮಾಚಾರಿ ಮಾರ್ಗರೇಟಳನ್ನು ಪ್ರೀತಿಸಿ ವಿವಾಹ ಮಾಡಿಕೊಳ್ಳುತ್ತೇನೆಂದಾಗ ಅವನ ತಾಯಿ ಸೋನಬಾಯಿ ಹಾಗೂ ತಾಯಿಗಿಂತಲೂ ಹೆಚ್ಚಾಗಿ ಗೌರವಿಸುವ ಚಾಮಯ್ಯ ಮೇಷ್ಟ್ರ ಹೆಂಡತಿ ತುಂಗಮ್ಮ ಕೂಡ ಈ ಮದುವೆ ವಿರೋಧಿಸುತ್ತಾರೆ. "ಹೆತ್ತ ತಾಯಿಗಿಂತ ನಿನಗೆ ಈ ಕ್ರಿಶ್ಚಿಯನ್ ಹುಡುಗಿ ಹೆಚ್ಚೇನು"ಎಂದು ಸೋನಾಬಾಯಿ ಮಗನಿಗೆ ಕೇಳುತ್ತಾಳೆ. ಅನಂತರ ಅವನ ತಂದೆ "ನಾನು ಕ್ರಿಶ್ಚಿಯನ್ ಹುಡುಗಿ ಮಾವನಾಗಬೇಕೇ"ಎಂದು ಪ್ರಶ್ನಿಸುತ್ತಾನೆ. ಅನಂತರ "ನಮ್ಮ ಜಾತಿಯನ್ನು ಉಳಿಸಿ ಮೇಷ್ಟ್ರೆ"ಎಂದು ಚಾಮಯ್ಯ ಮೇಷ್ಟ್ರಿಗೆ ಕೇಳಿದಾಗ, ಇಲ್ಲಿ ಜಾತಿ, ಧರ್ಮದ ಪ್ರಶ್ನೆ ಎದುರಾಗುತ್ತವೆ. ಬ್ರಾಹ್ಮಣ ಜಾತಿ ಉಳಿಯಬೇಕೆಂಬ ನಂಬಿಕೆ. ಈ ರೀತಿ ಸಾಮಾಜಿಕವಾಗಿ ಬಹುಮುಖ್ಯವಾಗಿ ಚರ್ಚಿತವಾಗುವ ಜಾತಿ ಮತ್ತು ಧರ್ಮದಂತಹ ವಿಷಯಗಳು ನಮ್ಮ ಸಮಾಜವನ್ನು ಮೊದಲಿನಿಂದಲೂ ಕಾಡುತ್ತವೆಯೆಂಬುದು. ಮಾರ್ಗರೇಟ್‌ಳ ಮದುವೆ ವಿಷಯದಲ್ಲೂ ಅವಳ ತಾಯಿ ನಡೆದುಕೊಳ್ಳುವ ರೀತಿ ಮಗಳ ಸುಖಕ್ಕಿಂತ ಅವಳಿಗೆ ಹಣವೇ ಮುಖ್ಯವಾಗುತ್ತದೆ. ರಾಮಾಚಾರಿ ಬಡತನದಲ್ಲಿರುವ ವಿದ್ಯೆ ತಲೆಗೆ ಹತ್ತದ ದಡ್ಡ. ಸಿನಿಮಾದಲ್ಲಿ ವೈಚಾರಿಕವಾಗಿ ಆಲೋಚಿಸಿ ಪ್ರೇಕ್ಷಕರ ಮೆಚ್ಚುಗೆ ಗಳಿಸುವಂತಹ ಪಾತ್ರವೆಂದರೆ ಚಾಮಯ್ಯ ಮೇಷ್ಟ್ರು. ಆದರೆ ಮೇಷ್ಟ್ರು ಅಲುವೇಲುವಿನ ಅಪ್ಪ, ಅಮ್ಮ, ಮಾರ್ಗರೇಟ್‌ಳ ತಾಯಿ, ರಾಮಾಚಾರಿಯ ಅಪ್ಪ, ಅಮ್ಮ, ಎಲ್ಲರನ್ನೂ ಸಮಾಧಾನಪಡಿಸುವುದಕ್ಕಾಗಿ ರಾಮಾಚಾರಿಯನ್ನು ಅಲುವೇಲುವಿನಿಂದ ದೂರಮಾಡುತ್ತಾರೆ. ಅನಂತರ ಮಾರ್ಗರೇಟ್‌ಳನ್ನು ಮರೆಯುವಂತೆ ಮನವೊಲಿಸುವ ಪ್ರಯತ್ನ ಮಾಡುತ್ತಲೇ ಅಂತ್ಯವನ್ನು ಕಾಣುತ್ತಾರೆ.

ಮಾರ್ಗರೇಟ್‌ಳನ್ನು ಬಿಡುವಂತೆ ಚಾಮಯ್ಯಮೇಷ್ಟ್ರು ರಾಮಾಚಾರಿಗೆ ಹೇಳಿದಾಗ ರಾಮಾಚಾರಿ ಒಪ್ಪುವುದಿಲ್ಲ.ನಾಗರಹಾವಿನಂತೆ ಸಿಡಿದೇಳುತ್ತಾನೆ. ಚಾಮಯ್ಯ ಮೇಷ್ಟ್ರಿಗಾಗಿ ರಾಮಾಚಾರಿ ಏನುಬೇಕಾದರೂ ಮಾಡಲು ಮುಂದೆ ಬರುತ್ತಾನೆ. ನಿಮ್ಮ ಕೈಯಿಂದ ವಿಷವನ್ನು ಕೊಟ್ಟರೂ ಕುಡಿಯುವೆನೆನ್ನುತ್ತಾನೆ. ಚಾಮಯ್ಯ ಮೇಷ್ಟ್ರು ರಾಮಾಚಾರಿಗೆ ಹೇಳುವ ಮಾತು "ಜಗತ್ತಿನಲ್ಲಿ ಏನೇ ಕಷ್ಟ ಬಂದರೂ ಎಷ್ಟೇ ದುಃಖವಾದರೂ ಇನ್ನೊಬ್ಬರ ಸುಖ ಬಯಸುವವನೇ ದೊಡ್ಡ ಮನುಷ್ಯ"ನೆಂದು ಹೇಳಿದರೆ ಮೇಷ್ಟ್ರೆ ಅಲುವೇಲು ಸೂಳೆಯಾಗುವುದಕ್ಕೆ ನೀವೆ ಕಾರಣವೆನ್ನುತ್ತಾನೆ. "ಮೇಷ್ಟ್ರೆ, ಮೇಷ್ಟ್ರೆ ನಿಮ್ಮ ಮಾತು ಕೇಳಿ ಅಲುವೇಲು ಈ ಹೊತ್ತು ಬೆಂಗಳೂರಲ್ಲಿ ಸೂಳೆಯಾಗಿ, ಮೈ ಮಾರಿಕೊಂಡು ಬದುಕುತ್ತಿದ್ದಾಳೆ". ಹೇಳಿ ಮೇಷ್ಟ್ರೆ ಈಗ ಮಾರ್ಗರೇಟ್ ಕೂಡ ಆ ರೀತಿ ಸೂಳೆಯಾಗಬೇಕೆ, ಹೇಳಿ ಮೇಷ್ಟ್ರೆ. ಬೆಟ್ಟದ ತುದಿಯಲ್ಲಿ ಈ ರೀತಿ ಮಾತನಾಡುತ್ತಿರುವಾಗ ರಾಮಾಚಾರಿಯ ಕೈ ತಾಗಿ ಚಾಮಯ್ಯ ಮೇಷ್ಟ್ರು ಬೆಟ್ಟದ ಮೇಲಿಂದ ಕೆಳಗೆ ಬಿದ್ದು ಸಾವನ್ನಪ್ಪುತ್ತಾರೆ. ನಾನೇ ಕೈಯ್ಯಾರೆ ಮೇಷ್ಟ್ರನ್ನು ಕೊಂದೆನೆಂದು ಭಾವಿಸಿದ ರಾಮಾಚಾರಿ

ಮಾರ್ಗರೇಟ್‌ಳೊಂದಿಗೆ ತಾನು ಬೆಟ್ಟದ ಮೇಲಿಂದ ಕೆಳಗೆ ಜಾರಿ ಬಿದ್ದು ಸಾವನ್ನಪ್ಪುತ್ತಾನೆ. ಸಿನಿಮಾದ ಚಿತ್ರೀಕರಣ ಚಿತ್ರದುರ್ಗದ ಸುತ್ತಮುತ್ತ ನಡೆದಿದೆ. ಬೆಟ್ಟ,ಗುಡ್ಡಗಳು, ಕೋಟೆ,ವಿಜ್ಞಾನ ಕಾಲೇಜು, ಕ್ರೀಡಾಂಗಣವನ್ನೆಲ್ಲಾ ಚಿತ್ರಿಸಲಾಗಿದೆ.

ಆದರೆ ತ.ರಾಸು. ಅವರಿಗೆ ತೃಪ್ತಿಯೆನಿಸಿಲ್ಲ. ಇದು ನಾಗರಹಾವಲ್ಲ, ಕೇರೆಹಾವೆಂದು ವಿಮರ್ಶಿಸುತ್ತಾರೆ. ನಾಗರಹಾವು ಚಿತ್ರವನ್ನು ತಾವೇ ನಿರ್ದೇಶಿಸಬೇಕು, ಚಿತ್ರದುರ್ಗದ ನೈಜ ಪರಿಸರವನ್ನು ಬೆಳ್ಳಿತೆರೆಯ ಮೇಲೆ ತಂದು, ಚಿತ್ರದುರ್ಗದ ಪ್ರಾದೇಶಿಕವಾದ ಸೊಗಡನ್ನು ಜನಕ್ಕೆ ತೋರಿಸಬೇಕೆಂಬ ಆಸೆ ತ.ರಾ.ಸು. ಅವರದಾಗಿತ್ತು. ತ.ರಾ.ಸು. ಅವರೇ ಸಿದ್ಧಪಡಿಸಿದ ಚಿತ್ರ ಸಾಹಿತ್ಯ, ತಮ್ಮ ಕಲ್ಪನೆಗಳೆಲ್ಲವು ಬುಡಮೇಲಾಗಿ ಚಿತ್ರಿಸಲ್ಪಟ್ಟಾಗ "ನಾಗರಹಾವು" ಚಿತ್ರವನ್ನು "ಕೇರೆಹಾವು" ಎಂದು ಕರೆದರು. ಈ ರೀತಿ ಆರೋಪಿಸಿದ್ದರಲ್ಲಿ ಹುರುಳಿಲ್ಲದಿರಲಿಲ್ಲ. "ಚಿತ್ರರಂಗದ ನಿಕಟಪರಿಚಯವಿದ್ದು ನಾಲ್ಕೈದು ಚಿತ್ರಗಳಿಗೆ ಚಿತ್ರಸಾಹಿತ್ಯ ರಚಿಸಿ ಸಿದ್ಧಹಸ್ತರಾದ, ಸಿನಿಮಾ ಮಾಧ್ಯಮಕ್ಕೂ, ಕಾದಂಬರಿ ಮಾಧ್ಯಮಕ್ಕೂ ಇರುವ ವ್ಯತ್ಯಾಸವನ್ನು ಚನ್ನಾಗಿ ಬಲ್ಲ ತ.ರಾ.ಸು. ಅವರು ಮಾಡಿದ ಆರೋಪ ಮೌಲ್ಯಾತ್ಮಕವಾದದ್ದು". ಈ ರೀತಿ ಹೇಳಿದ್ದು ತ.ರಾ.ಸು ಅವರಲ್ಲಿದ್ದ ವಿಮರ್ಶಾ ಪ್ರಜ್ಞೆಗೆ, ಕಲಾಭಿಜ್ಞತೆಗೆ ಸಾಕ್ಷಿಯಾಗುತ್ತದೆ. ನಾಗರಹಾವನ್ನು "ಕೇರೆಹಾವು"ಎಂದ ತ.ರಾ.ಸು.ಹಂಸಗೀತೆಯನ್ನು ಸುಂದರ ಹೂವೆಂದು ಒಪ್ಪಿಕೊಳ್ಳುತ್ತಾರೆ. ನಾಗರಹಾವು ಚಲನಚಿತ್ರದ ಕಹಿ ಅನುಭವ ಉಂಡ ತ.ರಾ.ಸು. ಅವರು ಅನಂತರ ಚಿತ್ರಸಾಹಿತ್ಯ ರಚನೆಗೆ ಮನಸ್ಸು ಮಾಡಿದಂತೆ ಕಂಡುಬರುವುದಿಲ್ಲ. ಒಟ್ಟಾರೆ ಕನ್ನಡ ಚಿತ್ರರಂಗಕ್ಕೆ ಉತ್ತಮ ತಿರುವನ್ನು ಕೊಟ್ಟವರಲ್ಲಿ ತ.ರಾ.ಸು.ಅವರ ಪಾತ್ರವೂ ಮಹತ್ವದ್ದೆಂದು ಹೇಳಬಹುದಾಗಿದೆ.

**ಆಕಸ್ಮಿಕ :**

ತ.ರಾ.ಸು. ಅವರ 'ಆಕಸ್ಮಿಕ', 'ಅಪರಾಧಿ', 'ಪರಿಣಾಮ' ಕಾದಂಬರಿಗಳ ಮಾಲೆಯಾಧರಿತ ಸಿನಿಮಾ ಆಕಸ್ಮಿಕ ನಿರ್ಮಾಪಕರು ಎಸ್.ಎ. ಗೋವಿಂದರಾಜ್. ಸಿನಿಮಾದ ವಸ್ತು ಹೆಣ್ಣಿನ ಬದುಕನ್ನು ಕುರಿತದ್ದು. ಮೂರು ಕಾದಂಬರಿಗಳಲ್ಲೂ ಹೆಣ್ಣು ಪ್ರಧಾನವಾಗಿ ಚಿತ್ರಿಸಲ್ಪಟ್ಟಿದ್ದಾಳೆ. ಮೂರು ಕಾದಂಬರಿಗಳಲ್ಲಿ ಪ್ರಧಾನವಾದ ಪಾತ್ರ ಮೂರ್ತಿಯದು. ಉಳಿದಂತೆ ಸಣ್ಣ ಪುಟ್ಟ ಇತರೆ ಪಾತ್ರಗಳು ಪರದೆ ಮೇಲೆ ಕಾಣಿಸಿಕೊಳ್ಳುತ್ತವೆ.

ಸಿನಿಮಾ ಮೂರು ಹಂತದಲ್ಲಿ ಬಿಚ್ಚಿಕೊಳ್ಳುತ್ತಾ ಹೋಗುತ್ತದೆ. ಆರಂಭದಲ್ಲಿ ಬಡತನದ ಬೇಗುದಿಗೆ ಸಿಲುಕಿದ ಇಂದಿರೆ(ಸೌಂದರ್ಯ ಮತ್ತು ರೂಪಕ್ಕೇನು ಕೊರತೆಯಿಲ್ಲ)ಯನ್ನು ನಾಟಕದ ಕಂಪೆನಿಗೆ ಸೇರಿಸುತ್ತೇನೆಂದು ವಂಚಿಸಿ ಒಂದುಸಾವಿರ ರೂಗಳನ್ನು ಕೊಟ್ಟು ವೇಶ್ಯಾವಾಟಿಕೆಗೆ ಮಾರಾಟಮಾಡಲು ಕರೆದುಕೊಂಡು ಹೋಗುತ್ತಿರುವ ವ್ಯಾಸರಾಯ. ಇವನ ಬೆನ್ನತ್ತಿರುವ ಇನ್ಸ್‌ಪೆಕ್ಟರ್ ರಾಜಗೋಪಾಲ್. ವ್ಯಾಸರಾಯ ಮತ್ತು ಇಂದಿರೆ ರೈಲಲ್ಲಿ ಪ್ರಯಾಣಿಸುತ್ತಿರುವ/ವಾಗ

ಆಕಸ್ಮತ್ತಾಗಿ ಮೂರ್ತಿಯ ಬೇಟಿಯಾಗುತ್ತದೆ. ಇನ್ಸ್‌ಪೆಕ್ಟರ್ ರಾಜಗೋಪಾಲ್‌ನ ಕಣ್ಣಿಂದ ತಪ್ಪಿಸಿಕೊಳ್ಳಲು ಇಂದಿರೆಯನ್ನು ಮೂರ್ತಿಯ ಸುಪರ್ದಿಗೆ ಒಪ್ಪಿಸಿ ರಾಜಗೋಪಾಲನ ಕಣ್ತಪ್ಪಿಸಿ, ಅನಂತರ ಮೂರ್ತಿ ಮತ್ತು ಇಂದಿರೆಯನ್ನು ಸಂಧಿಸಿ ಮೂರ್ತಿಗೆ ಹೊಡೆದು ಪ್ರಜ್ಞೆ ತಪ್ಪಿಸಿ ಇಂದಿರೆಯನ್ನು ಕರೆದುಕೊಂಡು ಹೋಗುತ್ತಾನೆ.

ಆಕಸ್ಮಿಕ ಸಂಭಾಷಣೆ ಪ್ರಧಾನವಾದ ಸಿನಿಮಾ. ಇಲ್ಲಿನ ಸಂಭಾಷಣೆಯಿಂದಲೇ ಗೊತ್ತಾಗುತ್ತದೆ. ಇದು ಸ್ತ್ರೀಸಂವೇದನಾ ಪರವಾದ ಸಿನಿಮಾವೆಂಬುದು. ಉದಾ:ಇನ್ಸ್‌ಪೆಕ್ಟರ್ ರಾಜಗೋಪಾಲ್ ರೈಲಲ್ಲಿ ವ್ಯಾಸರಾಯನನ್ನು ಹುಡುಕುತ್ತಿರುವಾಗ ಅನುಮಾನ ಬಂದು ಇಂದಿರೆಯನ್ನು ಕುರಿತು "ಏ ಹುಡುಗಿ ನಿನಾರು"ಎಂದು ಕೇಳಿದಾಗ ಮೂರ್ತಿ ಹೇಳುವ ಮಾತುಗಳು"ಏನ್ರಿ ನಿಮ್ಮ ಕಣ್ಣಿಗೆ ಹೆಣ್ಣು ಮಕ್ಕಳನ್ನು ಬಿಟ್ಟಾರೆ ಬೇರೆ ಯಾರು ಕಾಣಿಸುವುದಿಲ್ಲವೆ. ನಾನೊಬ್ಬ ಗಂಡಸು ಇಲ್ಲಿ ಕೂತಿರುವುದು ನಿಮ್ಮ ಕಣ್ಣಿಗೆ ಕಾಣಿಸುವುದಿಲ್ಲವೆ"ಎನ್ನುತ್ತಾನೆ. ಅಂದರೆ ಪುರುಷ ಸಮಾಜ ಹೆಣ್ಣಿನ ವಿಷಯದಲ್ಲಿ ಯಾವ ರೀತಿ ನಡೆದುಕೊಳ್ಳುತ್ತದೆಂಬುದು. ಹೆಣ್ಣಿನ ಬಗ್ಗೆ ಅವರ ದೃಷ್ಟಿಕೋನ ಯಾವ ರೀತಿಯದಾಗಿರುತ್ತದೆಂಬುದು.

ಇಂದಿರೆ ನಾಟಕ ಕಂಪನಿ ಸೇರುವುದಕ್ಕೆ ಕಾರಣ ಬಡತನ ಇಬ್ಬರು ತಂಗಿಯರು ಮತ್ತು ತಾಯಿಯನ್ನು ಸಲಹುವುದಕ್ಕೆ ಮತ್ತು ಅವರ ಬದುಕಿಗೆ ಹಣದ ಅಗತ್ಯ ಮತ್ತು ಅವಶ್ಯಕತೆಯಿರುತ್ತದೆ. ಅಲ್ಲದೆ ಇಂದಿರೆಯನ್ನು ಮೋಸಗೊಳಿಸುವವನು ವ್ಯಾಸರಾಯನೊಬ್ಬನೆ ಅಲ್ಲ ಪಕ್ಕದ ಮನೆಯ ಸ್ತ್ರೀ ಅನಂದಿ ಕೂಡ ಸಹಕರಿಸುತ್ತಾಳೆ. ಇಂದಿರೆಯನ್ನು ವೇಶ್ಯಾಚಟುವಟಿಕೆಯಿಂದ ಪಾರುಮಾಡಲು ಪ್ರಯತ್ನಿಸುವ ಮೂರ್ತಿ ಮತ್ತು ಇನ್ಸ್‌ಪೆಕ್ಟರ್ ರಾಜಗೋಪಾಲ್. ಇನ್ಸ್‌ಪೆಕ್ಟರ್ ಹೇಳುವ ಮಾತು"ಒಂದು ಹೆಣ್ಣು ಆ ಪಾಪದ ಕೂಪಕ್ಕೆ ಸಿಕ್ಕಿದರೆ ಬಿಡಿಸಿಕೊಂಡು ಬರುವುದೇ ಕಷ್ಟ" ಅಂದರೆ ವೇಶ್ಯಾಸಮಸ್ಯೆಗೆ ಸಿಲುಕಿದ ಹೆಣ್ಣಿನ ಬದುಕು ಎಂತಹ ದುರಂತಕ್ಕೀಡಾಗುತ್ತದೆಂಬುದನ್ನು ಬಿಂಬಿಸುವ ಹಾಗೂ ಇಂತಹ ಕೂಪದಿಂದ ಹೆಣ್ಣು ಬಿಡಿಸಿಕೊಂಡು ಹೊರಬರಬೇಕೆಂಬುದು ಸಿನಿಮಾದ ಆಶಯ. ಇನ್ನೂ ಸಿನಿಮಾಧಲ್ಲಿ ಎರಡನೆ ಹಂತದಲ್ಲಿ ಪುರುಷ ದ್ವೇಷಿಯಾದ ಮಹಿಳೆ, ಅವನ ಮೋಸಕ್ಕೆ ಒಳಗಾದವಳು. ಪ್ರೀತಿಯಿಂದ ವಂಚಿತಳಾದ ಹೆಣ್ಣು ಕುಡಿತಕ್ಕೆ ಮಾರುಹೋಗುತ್ತಾಳೆ ತನ್ನ ನೋವನ್ನು ಮರೆಯಲು ಸದಾ ಮದ್ಯಪಾನ ಮಾಡುವವಳೇ ಮಾಧವಿ. ಕುಡಿದ ಅಮಲಲ್ಲಿ ರೈಲ್ವೆ ಟ್ರಾಕ್‌ನಲ್ಲಿ ಕಾರನ್ನು ಡ್ರೈವಿಂಗ್ ಮಾಡಿಕೊಂಡು ಬರುವಾಗ ಆಕಸ್ಮತ್ತಾಗಿ ಮೂರ್ತಿ ಕಂಡುಕೊಂಡು ಮನೆಗೆ ತಂದು ಸೇರಿಸುತ್ತಾನೆ. ಈ ರೀತಿ ಹೆಣ್ಣೊಬ್ಬಳು ಪುರುಷದ್ವೇಷಿಯಾಗುವುದಕ್ಕೆ ಪುರುಷ ಸಮಾಜವೇ ಕಾರಣ. ರೆಡ್ಡಿಗಾಗಿ ತನ್ನನ್ನು ಅರ್ಪಿಸಿಕೊಂಡಿರುವ ಹೆಣ್ಣು, ಅವನಿಗಾಗಿ ತನ್ನ ಪ್ರೀತಿಯನ್ನು ತ್ಯಾಗ ಮಾಡಿದ್ದಾಳೆ. ತನ್ನ ಪ್ರಿಯತಮನಿಗಾಗಿ ಕೋಟನ್ನು ತೆಗೆದುಕೊಂಡು ಕೊಡಲು ಹೋದಾಗ ರೆಡ್ಡಿಯು ಬೇರೊಂದು ಹೆಣ್ಣಿನ ಜೊತೆಯಿರುವುದನ್ನು ಕಂಡು ಆ ಕ್ಷಣದಿಂದ ಪುರುಷದ್ವೇಷಿಯಾಗುತ್ತಾಳೆ,

ಸದಾಕುಡಿಯುವುದಕ್ಕೆ ಆರಂಭಿಸುತ್ತಾಳೆ. ಆ ರಾತ್ರಿ ಮೂರ್ತಿ ಅವಳನ್ನು ಮನೆಗೆ ಕರೆತಂದು ಬಿಟ್ಟ ಮರುದಿನ ಮಾಧವಿ ಮೂರ್ತಿಗೆ ಕೇಳುವ ಪ್ರಶ್ನೆಗಳೆಂದರೆ "ರಾತ್ರಿ, ಏಕಾಂತ, ಒಂಟಿಹೆಣ್ಣು, ಮೈಮೇಲೆ ಬಟ್ಟೆಗಳಿಲ್ಲ, ನಿಮಗೆ ಏನೂ ಅನಿಸಲೇಇಲ್ಲವೇ?" ಮೂರ್ತಿ ಇಲ್ಲವೆಂದಾಗ "ಸುಳ್ಳು, ಗಂಡಸರ ಗುಣವೇ ಹೀಗೆ" ಎಂದು ಪುರುಷದ್ವೇಷಿ ಮಾತುಗಳನ್ನೇ ಆಡುತ್ತಾಳೆ. ನನ್ನ ಹಾಗೆ ನೀವು ಹೆಣ್ಣಾಗಿದ್ದರೆ ಆಗ ನಿಮಗೆ ಗೊತ್ತಾಗುತ್ತಿತ್ತೆಂದು ಪುರುಷರನ್ನು ವಿರೋಧಿಸಿ ಮಾತನಾಡುತ್ತಾಳೆ. ಆಗ ಮೂರ್ತಿ ಹಾಡುವ ಹಾಡು "ಬಾಳುವಂತ ಹೂವೆ, ಬಾಡುವಾಸೆ ಏಕೆ, ಆಡುವಂತ ಕೋಗಿಲೆ ಅಳುವ ಆಸೆ ಏಕೆ, ಕವಲು ದಾರಿಯಲ್ಲಿ ಬಾಳು ಸಾಗದು..." ಎಂದು ಹಾಡುವುದರ ಮೂಲಕ ಬದುಕಿನಲ್ಲಿ ಆಶಾವಾದಿಯಾಗಿರಬೇಕೆಂಬ ಧ್ವನಿ ಮೊಳಗಿಸುವುದು ಕಂಡುಬರುತ್ತದೆ. ಸಿನಿಮಾದ ಮೂರನೆಯ ಮತ್ತು ಕೊನೆಯ ಹಂತ ಮೂರ್ತಿ ಪೊಲೀಸ್ ಅಧಿಕಾರಿಯಾಗಿ ವೇಶ್ಯಾವೃತ್ತಿಯನ್ನು ನಿರ್ಮೂಲನೆ ಮಾಡಬೇಕೆಂಬ ಆಶಯದೊಂದಿಗೆ ಪೊಲೀಸ್ ಇಲಾಖೆಗೆ ಸೇರುತ್ತಾನೆ. ರಸ್ತೆಬದಿಯಲ್ಲಿ ಇಬ್ಬರು ಸೂಳೆ ಮಗನೆಂದು ಬಯ್ಯುತ್ತಾ ಜಗಳವಾಡುತ್ತಿರುವಾಗ "ಹೆಣ್ಣನ್ನು ಸೂಳೆ ಮಾಡಿದವರಾರು, ಗಂಡಸರಲ್ಲವೆ? ಹೆಣ್ಣಿನ ಬಗ್ಗೆ ಈ ರೀತಿ ಕೀಳಾಗಿ ಮಾತಾಡಿದರೆ... ಬಡವಾ" ಎಂದು ಗದರುತ್ತಾನೆ. ನಾನು ಕೆಲಸಕ್ಕೆ ಸೇರಿದ ಉದ್ದೇಶವೇನೆಂದರೆ "ನಮ್ಮ ಸುತ್ತಮುತ್ತ ನಡೆಯುವ ಹೆಣ್ಣಿನ ಶೋಷಣೆಯನ್ನು ಮಟ್ಟಹಾಕುವುದಕ್ಕೆಂದು" ತನ್ನ ತಾಯಿಯ ಬಳಿ ಹೇಳುತ್ತಾನೆ.

ಮೂರ್ತಿ(ನರಸಿಂಹಮೂರ್ತಿ) ಮತ್ತು ರಾಜಗೋಪಾಲ್ ಇಬ್ಬರೂ ಸೇರಿ ವೇಶ್ಯಾವಾಟಿಕೆಗೆ ಹೆಣ್ಣನ್ನು ಮಾರಾಟ ಮಾಡುವ ಪುರುಷರು ಮತ್ತು ಆ ದಂಧೆಯಲ್ಲಿ ತೊಡಗಿಸಿಕೊಂಡಿರುವ ಸ್ತ್ರೀಯರ ಜಾಲವನ್ನು ಭೇದಿಸಲು ಪ್ರಯತ್ನಿಸುತ್ತಾರೆ. ಈ ದಂಧೆಯಲ್ಲಿ ತೊಡಗಿರುವ, ಅಕ್ರಮ,ಅನೀತಿಯಿಂದ ಬದುಕುವ ಕಾಟಯ್ಯ, ತಿಪ್ಪರಾಜು, ವ್ಯಾಸರಾಯನನ್ನು ಹುಡುಕುತ್ತಾ ಕೇಂದ್ರ ಕಾರಾಗೃಹದಲ್ಲಿರುವ ಆನಂದಿಯನ್ನೂ ಸಂಪರ್ಕಿಸಿ ಇನ್ಸ್‌ಪೆಕ್ಟರ್ ನರಸಿಂಮೂರ್ತಿ ಹಾಡೊಂದನ್ನು ಹಾಡುವುದರ ಮೂಲಕ "ಹುಟ್ಟಿದರೆ ಕನ್ನಡ ನಾಡಲ್ಲಿ ಹುಟ್ಟಬೇಕು.." ವ್ಯಾಸರಾಯನನ್ನೂ ಪತ್ತೆ ಹಚ್ಚಿ ಬೆಂಬಿಡದೆ ಬೆನ್ನತ್ತಿ ಅಲ್ಲಿಂದ ಬೆಂಗಳೂರಿಗೆ ರೈಲಲ್ಲಿ ಬರುತ್ತಿರುವಾಗ ವ್ಯಾಸರಾಯನಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುವಾಗ ಇಂದಿರೆ ಆಕಸ್ಮತ್ತಾಗಿ ರೈಲು ನಿಲ್ದಾಣದ ಬಳಿ ಮೂರ್ತಿ ಕೈಗೆ ಸಿಕ್ಕಿ ವ್ಯಾಸರಾಯ ಮತ್ತು ಅವನಕಡೆಯವರಿಗೂ, ನರಸಿಂಹಮೂರ್ತಿಗೂ ಹೊಡೆದಾಟವಾಗುವಾಗ ರೈಲುಕಂಬಿಯ ಮಧ್ಯೆ ವ್ಯಾಸರಾಯನ ಕಾಲು ಸಿಕ್ಕಿಹಾಕಿಕೊಂಡು ರೈಲಿಗೆ ಸಿಕ್ಕಿ ಸಾವನ್ನಪ್ಪುತ್ತಾನೆ. ಸಿನಿಮಾ ಮುಕ್ತಾಯವಾಗುತ್ತದೆ.

ಇಲ್ಲಿ ಘಟಿಸುವ ಘಟನೆಗಳೆಲ್ಲಾ ಆಕಸ್ಮಿಕವೇ. ಇಂದಿರೆ ಮೂರ್ತಿ ಭೇಟಿ, ಮಾಧವಿ ಮತ್ತು ಮೂರ್ತಿ ಭೇಟಿ, ಮಾಧವಿ ಸಾವು, ವೇಶ್ಯಾಗೃಹಕ್ಕೆ ಹೋಗುವ ಇಂದಿರೆ, ವ್ಯಾಸರಾಯನಿಂದ ಇಂದಿರೆ ಪಾರಾಗುವುದು, ಆನಂದಿಯಿಂದ ಅವಳ ಮಗಳು (ವೈದೈ)ದೂರಾಗಿ ಮುಂಬಯಿ

ಸೇರುವುದು ಇವೆಲ್ಲ ಆಕಸ್ಮಿಕವೆ. ಹಾಗಾಗಿ ಸಿನಿಮಾದ ಶೀರ್ಷಿಕೆ ಆಕಸ್ಮಿಕ ಔಚಿತ್ಯಪೂರ್ಣವಾದದ್ದೆ. ಸಿನಿಮಾ ಸ್ತ್ರೀಸಂವೇದನಾ ಪರವಾದದ್ದು. ವೇಶ್ಯಾಸಮಸ್ಯೆ ಹೋಗಲಾಡಿಸಬೇಕೆನ್ನುವ, ಈ ಜಾಲದಲ್ಲಿ ತೊಡಗಿಸಿಕೊಂಡಿರುವ ಸ್ತ್ರೀ ಮತ್ತು ಪುರುಷರ ಬದುಕಲ್ಲಿ ಬದಲಾವಣೆ ತರಬೇಕೆಂಬುದು, ಹೆಣ್ಣು ವೇಶ್ಯೆಯಾಗಲು ಪುರುಷನೇ ಕಾರಣ, ಇಂತಹ ಸಾಮಾಜಿಕ ಸಮಸ್ಯೆಯಿಂದ ಬಿಡುಗಡೆಯಾಗಬೇಕೆಂಬುದು ಸಿನಿಮಾದ ಆಶಯ.

**ಬೆಂಕಿಯ ಬಲೆ :**

ಬಡತನದಲ್ಲಿ ಹುಟ್ಟಿ ಬಡತನದಲ್ಲಿಯೇ ಸಾವನ್ನುಪ್ಪುವ ಶಾಲಾ ಶಿಕ್ಷಕನೊಬ್ಬನ ದುರಂತವನ್ನು ಚಿತ್ರಿಸುವುದೇ ಸಿನಿಮಾದ ವಸ್ತು. ಬಡತನದಲ್ಲಿ ಬದುಕನ್ನು ದೂಡುಡುವವರು ಯಾವ ಯಾವ ರೀತಿಯಲ್ಲಿ ತೊಂದರೆಗೆ ಸಿಲುಕುತ್ತಾರೆಂಬುದನ್ನು ಸಿನಿಮಾದುದ್ದಕ್ಕು ಚಿತ್ರಿಸಲಾಗಿದೆ. ಸಿನಿಮಾದಲ್ಲಿ ಪ್ರಧಾನವಾಗಿ ಪ್ರೇಕ್ಷಕರ ಗಮನವನ್ನು ಸೆಳೆಯುವುದು ರುಕ್ಮಿಣಿ ಪಾತ್ರ, ಬಡತನದಲ್ಲಿ ಜನಿಸಿದ ಹೆಣ್ಣು ರುಕ್ಮಿಣಿ ಚಿಕ್ಕ ವಯಸ್ಸಿನಲ್ಲಿಯೇ ತಾಯಿಯನ್ನು ಕಳೆದುಕೊಂಡು ತಂದೆಯ ಆರೈಕೆಯಲ್ಲಿ ಬೆಳೆದವಳು. ಶಿಕ್ಷಕ ನರಸಿಂಹ ಮೂರ್ತಿಯ ಕೈ ಹಿಡಿದು ಬಡತನದಲ್ಲಿಯೇ ನರಳಿ ಸಾವನ್ನಪ್ಪುತ್ತಾಳೆ.

ದಾಸನ ಕೊಪ್ಪಲಲ್ಲಿ ರುಕ್ಮಿಣಿ ಬಗ್ಗೆ ಸುಳ್ಳು ಸುದ್ದಿ ಹಬ್ಬಿಸುತ್ತಾ ಬಂದ ಗಂಡುಗಳನ್ನೆಲ್ಲಾ ವಾಪಸ್ಸು ಕಳುಹಿಸುವವರೆಂದರೆ ಪುಡಾರಿ ಪಂಚರಂಗಿ ಪರಮೇಶ್ವರಯ್ಯ ಮತ್ತು ಟೈಲರ್. ಈ ವಿಷಯ ತಿಳಿದ ಪಿ.ಎಸ್.ಐ ವೃಷಬೇಂದ್ರಯ್ಯನವರು ಅವರಿಬ್ಬರಿಗೂ ತಕ್ಕ ಶಾಸ್ತಿ ಮಾಡಿ ರುಕ್ಮಿಣಿ ಮದುವೆಗಾಗಿ ಐದುಸಾವಿರ ರೂಗಳನ್ನು ಅವರಿಂದ ತೆಗೆದುಕೊಂಡು ರುಕ್ಷಿಣಿ ಕುಟುಂಬಕ್ಕೆ ಸಹಾಯ ಮಾಡುತ್ತಾನೆ. "ಬಡವರು ಅಂದ ಮೇಲೆ ಮುಗೀತು ಮದುವೆ ಕನಸಿನ ಮಾತು" ಎಂದು ವೃಷಬೇಂದ್ರ ಯ್ಯ ಹೇಳುವ ಮಾತು. "ಮದುವೆ ಆಗೋದು ಸುಖಕ್ಕೋಸ್ಕರ, ನನ್ನಂತ ಬಡವನನ್ನ ಮದುವೆ ಮಾಡಿಕೊಂಡು ಯಾವ ಸುಖ ಪಡುತ್ತೀಯಾ......" ಎನ್ನುವ ನರಸಿಂಹ ಮೂರ್ತಿಯ ಮಾತು ಬಡತನ ಕುರಿತು ಧ್ವನಿಸುವಂತಹ ಮಾತುಗಳೇ. ಅದೇ ರೀತಿ ಮೂವರು ಬಡವಿದ್ಯಾರ್ಥಿಗಳಿಗೆ ಊಟ ಹಾಕುವ ಸಂದರ್ಭದಲ್ಲಿ ನರಸಿಂಹ ಮೂರ್ತಿ ಹೇಳುವ ಮಾತು. "ಒಪ್ಪೊತ್ತಿನ ಊಟಕ್ಕೆ ಗತಿ ಇಲ್ಲದೇ ಹೋದರೂ ಓದಬೇಕೆನ್ನುವ ಆಸೆ ಇಟ್ಟುಕೊಂಡಿರುವವರು" "ಬಡವರಿಗೆ ಹೆಣ್ಣು ಮಕ್ಕಳು ಹುಟ್ಟಬಾರದು ಸ್ವಾಮಿ" ಈ ತರಹದ ಸಂಭಾಷಣೆಯಿಂದ ಗುರುತಿಸಬಹುದಾದ ಅಂಶವೆಂದರೆ ಬಡತನ ಬದುಕಿನೊಟ್ಟಿಗೆ ಹಾಸುಹೊಕ್ಕಾಗಿ ಬೆರತಿದೆಯೆಂದು ಹೇಳಬಹುದಾಗಿದೆ.

ರುಕ್ಮಿಣಿ ಬದುಕಿನಲ್ಲಿ ಬಡತನವೇ ದಾಸನಕೊಪ್ಪಲು ಯುವಕರು ಅವಳ ಬಗ್ಗೆ ಕೀಳಾಗಿ ಮಾತಾಡಿಕೊಳ್ಳಲು ದಾರಿಮಾಡಿ ಕೊಡುತ್ತದೆ. ಮದುವೆ ಆದ ಮೇಲೂ ಕೂಡ ಬಡತನದಲ್ಲಿಯೇ ಬದುಕನ್ನು ದೂಡುವ ರುಕ್ಮಿಣಿ ಹೇಳುವ ಮಾತು ನನ್ನ ಬಾಳಿನ ಬಡತನದ ಬೆಂಕಿಯನ್ನು ನಿಮ್ಮ ಬದುಕಿಗೂ ಹಚ್ಚಿದೆನೆಂದು ಕಣ್ಣೀರಿಡುತ್ತಾಳೆ. ರುಕ್ಮಿಣಿ ಮತ್ತು ನರಸಿಂಹಮೂರ್ತಿ ಬದುಕಲ್ಲಿ ನೆಮ್ಮದಿ ಹಾಳು ಮಾಡುವ ವ್ಯಕ್ತಿಯೆಂದರೆ ಶರಣಪ್ಪ. ಆ ಊರಿನ ಮುಖ್ಯಸ್ಥ ಮತ್ತು ಪಂಚಾಯಿತಿ ಅಧ್ಯಕ್ಷ. ಆದರೆ ಈತನ ಅಣ್ಣ ಶಂಕರಪ್ಪ ನರಸಿಂಹಮೂರ್ತಿ ಬೆಂಬಲಕ್ಕೆ ನಿಲ್ಲುತ್ತಾನೆ.

ರುಕ್ಮಿಣಿ ಗರ್ಭಪಾತವಾಗಿ ಮಗು ಸಾವನ್ನಪ್ಪಿದಾಗ "ನಾನು ತುಂಬಾ ನತದೃಷ್ಟ ಹೆಣ್ಣು, ಆ ಮಗು ಸಾವನ್ನಪ್ಪಿದ್ದೆ ವಾಸಿಯೆಂದು" ಹೇಳುವಲ್ಲಿ ಬಡತನದ ನನ್ನ ಈ ಬಾಳಲ್ಲಿ ಜನಿಸಿದ ಮಗು "ನನ್ನಂತೆಯೇ ಇಡೀ ಬದುಕಿನುದ್ದಕ್ಕು ಹೋರಾಡಬೇಕಾಗಿತ್ತು" ಎನ್ನುತ್ತಾಳೆ." ನಿನ್ನ ಕೈಯಿಂದ ಘಿಷವನ್ನಾದರೂ ಕೊಟ್ಟು ಬಿಡಿ" ಕುಡಿದು ಸಾಯುತ್ತೇನೆನ್ನುತ್ತಾಳೆ.. "ಬಿಸಿಲಾದರೇನು, ಮಳೆಯಾದರೇನು? ಜೊತೆಯಾಗಿ ಇಂದು ನಾನಿಲ್ಲವೇ,.................. ಹೂವು ಹಾವದರೇನು? ಹಾಲು ವಿಷವಾದರೇನು?" ಎನ್ನುವ ಹಾಡಿನ ಮೂಲಕ ಬಡತನ, ಸಿರಿತನ ಸಂಕಷ್ಟಗಳನ್ನೆಲ್ಲಾ ಮೆಟ್ಟಿ ನಿಲ್ಲ ಬೇಕೆನ್ನುವ ಧ್ವನಿ ಮೊಳಗಿದೆ.

ಸಿನಿಮಾದ ಮತ್ತೊಂದು ಪ್ರಮುಖವಾದ ಆಶಯವೆಂದರೆ ಆ ಹೊತ್ತಲ್ಲಿ ಮಲೇರಿಯಾ ಮತ್ತು ಕ್ಷಯ ರೋಗದ ಬಗ್ಗೆ ಜನತೆಯಲ್ಲಿದ್ದ ಭಯವನ್ನು ಹೋಗಲಾಡಿಸುವುದು. ನರಸಿಂಹಮೂರ್ತಿ ರಾಮಸಮುದ್ರಕ್ಕೆ ವರ್ಗಾವಣೆಯಾದಾಗ "ರಾಮಸಮುದ್ರ ಮಲೇರಿಯಾ ಕೊಂಪೆ" ಎನ್ನುತ್ತಾನೆ? ಈ ರೋಗಗಳಿಗೆ ಸಕಾಲಕ್ಕೆ ಔಷಧಿ ತೆಗದುಕೊಂಡರೆ ವಾಸಿಯಾಗುತ್ತವೆನ್ನುವ ಅಂಶವನ್ನು ಪ್ರೇಕ್ಷಕರ ಗಮನಕ್ಕೆ ತರವುದಾಗಿದೆ. ಜೊತೆಗೆ ಸರ್ಕಾರಿ ಅಸ್ಪತ್ರೆಯಲ್ಲಿನ ಸೇವೆ ಯಾವ ರೀತಿ ಇರುತ್ತದೆಂಬುದನ್ನು ಸೂಕ್ಷ್ಮವಾಗಿ ಕಿರುತರೆಯಮೇಲೆ ತೋರಿಸಲಾಗಿದೆ (ಉದಾ: ನಮ್ಮಂತವರಿಗೆ. ಇದು ಸ್ಥಳವಲ್ಲ ರುಕ್ಕು ಎನ್ನುವ ಮಾತು)

ಒಟ್ಟಾರೆಯಾಗಿ ಬೆಂಕಿಯಬಲೆ ಸಿನಿಮಾ ಸ್ತ್ರೀಸಂವೇದನಾ ಪರವಾದದ್ದು ತ.ರಾ.ಸು ಅವರ ಕಾದಂಬರಿಗಳಲ್ಲಿ ಬಹುಪಾಲು ಕಾದಂಬರಿಗಳು ಸ್ತ್ರೀಯರ ಬದುಕಿನ ದಾರುಣ ಚಿತ್ರಣವನ್ನು ಒಳಗೊಂಡಂತಹವುಗಳೇ. ಇಲ್ಲಿ ಬಡತನದಲ್ಲಿ ಜನಿಸಿದ ರುಕ್ಮಿಣಿ ಬದುಕು ದುರಂತಕ್ಕೀಡಾಗುತ್ತದೆ. ನರಸಿಂಹಮೂರ್ತಿ ಕೂಡ ಔಷಧೋಪಚಾರಕ್ಕೆ ಹಣವಿಲ್ಲದೆ ಸಾವನ್ನಪ್ಪುತ್ತಾನೆ. ತನ್ನ ಗಂಡನ ಹೆಣದ ಜೊತೆ ಸ್ಮಶಾನಕ್ಕೆ ಹೋಗುವಾಗ ರುಕ್ಮಿಣಿ ಸಾವನ್ನಪ್ಪುತ್ತಾಳೆ.

ಹೀಗೆ ತ.ರಾ.ಸು ಅವರ ಸ್ತ್ರೀಸಂವೇದನಾ ಕಾದಂಬರಿಗಳು ಚಲನಚಿತ್ರವಾಗುವುದರ ಮೂಲಕ ಪ್ರೇಕ್ಷಕ ವರ್ಗದಲ್ಲೂ ಜಾಗೃತಿಯನ್ನು ಮೂಡಿಸಿದವೆಂದರೆ ತಪ್ಪಾಗಲಾರದು. ಇವರ ಕಾದಂಬರಿ ಆಧಾರಿತ ಬಹುಪಾಲು ಸಿನಿಮಾಗಳು ಸ್ತ್ರೀಸಮಸ್ಯೆಗಳ ಸುತ್ತಲೂ

ಹೆಣೆಯಲ್ಪಟ್ಟಿರುವಂತಹವುಗಳೇ. ತ.ರಾ.ಸು ಅವರ ಸಮಾಜಿಕ ಕಾದಂಬರಿಗಳಲ್ಲಿನ ಬಹುಪಾಲು ಸ್ತ್ರೀಯರು ಒಂದಲ್ಲ ಒಂದು ರೀತಿಯ ಸಮಸ್ಯೆಗೆ ಸಿಲುಕಿರುವವರೇ. ಅದೇ ರೀತಿ ವರ ಕಾದಂಬರಿ ಆಧರಿತ ಸಿನಿಮಾಗಳಲ್ಲಿನ ಪಾತ್ರಗಳಲ್ಲಿಯೂ ಸ್ತ್ರೀಸಂವೇದನೆಯೇ ಪ್ರಾಧಾನ್ಯತೆ ಪಡೆದುಕೊಳುತ್ತವೆ. ತ.ರಾ.ಸು ಅವರ ಕಾದಂಬರಿ ಆಧರಿತ ಸಿನಿಮಾಗಳಲ್ಲಿ ಪ್ರಮುಖವಾದ ಸ್ತ್ರೀಸಂವೇದನಾ ಪರವಾದ ಅಂಶಗಳೆಂದರೆ ಗಾಳಿ ಮಾತು ಸಿನಿಮಾದಲಲಿ ಬಡತನ, ಮತ್ಸರ ಅಸೂಯೆ ಮತ್ತು ಆತ್ಮವಿಮರ್ಶೆ ಕಂಡು ಬಂದರೆ ಮಸಣದ ಹೂವು ಸಿನಿಮಾದಲಲಿ ವೇಶ್ಯಾಸಮಸ್ಯೆ, ಇದಕ್ಕೆ ಪೂರಕವಾದ ಅಂಶಗಳು ಹಾಗೂ ಈ ಸಮಸ್ಯೆಗೆ ಕಾರಣಗಳು, ಸಮಾಜದ ಮೇಲೆ ಅದು ಬೀರುವ ಪರಿಣಾಮ ಪ್ರೇಕ್ಷಕರ ಮೇಲೆ ಪರಿಣಾಮ ಬೀರಿದರೆ, ನಾಗರ ಹಾವು ಸಿನಿಮಾದಲ್ಲಿ ಧರ್ಮ, ಜಾತಿ, ವೇಶ್ಯಾವಾಟಿಕೆಗೆ ದೂಡುವ ಹೆಣ್ಣು ಹಾಗೂ ಹಣಗಳಿಕೆ ಮುಖ್ಯವಾಗುತ್ತದೆ. ಆಕಸ್ಮಿಕ ಸಿನಿಮಾದಲ್ಲಿ ಬಡತನದಿಂದ ನರಳುವ ಮತ್ತು ಮುಗ್ದ ಹೆಣ್ಣುಮಕ್ಕಳನ್ನು ವೇಶ್ಯಾ ಜಾಲಕ್ಕೆ ಮಾರಾಟ ಮಾಡುವ ಪುರುಷರು ಮತ್ತು ಪುರುಷದ್ವೇಷಿಯಾದ ಹೆಣ್ಣಿನ ಬದುಕು, ಬೆಂಕಿಯ ಬಲೆಯಲ್ಲಿಯೂ ಬಡತನದಲ್ಲಿ ಹುಟ್ಟಿ ಬಡತನದಲ್ಲಿಯೇ ನರಳುವ ಹೆಣ್ಣು ರುಕ್ಮಿಣಿ ಮತ್ತು ಶಿಕ್ಷಕ ನರಸಿಂಹ ಮೂರ್ತಿಯ ಬದುಕನ್ನು ಚಿತ್ರಿಸಲಾಗಿದೆ. ಈ ರೀತಿ ಮಧ್ಯಮವರ್ಗದ ಸ್ತ್ರೀಯರ ಕೌಟಂಬಿಕ ಸಮಸ್ಯೆಗಳ ಬಗ್ಗೆ ಪ್ರೇಕ್ಷಕರ ವರ್ಗದಲ್ಲಿ ಜಾಗೃತಿ ಮೂಡಿಸುವುದಾಗಿತ್ತು. "ಶ್ರೇಷ್ಟ ಕವಿಯೊಬ್ಬ ಬಯಸುವುದು ಸಹೃದಯ ಓದುಗನನ್ನು, ಗಾಯಕನೊಬ್ಬ ಹಾಡುವುದು ಸದಭಿರುಚಿಯ ಶ್ರೋತೃವಿಗಾಗಿ, ಕಲಾಕೃತಿಯೊಂದು ಸದಾ ಕಾಲಕ್ಕೂ ನಿರೀಕ್ಷಿಸುತ್ತದೆ. ಸ್ಪಂದಿಸುವ ಮನಸ್ಸಿಗಾಗಿ– ಕಲಾತ್ಮಕ ಚಿತ್ರವೊಂದನ್ನು ಆಸ್ವಾದಿಸುವಾಗ ಚಿತ್ರ ನಿರ್ದೇಶಕನ ಮನಸ್ಸಿನ ಮಿಡಿತವನ್ನು ಅರಿಯುಬೇಕಾಗುತ್ತದೆ"[೮]. ಅಂದರೆ ಕಲಾತ್ಮಕವಾದ ಸಿನಿಮಾವೊಂದನ್ನು ಆಸ್ವಾದಿಸುವ ಮನಸ್ಸು, ಅಂತಹ ಪ್ರೇಕ್ಷಕ ವರ್ಗ ಇಂದು ಅನಿವಾರ್ಯವೆಂಬುದನ್ನ ಈ ಹೇಳಿಕೆಯಿಂದ ಗ್ರಹಿಸಬಹುದಾಗಿದೆ.

ಸ್ತ್ರೀಸಂವೇದನಾ ಪರವಾದ ಕಾದಂಬರಿ ಆಧರಿತ ಸಿನಿಮಾಗಳು ಪ್ರೇಕ್ಷಕರ ಮನಸ್ಸಿನಲ್ಲಿ ಉಂಟುಮಾಡಿದ ಪರಿಣಾಮವನ್ನು ಮತ್ತು ಆ ಮೂಲಕ ತ.ರಾ.ಸು ಅವರು ಮಧ್ಯಮವರ್ಗದ ಸಾಮಾಜಿಕ ಸಮಸ್ಯೆಗಗೆ ಒತ್ತು ಕೊಟ್ಟಿದ್ದಾರೆಂಬುದನ್ನು ಈ ಅಧ್ಯಾಯದಲ್ಲಿ ಅವಲೋಕಿಸಿದ್ದೇನೆ. ನನ್ನ ಅಧ್ಯಯನದ ಪರಿಮಿತಿಯಲಲಿ ತ.ರಾ.ಸು ಅವರ ಕಾದಂಬರಿ ಆಧರಿತ ಕೆಲವು ಸಿನಿಮಾಗಳನ್ನು ವಿಕ್ಷಿಸಿ ಅವಲೋಕನ ಮಾಡಿದ್ದೇನೆ. ಸಮೂಹ ಮಾಧ್ಯಮಗಳಲ್ಲಿ ಪ್ರಧಾನವಾಗಿ ದೃಶ್ಯ ಮಾಧ್ಯಮದಲ್ಲಿ (ಸಿನಿಮಾ) ಸ್ತ್ರೀಯರನ್ನು ಚಿತ್ರಿಸುವ ವಿಧಾನ, ಪ್ರೇಕ್ಷಕರ ವರ್ಗದ ಮೇಲೆ ಅದು ಬೀರುವ ಪರಿಣಾಮವನ್ನು ಇಲ್ಲಿ ಸೂಕ್ಷ್ಮವಾಗಿ ಅವಲೋಕಿಸಿದ್ದೇನೆ.

## ಅಡಿ ಟಿಪ್ಪಣಿಗಳು

೧. ಇಂದಿರಾ ಆರ್ : ಮಹಿಳೆ ಸಮಾಜ ಮತ್ತು ಸಂಸ್ಕೃತಿ
ಪುಟ -೧೪೧

೨. ಅದೇ : ಪುಟ -೧೩೭

೩. ಸರೋಜ .ಕೆ : ಮಹಿಳೆ ಮತ್ತು ಸಮೂಹ ಮಾಧ್ಯಮಗಳು
ಪುಟ -೧೭

೪. ಅದೇ : ಪುಟ -೨೧

೫. ಮಳಲಿ ವಸಂತ ಕುಮಾರ್
ಬೈರವ ಮೂರ್ತಿ .ಕೆ ( ಸಂ.) : ನಮ್ಮ ಕನ್ನಡ
ಪುಟ-೩೧೭

೬. ರಮೇಶ್ ಬಿ.ಜಿ : ತ.ರಾ.ಸು
ಪುಟ_೩೦

೭. ಶ್ರೀಶೈಲ ಆರಾಧ್ಯ ಹೆಚ್. (ಸಂ.) : ಗಿರಿ ಮಲ್ಲಿಗೆ ಪುಟ_೩೫೪

೮. ಡಾ. ರಂಗರಾಜ ವನದುರ್ಗ (ಸಂ). : ಬರಗೂರರ 'ಶಾಂತಿ' ಚಿತ್ರ. ಪುಟ:೫೯
ದೇವನಾಗೇಶ್

## ಅಧ್ಯಾಯ-೭

## ತ.ರಾ.ಸು ಅವರ ಕಾದಂಬರಿಗಳ ಭಾಷಾ ಸಂವೇದನೆಯ ಸ್ವರೂಪ:

### ೭.೧.ತ.ರಾ.ಸು ಅವರ ಸಮಕಾಲೀನ ಕನ್ನಡ ಕಾದಂಬರಿಗಳ ಭಾಷೆ :

ಹದಿನೆಂಟನೆಯ ಶತಮಾನದ ವೇಳೆಗೆ ಕನ್ನಡ ಗದ್ಯಸಾಹಿತ್ಯ ಹೊಸರೂಪವನ್ನು ಪಡೆಯಿತು. ಬ್ರಿಟಿಷರ ಆಡಳಿತ, ಇಂಗ್ಲಿಷ್ ವಿದ್ಯಾಭ್ಯಾಸ, ಕ್ರೈಸ್ತ ಮಿಷನರಿಗಳ ಪ್ರಭಾವದಿಂದ ಕನ್ನಡ ಸಾಹಿತ್ಯದಲ್ಲಿಯೂ ನಾವಿನ್ಯತೆ ಅಂಕುರಿಸಿತು. ಹೊಸಗನ್ನಡದ ಮುಂಗೋಳಿ ಮುದ್ದಣನಿಂದ ಗದ್ಯಸಾಹಿತ್ಯ ಆರಂಭವಾಯಿತು. ಕನ್ನಡದಲ್ಲಿ ಕಾದಂಬರಿ ಲಕ್ಷಣ ಹೊಂದಿದ್ದಂತಹ ಕಥಾನಕಗಳೆಂದರೆ ಮುಮ್ಮಡಿ ಕೃಷ್ಣರಾಜ ಒಡೆಯರ 'ಸೌಗಂಧಿಕಾಪರಿಣಯ', 'ಯಾದವನ ಕಲಾವತಿಪರಿಣಯ', ಕೆಂಪುನಾರಾಯಣನ 'ಮುದ್ರಾಮಂಜೂಷ' ಗಳಲ್ಲಿ ಕಥನಗದ್ಯ ಹಾಗೂ ಕಲ್ಪನೆಯೇ ಪ್ರಧಾನವಾಗಿ ಬಳಸಲ್ಪಟ್ಟಿತ್ತು. ಹಾಗೆ ನೋಡುವುದಾದರೆ ದೇಶಿಸಾಹಿತ್ಯ ಪರಂಪರೆಯ ಲಕ್ಷಣಗಳು ಕನ್ನಡದ ಮೊದಲ ಕಾದಂಬರಿಗಳ ಗದ್ಯದಲ್ಲಿ ಕಂಡು ಬಂದಿದೆ.

ಹೊಸಗನ್ನಡ ಗದ್ಯಸಾಹಿತ್ಯದ ಕಾದಂಬರಿಗಳಲ್ಲಿನ ಭಾಷೆಯಲ್ಲಿ ಚಂಪೂಶೈಲಿಯ ಲಕ್ಷಣಗಳನ್ನು ಕಾಣುತ್ತೇವೆ. ಪದ್ಯ ಮತ್ತು ಗದ್ಯಗಳೆರಡರ ಪ್ರಯೋಗವನ್ನು ಆರಂಭದ ಕಾದಂಬರಿಕಾರರು ಬಳಸಿದ್ದಾರೆ. ದೇಶಿ ಸಾಹಿತ್ಯದಲ್ಲಿಯೂ ಸಂಸ್ಕೃತ ಪರಂಪರೆಯ ಲಕ್ಷಣಗಳು ಕಂಡುಬರುತ್ತವೆ. ಪದ್ಯ ಮತ್ತು ಗದ್ಯ ಅಂದರೆ ಮಿಶ್ರಣ ಭಾಷೆಯೊಂದು ಆರಂಭದ ಗದ್ಯಕೃತಿಗಳಲ್ಲಿ ಬಳಕೆಯಾಗಿದೆ. ಹದಿನೆಂಟನಯ ಶತಮಾನದ ವೇಳೆಗೆ ಮೈಸೂರಿನ ಅರಸರ ರಾಜಾಸ್ಥಾನದ ಪರಿಸರದಲ್ಲಿ ಕನ್ನಡ ಗದ್ಯದಲ್ಲಿ ಹೊಸರೂಪವೊಂದರ ಬಳಕೆ ಅಂಕುರಿಸಿದ್ದು ಕಂಡು ಬರುತ್ತದೆ. ಉದಾ: ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದ ಗದ್ಯಕೃತಿಗಳಲ್ಲಿ ಬಳಕೆಯಾಗಿರುವ ಭಾಷೆ, ಉತ್ತರ ಕರ್ನಾಟಕದಲ್ಲಿ ಚುರುಮುರಿಮಿಯವರು ತಮ್ಮ ಕೃತಿಗಳಲ್ಲಿ ಬಳಸುತ್ತಿದ್ದ ಭಾಷೆ ಪ್ರಾದೇಶಿಕವಾದ ಲಕ್ಷಣಗಳಿಂದ ಕೂಡಿತ್ತು. ಈ ತರಹದ ಪ್ರಾದೇಶಿಕವಾದ ಲಕ್ಷಣಗಳಿಂದ ಕೂಡಿದ ಭಾಷಾ ಬಳಕೆಗೆ ಕಾರಣ ಆ ಹೊತ್ತಿನ ಸಾಂಸ್ಕೃತಿಕ ವಾತಾವರಣವೆಂದು ಹೇಳಬಹುದು.

ಕನ್ನಡದಲ್ಲಿ ಈ ಸಾಂಸ್ಕೃತಿಕ ಪಲ್ಲಟಗಳು ಆಯಾ ಸಂದರ್ಭ ಮತ್ತು ಪ್ರದೇಶಗಳಲ್ಲಿ ರೂಪುಗೊಂಡ ಸಾಹಿತ್ಯ ಕೃತಿಗಳ ಭಾಷೆಯ ಮೇಲೂ ಪ್ರಭಾವ ಬೀರಿರುವುದನ್ನು ಕಾಣುತ್ತೇವೆ. ಈ ತರಹದ ಅಂಶಗಳು ಆರಂಭದ ಕಾದಂಬರಿಗಳ ಭಾಷೆಯಲ್ಲಿ ಮೈದೋರಿವುದನ್ನು ಕಾಣಬಹುದು.

ದೇಶಿಸಾಹಿತ್ಯ ಪರಂಪರೆಯ ಲಕ್ಷಣಗಳೆಲ್ಲವೂ ಆರಂಭದ ಕಾದಂಬರಿಗಳ ಭಾಷೆಯಲ್ಲಿ ಬೆರೆತಿವೆ. ಆರಂಭದ ಗದ್ಯ ಕಥಾನಕಗಳಲ್ಲಿ ಗಳಗನಾಥರ ಕಾದಂಬರಿಗಳಲ್ಲಿ ಇಂತಹ ಲಕ್ಷಣಗಳು ಕಂಡು ಬರುತ್ತವೆ. ಹಳೆ ಮೈಸೂರಿನ ಗದ್ಯ ಕಥನಕಾರರಲ್ಲಿ ವರ್ಣನಾತ್ಮಕವಾದ ಭಾಷೆ ಮತ್ತು ಸಂಪ್ರದಾಯಕ್ಕೆ ಒತ್ತು ಕೊಟ್ಟಿರುವುದನ್ನು ಕಾಣಬಹುದಾಗಿದೆ. ಕಾದಂಬರಿಯಲ್ಲದಿದ್ದರೂ ಶೃಂಗಾರ

ಚಾತುರ್ಯೋಲ್ಲಾಸಿನಿಯಂತಹ ಗದ್ಯಕೃತಿಯಲ್ಲಿ ಕಾಣಿಸಿದ್ದು, ಗುಲ್ವಾಡಿಯವರ ಇಂದಿರಾಬಾಯಿ, ಎಂ.ಎಸ್ ಪುಟ್ಟಣ್ಣನವರ 'ಮಾಡಿದ್ದುಣ್ಣೋಮಹಾರಾಯ' ಮುಂತಾದ ಕಾದಂಬರಿಗಳಲ್ಲಿ ಹತ್ತೊಂಬತ್ತನೆ ಶತಮಾನದ ಚಲನಶೀಲಸ್ವರೂಪದ ಭಾಷಾಪ್ರಯೋಗವೇ ನಡೆದಿದೆ.

ಕನ್ನಡದ ಮೊದಲ ಕಾದಂಬರಿಗಳ ಗದ್ಯದಲ್ಲಿ ಮೈಸೂರು ಪ್ರಾಂತ್ಯದ ಜನಜೀವನದ ಸಮಸ್ಯೆಗಳು ಒಂದೆಡೆ ಬಿತ್ತರಿಸಲ್ಪಟ್ಟಿದ್ದರೆ, ಮತ್ತೊಂದೆಡೆ ಮಿಷನರಿಗಳ ಪ್ರಭಾವ ಮತ್ತು ಆಧುನಿಕ ಶಿಕ್ಷಣ ಪ್ರಭಾವದ ಸಮಸ್ಯೆಗಳು ದಕ್ಷಿಣಕನ್ನಡ ಪ್ರಾಂತ್ಯದಲ್ಲಿ ಚಿತ್ರಿಸಲ್ಪಟ್ಟವು. ಆಧುನಿಕತೆ ಹಾಗೂ ಪುನರುತ್ಥಾನ ತಿಕ್ಕಾಟದ ಸಮಸ್ಯೆಗಳು, ಮರಾಠಿ ಮೂಲಕ ಉತ್ತರ ಕರ್ನಾಟಕದ ಸಮಸ್ಯೆಗಳಾಗಿ ಬಿಂಬಿಸಲ್ಪಡುತ್ತಿದ್ದವು. ಈ ತರಹದ ಭಿನ್ನ ಸಮಸ್ಯೆಗಳು ಆಯಾ ಪ್ರಾದೇಶಿಕವಾದ ಕಾದಂಬರಿಗಳ ಭಾಷಾ ಶೈಲಿಗೆ ವಸ್ತುವನ್ನೊದಗಿಸಿವೆ. ಸಾಂಪ್ರದಾಯಕ ಗದ್ಯ ಕಥನದಿಂದ ಬೇರೆಯಾದ ನೆಲೆಗಳಲ್ಲೂ ಭಾಷೆಯು ರೂಪುಗೊಳ್ಳುವುದನ್ನು ಆರಂಭದ ಕಾದಂಬರಿಗಳಲ್ಲಿ ಕಾಣುತ್ತೇವೆ. ಇಬ್ಬಗೆಯ ನಡೆಯನ್ನು ಈ ಕಾದಂಬರಿಗಳು ಹೊಂದಿವೆ. "ಅನ್ಯ ಸಂಸ್ಕೃತಿ ದೇಶೀಯವಾದುದನ್ನು ಅನ್ವೇಷಿಸುವ ಬಗೆಯೇ ದೇಶೀವಾದ ಕಲಿತ ಮನಸ್ಸು ತನ್ನ ಪರಿಸರವನ್ನು ಅನ್ವೇಷಿಸುವ ಬಗೆಗೆ ಮಾದರಿಯಾಗಿರುತ್ತದೆ ಅದನ್ನು ರೂಪಿಸುತ್ತಿರುತ್ತದೆ".[೧] ಈ ರೀತಿ ಆರಂಭದ ಕಾದಂಬರಿಗಳಲ್ಲಿ ಭಾಷೆಯಲ್ಲಿ ದೇಶೀಯತೆ ಮತ್ತು ಆಧುನಿಕತೆ ಎರಡೂ ಒಟ್ಟೊಟ್ಟಿಗೆ ಮೇಳೈಸಿರುವುದನ್ನು ತಿಳಿಯುವುದಕ್ಕೆ ಈ ಹೇಳಿಕೆ ಸಹಕಾರಿಯಾಗುತ್ತದೆ. ಕನ್ನಡದ ಮೊದಲ ಪ್ರಾತಿನಿಧಿಕ ಕಾದಂಬರಿಗಳ ಭಾಷೆಯ ಸ್ವರೂಪವನ್ನು ಈ ಹಿನ್ನೆಲೆಯಲ್ಲಿ ಅವಲೋಕನಮಾಡುವುದು ಸೂಕ್ತ.

ಗುಲ್ವಾಡಿ ವೆಂಕಟರಾಯರ 'ಇಂದಿರಾಬಾಯಿ' ಕನ್ನಡದ ಸ್ವತಂತ್ರ ಸಾಮಾಜಿಕ ಕಾದಂಬರಿಗಳಲ್ಲಿ ಮೊದಲನೆಯದು. ಕಾಲ ದೇಶಗಳ ವಿಶಿಷ್ಟತೆ ಹಾಗೂ ವಸ್ತು ವೈವಿಧ್ಯತೆಯಿಂದಷ್ಟೇ ಅಲ್ಲದೆ ಭಾಷೆಯ ಸ್ವರೂಪದಿಂದಲೂ ವಿನೂತನತೆಯನ್ನು ಮೆರೆದ ಕೃತಿ. ಕಾದಂಬರಿಯಲ್ಲಿ ಬಳಕೆಯಾಗಿರುವುದು ನಿರೂಪಣಾಭಾಷೆ. ಕಾದಂಬರಿಯಲ್ಲಿನ ಪಾತ್ರಗಳ ಸಂಭಾಷಣೆ ಭಾಷೆಗೂ, ನಿರೂಪಣಾ ಭಾಷೆಗೂ ವ್ಯತ್ಯಾಸ ಕಂಡು ಬರುತ್ತದೆ. ಉದಾ: ಕೆಲವು ಪಾತ್ರಗಳು ಕೊಂಕಣಿಯಲ್ಲಿ ಮಾತನಾಡುತ್ತವೆ. ಸಂಭಾಷಣೆಯಲ್ಲಿ ಒಂದು ಪಾತ್ರ ಕೊಂಕಣಿಯಲ್ಲಿ ಮಾತನಾಡಿದರೆ ಎದುರು ಪಾತ್ರವು ಮಾತೃಭಾಷೆಯಾದ ಕನ್ನಡದಲ್ಲಿಯೇ ಸಂವಾದ ಮಾಡುವುದನ್ನು ನೋಡಬಹುದಾಗಿದೆ. ಕೋರ್ಟಿನ ವಿಷಯದಲ್ಲಿ ಜಮೇದಾರನು ಅಂತೋನ ಸೋಜನೊಡನೆ ಈ ರೀತಿ ಕೊಂಕಣಿಯಲ್ಲಿ ಸಂಭಾಷಣೆ ನಡೆಸುತ್ತಾನೆ. "ಕಿತ್ತೆಂಗಾ" ಆವ್ಯೆಕ ಕಾಜಾರಜಾಲೆ "ಏನಯ್ಯಾ? ತಾಯಿಗೆ ಮದುವೆ ಮು, ಒಬೊಡ್ಡಿಕೊ ಪೂತ್ ಯಾಯಿತಷ್ಟೆ. ಈ ಬೋಳಿಯ ಮಗಳು ಹುಷಾರಾಹಾತ್. ಆತಾಂ ಕಾಯಿಂ ಏಕ್‌ರ್ ಇದ್ದಾರೆ. ಈಗ ಏನೆಂದೂ ಗೊತ್ತಾಗೊಂತುನಾ ಮ್ಹಂಟಾತ್."

"ತುಕಾ ಕಿತ್ತೆಂ,ಮಾಕಾ ಕಿತ್ತೆಂ? ಆಮ್‌ಚೆಂ ಕಾಮ್ ಜಾಂವ್ ಕ ನಾಕಾತಿ?"

(ಇಂದಿರಾಬಾಯಿ. ಪುಟ.೪೭-೪೮). ಈ ರೀತಿ ಕೊಂಕಣಿ ಮಿಶ್ರಿತ ಕನ್ನಡ ಭಾಷೆಯನ್ನು ಗುಲ್ವಾಡಿಯವರು ಪ್ರಯೋಗಿಸಿದ್ದಾರೆ.

ಭಾಷಾ ಪ್ರಬೇಧಗಳ ಮಿಶ್ರಣವನ್ನು ಕಾದಂಬರಿಕಾರರು ಬಳಸಿದ್ದಾರೆ. ಎರಡು ನೆಲೆಗಳಲ್ಲಿ ಈ ಪ್ರಬೇಧ ಗುರುತಿಸಲು ಸಾಧ್ಯವಿದೆ. ೧) ಪಾತ್ರಗಳ ಸಂಭಾಷಣೆಯ ಹಂತ ೨) ವರ್ಣನೆಯ ಹಂತ. ಕಾದಂಬರಿಕಾರರು ಇಂಗ್ಲಿಷ್‌ನ್ನು ಕನ್ನಡದ ಜೊತೆಗೆ ಬೆರೆಸಿರುವುದು ಕಂಡುಬರುತ್ತದೆ. ಪಾತ್ರಗಳ ಸಂಭಾಷಣೆಗೆ ಉದಾ: ದೂಮನು ಭಾಸ್ಕರನ ಜೊತೆ ಮಾತನಾಡುವ ರೀತಿ "ದಾನೆಸಾಮಿ? ಇನಾಮ್‌ಮಿನಿದಾಲಾ ಉಂಡೇ? ನನಾ ರಡ್ಡ್ ವರ್ಸೋಡ್ ಮುನ್‌ಶೀಪೆರಾದ್ ಬರ್ಪಾರ್, ತೂಲೆ. ಆಪಗತಾ ಇನಾಮ್‌ಯೆಂಚಲಾ ಉಂಡೇ! ಇತ್ತೆ ದಾಲಾ ಉಂಡೇ?" ಎಂದು ಸಂಭಾಷಿಸುತ್ತಾನೆ (ಇಂದಿರಾಬಾಯಿ.ಪುಟ ೭೭). ಈ ಕ್ರಮ ಭಾಷಾ ಪ್ರಬೇಧಗಳ ಮಿಶ್ರಣಕ್ಕೆ ಉತ್ತಮ ನಿದರ್ಶನ. ಕಾದಂಬರಿಕಾರರು ಈ ರೀತಿ ಮಿಶ್ರಣ ಭಾಷೆ ಮೂಲಕ ವಿವರಣೆಯನ್ನಷ್ಟೇ ಕೊಡದೆ ತಮ್ಮ ದೃಷ್ಟಿಕೋನವನ್ನು ವ್ಯಕ್ತಪಡಿಸಲು ಈ ತರಹದ ಕ್ರಿಯಾತ್ಮಕವಾದ ಭಾಷೆಯನ್ನು ಬಳಸಿದ್ದಾರೆ. ಇಂತಹ ವರ್ಣನೆ ಮತ್ತು ಸಂಭಾಷಣೆಯಲ್ಲಿನ ಭಾಷಾ ಪ್ರಬೇಧ ವ್ಯಂಗ್ಯ ಮತ್ತು ವಿಡಂಬನೆಯಿಂದ ಕೂಡಿದ್ದರೂ "ಕೋಡ್ ಮಿಕ್ಸಿಂಗ್" ಮೂಲಕ ಕಾದಂಬರಿಕಾರರು ವಸ್ತುವಿಶ್ಲೇಷಣೆ, ತಮ್ಮ ದೃಷ್ಟಿಕೋನ, ಪಾತ್ರಗಳ ವಿಶ್ಲೇಷಣೆಗೆ ಮುಂದಾಗುತ್ತಾರೆ. ಈ ರೀತಿಯಲ್ಲಿ ಗುಲ್ವಾಡಿಯವರು ಭಾಷಾ ಪ್ರಯೋಗ ಮಾಡಿದ್ದಾರೆ.

ಎಂ.ಎಸ್. ಪುಟ್ಟಣ್ಣನವರ 'ಮಾಡಿದ್ದುಣ್ಣೋ ಮಾಹಾರಾಯ'ದಲ್ಲಿ ಬಳಕೆಯಾಗಿರುವ ಭಾಷೆ ಸಂಭಾಷಣಾ ಪ್ರಧಾನವಾದ ಮತ್ತು ಪಾತ್ರನಿಷ್ಟವಾದ ಭಾಷೆ. ಸಂಭಾಷಣೆಯಲ್ಲಿ ಭಾಷೆಯ ವಿಶಿಷ್ಟ ರೂಪಗಳನ್ನು ಬಳಸುವುದರ ಜೊತೆಗೆ ಆ ಪಾತ್ರಗಳ ಭಾವನೆಗಳನ್ನೂ ವ್ಯಕ್ತಪಡಿಸುವ ಕಲೆಗಾರಿಕೆ ಪುಟ್ಟಣ್ಣನವರಿಗಿತ್ತು. ಇವರ ನಿರೂಪಣಾ ಭಾಷೆಯ ಮತ್ತು ಸಂಭಾಷಣೆಯ ಶೈಲಿ ಓದುಗರಲ್ಲಿ ಕುತೂಹಲ ಮೂಡಿಸುವಂತದ್ದು. ಇಂತಹ ನಿರೂಪಣಾ ಶೈಲಿಯ ಮೂಲಕ ಅಂದಿನ ಸಾಂಸ್ಕೃತಿಕ ವೈರುಧ್ಯಗಳನ್ನು ಪ್ರಕಟಿಸುವ ಪ್ರಯತ್ನ ಮಾಡಿದ್ದಾರೆ. ಇವಷ್ಟೇ ಅಲ್ಲದೆ ಆರಂಭದ ಕನ್ನಡ ಕಾದಂಬರಿಗಳ ಭಾಷೆಯ ಪ್ರಮುಖವಾದ ಲಕ್ಷಣಗಳನ್ನು ಕುರಿತು ಹೇಳುವ ಪ್ರಯತ್ನವನ್ನು ಪುಟ್ಟಣ್ಣನವರು ಮಾಡಿದ್ದಾರೆ. ಪುಟ್ಟಣ್ಣನವರ ಮತ್ತೊಂದು ಗುಣವೆಂದರೆ ನಿರೂಪಣೆಯ ಮೂಲಕ ಪಾತ್ರಗಳ ಒಳಮನಸ್ಸಿನ ತುಮುಲಗಳನ್ನು ಹೊರಹಾಕುವುದು. ಇಂತಹ ಸಂದರ್ಭದಲ್ಲಿ ಸರಳವಾದ ನೇರವಾದ ನುಡಿಗಳನ್ನು ಪುಟ್ಟಣ್ಣನವರು ಬಳಸಿದ್ದಾರೆ. ನಿರೂಪಣಾ ವಿಧಾನ ಮತ್ತು ಘಟನಾವಳಿಗಳ ಮುಖಾಮುಖಿಯಿಂದ ಕಾದಂಬರಿಯ ಭಾಷೆಗೆ ಬಲವಾದ ಆಯಾಮವನ್ನು ತಂದೊಡ್ಡುತ್ತವೆ. ಈ ಹಿನ್ನೆಲೆಯಲ್ಲಿ ಇವರ ಕಾದಂಬರಿಗಳ ಭಾಷಾ ಶೈಲಿ ಸಂಪ್ರದಾಯದ ಗದ್ಯಕಥನದ ಚೌಕಟ್ಟನ್ನು ಮೀರಿ ಆಧುನಿಕ ಕಾದಂಬರಿಗಳ ಭಾಷಾ ಶೈಲಿಗೆ ತಕ್ಕನಾದ ವಾತಾವರಣವನ್ನು ರೂಪಿಸುತ್ತದೆಂದರೂ ತಪ್ಪಾಗಲಾರದು. ಪುಟ್ಟಣ್ಣನವರು ಕಾದಂಬರಿ ರಚನೆಗೆ ತೊಡಗಿದ್ದ ಸಂದರ್ಭದಲ್ಲಿ ಇಂಗ್ಲಿಷ್ ಮತ್ತು ಸಂಸ್ಕೃತದ ಪ್ರಭಾವ ಹೆಚ್ಚಾಗಿತ್ತು. ಇಂಗ್ಲಿಷ್ ಕಲಿತರೆ

ಸರಕಾರಿ ನೌಕರಿ, ಸಂಸ್ಕೃತ ಕಲಿತರೆ ಪಂಡಿತನ ಪಟ್ಟ ಸಲ್ಲುತ್ತಿದ್ದರೆ, ಕನ್ನಡ ಭಾಷೆ ಬಗ್ಗೆ ಕೀಳು ಭಾವನೆ ಜನತೆಯಲ್ಲಿ ನೆಲೆಸಿತ್ತು. ಇಂತಹ ಸಂಧಿಗ್ಧ ಸಮಯದಲ್ಲಿ ಪುಟ್ಟಣ್ಣನವರು ಬಳಸಿದ ಕನ್ನಡ ಕಾದಂಬರಿಗಳಲ್ಲಿನ ಭಾಷೆ ಮುಂದಿನವರಿಗೆ ಮಾರ್ಗದರ್ಶನ ನೀಡಬೇಕಾಗಿತ್ತು.

ಈ ಇಬ್ಬರೂ ಕಾದಂಬರಿಕಾರರ ಭಾಷೆಯ ಹಿನ್ನೆಲೆಯಲ್ಲಿ ಕೆರೂರು ವಾಸುದೇವಾಚಾರ್ಯರ 'ಇಂದಿರೆ' ಕಾದಂಬರಿಯ ಭಾಷೆಯನ್ನು ಅವಲೋಕಿಸುವುದಾದರೆ, ಕಾದಂಬರಿಯಲ್ಲಿನ ವೈಚಾರಿಕತೆಯೇ ಕಾದಂಬರಿಯ ಭಾಷಾ ಸಂಧಿಗ್ದತೆಗೆ ಕಾರಣವಾಗಿದೆ. ಯಥೇಚ್ಛವಾದ ಸಂಪ್ರದಾಯಗಳ ವರ್ಣನೆ ಒಂದೆಡೆಯಾದರೆ, ಸಮಕಾಲೀನ ಸಂದರ್ಭದ ಪಾತ್ರಗಳನ್ನು ಘಟನೆಗಳನ್ನು ಕಾದಂಬರಿಯ ಚೌಕಟ್ಟಿಗೆ ಅಳವಡಿಸುವ ಪ್ರಯತ್ನ ಮತ್ತೊಂದುಕಡೆ. ಸಮಕಾಲೀನ ಚಿಂತನೆಗಳ ಬಗೆಗೆ ಕಾದಂಬರಿಕಾರರು ತಳೆಯುವ ನಿಲುವು ಕೂಡ ದ್ವಂದ್ವದಲ್ಲಿ ಮುಳುಗಿದೆ. ಅಂತೆಯೇ ಕಾದಂಬರಿಯ ಭಾಷಾ ಬಳಕೆಯಲ್ಲಿಯೂ ಈ ದ್ವಂದ್ವ ವ್ಯಕ್ತವಾಗಿದೆ. ತಮ್ಮ ನಿಲುವನ್ನು ಸಮರ್ಥಿಸಿಕೊಳ್ಳುವುದಕ್ಕಾಗಿ ಗುಲ್ವಾಡಿಯವರು ಬಳಸುವ ವರ್ಣನಾತ್ಮಕವಾದ ಭಾಷೆಯನ್ನಾಗಲಿ, ಎಂ.ಎಸ್. ಪುಟ್ಟಣ್ಣನವರು ಬಳಸುವಂತಹ ನಿರೂಪಣಾವಿಧಾನವನ್ನಾಗಲಿ ಬಳಸುವವ ಸಾಮರ್ಥ್ಯ ಇಂದಿರೆ ಕಾದಂಬರಿ ಭಾಷೆಗೆ ಇಲ್ಲವೆಂದೇ ಹೇಳಬಹುದು. ಇದೇ ರೀತಿ ಬೋಳಾರ ಬಾಬುರಾವ್ ಅವರ ವಾಗ್ದೇವಿ ಕಾದಂಬರಿಯ ಭಾಷೆಯನ್ನು ಗಮನಿಸಬಹುದಾಗಿದೆ. ಸಾಂಪ್ರದಾಯ, ಸಾರಸ್ವತ ಸಮಾಜ ಮತ್ತು ಮಠದ ವ್ಯವಸ್ಥೆಯನ್ನು ತನ್ನದೇ ಶೈಲಿ ಮೂಲಕ ನಿರೂಪಿಸಿದ್ದಾರೆ. ಬಾಬುರಾವ್ ಅವರು. ಪ್ರಗತಿಶೀಲ ಕತೆಕಾದಂಬರಿಕಾರರು ಭಾಷಾ ಬಳಕೆಯಲ್ಲಿ ಮಡಿವಂತಿಕೆ ಮೈಲಿಗೆಯನ್ನು ತೋರದೆ, ಸ್ತ್ರೀಪುರುಷರೆನ್ನುವ ಭೇಧವನ್ನೆಣಿಸದೆ ಪ್ರಯೋಗಿಸಿದ್ದಾರೆ. ಉದಾ: ತ.ರಾ.ಸು. ಅವರ ಸಮಕಾಲೀನರಾದ ಕಟ್ಟೀಮನಿಯವರು ಅಜ್ಞಾತವಾಗಿ ಕತೆಯಲ್ಲಿ ಪೊಲೀಸರು ನಾಗಮ್ಮನ ಮೇಲೆ ದೌರ್ಜನ್ಯವೆಸಗುವಾಗ ಮಾತನಾಡುವ ರೀತಿಯೆಂದರೆ "ಇನ್ನೂ ಇಳೇಲಿಲ್ಲವೇನೇ ನಿನ್ನ ಸೊಕ್ಕು? ಮಾತಾಡುತ್ತೀಯೋ ಇಲ್ಲವೋ?" ಎಂದ ದಫೇದಾರ, ಮತ್ತೊಂದು ಬಾರಿ ಅವಳ ಸೊಂಟಕ್ಕೆ ಒಡೆತ ಹಾಕುತ್ತ. "ಹೇಳು ಹುಲೇ ಮುಂಡೆ, ಎಲ್ಲಿ ಅಡಗಿದ್ದಾನೆ ನಿನ್ನ ಗಂಡ? ಯಾಕೆ ಮಾತಾಡೋದಿಲ್ಲ ನೀನು? ಇನ್ನೂ ಎಷ್ಟು ಅಂತ ಹೊಡೆಸಿಕೊಳ್ಳುತ್ತೀ?" (ಹೊಸಗನ್ನಡ ಕಥಾಸಾಹಿತ್ಯ-ಪುಟ.೧೯). ಈ ರೀತಿ ಆಕ್ರೋಶಭರಿತವಾದ, ಸಿಟ್ಟಿನಿಂದ ಕೂಡಿದ ಮಾತುಗಳನ್ನು ಕಟ್ಟೀಮನಿಯವರು ಪ್ರಯೋಗಿಸಿದ್ದಾರೆ. ಇಂತಹ ಮಾತುಗಳು ಸ್ತ್ರೀಸಂವೇದನಾ ಪರವಾದ ಭಾಷೆಗೆ ಉತ್ತಮ ನಿದರ್ಶನಗಳು.

ಹೀಗೆ ಮೊದಲ ಹಂತದ ಕಾದಂಬರಿಗಳ ಭಾಷೆಯ ಸ್ವರೂಪ ನವೋದಯ ಕಾದಂಬರಿಗಳ ಭಾಷೆಗೆ ಪ್ರೇರಣೆಯನ್ನೊದಗಿಸಿತು. ಕನ್ನಡ ಕಾದಂಬರಿ ಪರಂಪರೆಯನ್ನು ಗಮನದಲ್ಲಿರಿಸಿಕೊಂಡು ಆರಂಭದ ಪ್ರಾತಿನಿಧಿಕವಾದ ಮೇಲಿನ ಕಾದಂಬರಿಗಳ ಭಾಷಾ ಸ್ವರೂಪ ಕುರಿತಂತೆ ಅವಲೋಕಿಸಲಾಗಿದೆ. "ತನ್ನ ಹಿಂದಿನ ಕಥನ ಪರಂಪರೆಯಿಂದ ಬೆಳೆದು ತನ್ನದೇ ಆದ ವೈಶಿಷ್ಟ್ಯಗಳನ್ನು ರೂಪಿಸಿಕೊಂಡ ಕನ್ನಡ ಕಾದಂಬರಿಯ ಮೊದಲ ಹಂತದ ಕೃತಿಗಳು ಮುಂದಿನ

ಕೃತಿ ಪರಂಪರೆಗೂ ಭೂಮಿಕೆಯನ್ನು ರಚಿಸಿದವೆಂಬ" ಕೆ.ವಿ. ನಾರಾಯಣ ಅವರ ಮಾತು ನವೋದಯ ಪೂರ್ವದ ಕಾದಂಬರಿಗಳ ಭಾಷಾ ಸ್ವರೂಪ ತಿಳಿಯಲು ಸಹಕಾರಿಯಾಗಿದೆ.

**೭.೨. ತ.ರಾ.ಸು ಅವರ ಕಾದಂಬರಿಗಳ ಭಾಷೆ :**

ಬರೆಹಗಾರನೊಬ್ಬ ಸಾಮಾನ್ಯ ಜನತೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಕೃತಿ ರಚಿಸಿದಾಗ ಜನತೆಯ ಆಡುಭಾಷೆಗೆ, ಆಡುನುಡಿಗೆ ಪ್ರಾಮುಖ್ಯತೆ ನೀಡುತ್ತಾನೆ. ಹಾಗಾಗಿಯೇ ಲೇಖಕ ಏನನ್ನೇ ಸಾಧಿಸಿದರೂ ಆತ ತಾನು ಬಳಸುವ ಭಾಷೆಯ ಮೂಲಕವೇ ಸಾಧಿಸಬೇಕಾಗುತ್ತದೆ. ಬರೆಹಗಾರನೊಬ್ಬನ ಸತ್ವ, ಶಕ್ತಿ, ಸಾಮರ್ಥ್ಯಗಳನ್ನು ಆತನು ಬಳಸುವ ಭಾಷೆ ಪ್ರತಿಬಿಂಬಿಸುತ್ತದೆ. ಕಾದಂಬರಿ ಕ್ಷೇತ್ರದಲ್ಲಿ ಹೆಸರು ಮಾಡಿದ ತ.ರಾಸು ಅವರು ಭಾಷೆಯನ್ನು ಸಮೃದ್ಧವಾಗಿ ದುಡಿಸಿಕೊಂಡಿದ್ದಾರೆ. ಆಂಗ್ಲ, ಸಂಸ್ಕೃತ, ಕನ್ನಡ ಕೃತಿಗಳ ವಿಸ್ತೃತವಾಸ ವ್ಯಾಸಂಗದಿಂದ ಇವರ ಭಾಷೆಗೆ ವಿನೂತನವಾದ ಕಸುವು, ಪುಷ್ಟಿ ಬಂದಿದೆ. ಇವರು ಬಳಸಿರುವ ಭಾಷೆ ಸೃಜನಶೀಲವಾಗಿರುವುದರಿಂದ ಜೀವಂತವಾಗಿದೆ. ಚಿರನೂತನತೆಯಿಂದ ಕೂಡಿದೆ. ತ.ರಾ.ಸು ಅವರ ಭಾಷಾ ಬಳಕೆಯಲ್ಲಿ ಸಂಸ್ಕೃತ ಪದಗಳು ನಿರರ್ಗಳವಾಗಿ ಬಳಸಲ್ಪಟ್ಟಿವೆ. ಅಲ್ಲದೆ ಉಪಮೆ, ರೂಪಕಗಳನ್ನು ಬಳಸಿರುವುದರಿಂದ ಭಾಷೆ ತನ್ನ ಪ್ರೌಢಿಮೆಯನ್ನು ಕಾಯ್ದುಕೊಂಡಿದೆ.

ಸಂಸ್ಕೃತ ಪದಗಳಷ್ಟೇ ಅಲ್ಲದೆ, ದೇಸಿ ಅಥವಾ ಗ್ರಾಮ್ಯ ಭಾಷೆ, ಅಲಂಕಾರಗಳ ಪ್ರಯೋಗ ಮಾಡಿದ್ದಾರೆ. ಇವರ ಭಾಷೆ ಸಂಸ್ಕೃತವನ್ನು ಹಲವು ಬಗೆಯಲ್ಲಿ ಒಪ್ಪಿಕೊಂಡಿದೆ. ತಮ್ಮ ಭಾಷೆಯಲ್ಲಿ ಬಳಸಿರುವ ಸಂಸ್ಕೃತ ಪದಗಳೆಂದರೆ ದೀರ್ಘದಂಡ ಪರಿಣಾಮ, ನಿರ್ವಿಕಾರ ಧ್ವನಿ, ಆಪ್ತಾಲೋಚನಾಸಭೆ, ಅನಿಶ್ಚಯತೆ, ಶೃಂಗಾರವನ, ಕರ್ಕಶರವ, ವನವರಾಹ, ಸರ್ವಾಭರಣಾಲಂಕೃತ (ದುರ್ಗಾಸ್ತಮಾನ) ಆರ್ತಧ್ವನಿ, ಚಾತಕವ್ರತ (ಚಂದವಳ್ಳಿಯ ತೋಟ) ಭೀತಿಮಿಶ್ರಿತ ಅನಿಶ್ಚಯತೇ (ಸರ್ಪಮತ್ಸರ) ಹಿರಣ್ಯಪ್ರತ್ಯಾಮ್ನಾಯ, ನಿರಭ್ರನೀಲನಭೆ, ಕಲಾಪ್ರಕಾರ (ಬೆಳಕುತಂದ ಬಾಲಕ) ಪ್ರಶಾಂತ ಮಂದಹಾಸ, ಪ್ರತೀಕಾರತೃಷಾಗ್ನಿ (ರಕ್ತರಾತ್ರಿ) ಈ ತರಹದ ಬಿಡಿಪದಗಳು ಅವೆಷ್ಟೋ ಇವರ ಕಾದಂಬರಿಗಳಲ್ಲಿ ಬಳಕೆಯಾಗಿವೆ. ಇವರು ಬಳಸಿರುವ ಸಂಸ್ಕೃತ ಬಳಕೆಯಲ್ಲಿ ಗಮನಿಸಬಹುದಾದ ಮತ್ತೊಂದು ಅಂಶವೆಂದರೆ ಬಿಡಿ ಪದಗಳ ಬಳಕೆಯಷ್ಟೇ ಅಲ್ಲದೆ ವಾಕ್ಯಗಳನ್ನು ಮತ್ತು ಶ್ಲೋಕಗಳನ್ನು ಬಳಸಿದ್ದಾರೆ. ಉದಾ: "ಅತ್ತ–ವಾಜಶ್ರವಸನ ಯಜ್ಞಮಂಟಪ, ಪುತ್ತಾಗುತಿಯನ್ನಿತ್ತ ವಾಜಶ್ರವಸನ ಕ್ರೋಧದಿಂದ ಮಹಾಸ್ಮಶಾನವಾಗಿ ದುಃಖ ಪಶ್ಚಾತ್ತಾಪಗಳಿಂದ ಈ ವಾಕ್ಯ ಸಂಸ್ಕೃತ ಪದಗಳಿಂದ ತುಂಬಿದ್ದರೂ ಕನ್ನಡಭಾಷೆಯ ವಾಕ್ಯದಂತೆಯೇ ಗೋಚರವಾಗುತ್ತದೆ. "ಲೋಕ ಸಮಸ್ತಾಃ ಸುಖಿನೋಭವಂತು ಎಂಬುದೇ ಗಾಯತ್ರಿಯೆಂದು ತಿಳಿದು ಜಪಿಸುತ್ತಿರುತ್ತದೆ". (ರಕ್ತರಾತ್ರಿ) ಇಂತಹ ವಿವರಣೆಗಳಿಂದ ಅಚ್ಚಗನ್ನಡ ಭಾಷಾ ಬಳಕೆಯೇ ಇಲ್ಲವೆಂದು ಭಾವಿಸುವಂತಿಲ್ಲ. ಉದಾ: "ಆಗಾಗ ಒರೆ ಹಚ್ಚದೆ ಬಂಗಾರದ ಬೆಲೆ ತಿಳಿಯುವುದಿಲ್ಲ. ಎಳೆದೆಳೆದು ನೋಡಿ ಹೊಸೆದಾಗಲೇ ದಾರ ಬಲವಾಗುವುದು". (ಕಂಬನಿಯ ಕುಯಿಲು) ಈ

ಎರೆಡು ವಾಕ್ಯಗಳಲ್ಲಿ 'ಬಲ' ಎಂಬ ಒಂದು ಪದ ಅಲಂಕಾರ ಭರಿತವಾದದ್ದು. ಈ ತರಹದ ವಾಕ್ಯಗಳು ಭಾಷೆಗೆ ಪ್ರಬುದ್ಧತೆಯನ್ನು ತಂದು ಕೊಡುತ್ತವೆ.

ತ.ರಾ.ಸು ಅವರ ಭಾಷಾ ಪ್ರೌಢಿಮೆಗೆ ಮತ್ತೊಂದು ಕಾರಣವೆಂದರೆ ಅಲಂಕಾರಗಳು. ಅಲಂಕಾರಬದ್ಧವಾದ ಹಾಗೂ ಕಾವ್ಯಮಯವಾದ ಭಾಷೆಯನ್ನು ಬಳಸಿರುವುದು. ರೂಪಕ ಮತ್ತು ಉಪಮೆಗಳು ಅದರ ಜೀವಸತ್ವಗಳು. ಉದಾ: ಅಭಿಮಾನದ ಛತ್ರ, ಸಿಟ್ಟಿನ ಬಿರುಗಾಳಿ, ಚಿಂತೆಯ ಭೂತ (ರಕ್ತರಾತ್ರಿ) ಮಾತಿನ ಮಳೆ (ಬೆಳಕು ತಂದ ಬಾಲಕ) ಆಕೆ ಹೆಣ್ಣಲ್ಲ ವಿಲಾಸದ ಜಲಪಾತ. ದುರ್ಗದಲ್ಲೆಲ್ಲ ಆ ನಗೆಯ ಭೂತ ತಾನೇ ತಾನಾಗಿ ಅಲೆದಾಡಿತು (ರಕ್ತರಾತ್ರಿ) ಇಂತಹ ರೂಪಕಗಳು ಹಲವಾರು. ಶಬ್ದಗಳು, ವಾಕ್ಯವೆನ್ನದೆ ಇಡೀ ಭಾಷೆಯನ್ನು ವ್ಯಾಪಿಸಿವೆ. ಉತ್ತಮ ಗುಣಮಟ್ಟದ ರೂಪಕಗಳು ಭಾಷೆಯ ಪ್ರೌಢಿಮೆಗೆ ನೆರವಾಗಿದೆ.

ಅದೇ ರೀತಿ ಉಪಮೆಗಳು ವಾಕ್ಯಗಳಲ್ಲಿ ಸೇರಿ ಭಾಷೆಗೆ ಮತ್ತಷ್ಟು ಹೊಳಪನ್ನು, ಉಜ್ವಲತೆಯನ್ನು ತಂದಿವೆ. ಉದಾ: 'ಆ ಮಾತಿನ ಮಾರಿಯಂತೆ ಮತ್ತೊಂದು ಮಾತು ತನಗೆ ತಾನೇ ಮೂಡಿ ಬಂತು', 'ಮಾತು ಸತ್ತು ಕಡೆದ ವಿಗ್ರಹದಂತೆ ನಿಂತಿದ್ದ ದಾಸಿಗೆ', (ರಕ್ತರಾತ್ರಿ) 'ಘೋರ ವೃತ್ತಿಯ ಪಿಶಾಚ ನಿರೀಕ್ಷೆಯಿಂದ ಅವನ ಕಣ್ಣುಗಳು ಅಗ್ನಿ ಗೋಲಗಳಂತೆ ತಳತಳಿಸಿದವು'. (ದುರ್ಗಾಸ್ತಮಾನ) ಇಂತಹ ಉದಾ:ಗಳು ತ.ರಾ.ಸು ಅವರ ಭಾಷಾಬಳಕೆಯಲ್ಲಿ ಹೆಜ್ಜೆಹೆಜ್ಜೆಗೂ ಲಭಿಸುತ್ತವೆ. ಇಲ್ಲಿನ ಸಾದೃಶ್ಯ ಸಂಪತ್ತು ಭಾಷೆಯನ್ನು ತುಂಬಾ ಮೇಲ್ಮಟ್ಟಕ್ಕೊಯ್ಯುತ್ತದೆ.

ಭಾಷೆ ಭಾವನೆಗಳನ್ನು ಅಭಿವ್ಯಕ್ತಿಗೊಳಿಸುವ ಒಂದು ಸತ್ವಯುತವಾದ ಮಾಧ್ಯಮ ಬಳಸಿದ ಭಾಷೆಯ ಸಾಮರ್ಥ್ಯವನ್ನು ಅವಲಂಬಿಸುತ್ತದೆ. ಸತ್ವಹೀನವಾದ ಭಾಷೆ ಬಳಸಿದರೆ ಅಭಿವ್ಯಕ್ತಿ ಕುಂಠಿತಗೊಳ್ಳುತ್ತದೆ. ಆದ್ದರಿಂದ ಸತ್ವಯುತವಾದ ಪದಬಳಕೆಯಿಂದ ಭಾಷೆ ಉತ್ತಮಗೊಳ್ಳುತ್ತದೆ. ಈ ಹಿನ್ನೆಲೆಯಲ್ಲಿ ತ.ರಾ.ಸು ಅವರ ಭಾಷೆ ಸೃಜನಶೀಲವಾದುದೇ. ಇವರ ಅಭಿವ್ಯಕ್ತಿಯಲ್ಲಿ ಹೊಸತನವಿದೆ ಪದಬಳಕೆಯಲ್ಲಿ ವಿಶಿಷ್ಟತೆಯಿದೆ. ಈ ತರಹದ ಅಭಿವ್ಯಕ್ತಿ ಶೀಲತೆಯಿದ್ದಾಗ ಭಾಷೆ ಸತ್ವಯುತವಾಗಿರುತ್ತದೆ. ನಿದರ್ಶನವೆಂಬಂತೆ ಮೇಲೆ ಬಳಸಿರುವ ಅಲಂಕಾರಯುಕ್ತವಾದ ಪದಪುಂಜ ಮತ್ತು ವಾಕ್ಯಗಳು, ಈ ರೀತಿಯಾಗಿ ಇವರ ಭಾಷೆ ಜೀವಂತವಾದ ಮತ್ತು ನಿತ್ಯನೂತನವಾದ ಭಾಷೆ.

ತ.ರಾ.ಸು ಅವರು ಬಳಸಿರುವ ಭಾಷೆ ಪಾತ್ರನಿಷ್ಠವಾದುದು. ಅಂದರೆ ಇಲ್ಲಿ ಮಾತನಾಡುವ ವ್ಯಕ್ತಿಯು ಆಡುಮಾತಿನ ಕ್ರಮವನ್ನೇ ಪ್ರಯೋಗಿಸಿದ್ದಾರೆ. ಆದ್ದರಿಂದ ಪಾತ್ರಗಳು ಮಾತನಾಡುವ ಭಾಷೆ ವ್ಯಕ್ತಿನಿಷ್ಠವಾಗಿದ್ದು, ಗ್ರಾಮ್ಯತೆಯಿಂದ ಕೂಡಿರುತ್ತದೆ. ಅಲ್ಲದೆ ಶಿಷ್ಟಗ್ರಂಥಭಾಷೆ, ಮಿಶ್ರಭಾಷೆಯೂ ಆಗಿರುತ್ತದೆ. ಈ ರೀತಿ ಮಾತನಾಡುವುದರಿಂದ ಪಾತ್ರಗಳು ಓದುಗರ ಕಣ್ಮುಂದೆ ಬಂದು ನಿಂತ್ರಂತೆಆಗುತ್ತದೆ.

ತ.ರಾ.ಸು ಅವರು ಬಳಸಿರುವ ಭಾಷೆಯ ಮತ್ತೊಂದು ಲಕ್ಷಣವೆಂದರೆ ವಸ್ತುನಿಷ್ಠತೆ. ವಸ್ತುವಿಗನುಗುಣವಾದ ಭಾಷೆಯನ್ನು ಬಳಸುವ ಕಲೆಗಾರಿಕೆ ಇವರಿಗೆ ಸಿದ್ಧಿಸಿತ್ತು. ಕಥಾವಸ್ತು ಗಂಭೀರವಾಗಿದ್ದಾಗ ಉತ್ತುಂಗ ಶ್ರೇಣಿಯ ಹಾಗೂ ಪಂಡಿತಮಾನ್ಯವಾದ ಭಾಷೆ ರೂಪುತಳೆಯುತ್ತದೆ. ವೀರಪ್ರಧಾನ ವಸ್ತುವಾಗಿದ್ದರೆ ಭಾಷೆ ವೀರ ಅಥವಾ ಗಂಡು ಭಾಷೆ ಹೊರಹೊಮ್ಮುತ್ತದೆ. ಲಘುವಾದ ವಸ್ತುವಾಗಿದ್ದರೆ ಭಾಷೆಯು ಓಜೋಗುಣದಿಂದ ಕೂಡಿ ಸ್ವಲ್ಪ ಸಡಿಲತೆಯಿಂದ ಲಿಖಿತ ಗಂಭೀರವಾಗಿ ಸಾಗುತ್ತದೆ. ಹಾಗಾಗಿ 'ಬೆಳಕುತಂದ' ಬಾಲಕ ಕಾದಂಬರಿಯ ಭಾಷೆ ವಸ್ತುವಿನ ಪ್ರೌಢತೆಗೆ ತಕ್ಕಂತೆ ಪ್ರೌಢವಾಗಿಯೇ ಹೊರಹೊಮ್ಮಿದೆ. ಅದೇ ರೀತಿ ಐತಿಹಾಸಿಕ ಕಾದಂಬರಿಗಳಲ್ಲಿನ ಭಾಷೆ ಗಂಡುಮೆಟ್ಟಿನ ನೆಲದ ಗಂಡುಗಲಿಗಳನ್ನು ಚಿತ್ರಿಸುವ ಭಾಷೆಯಾಗಿ ಬೇರೆ ಕಾದಂಬರಿಗಳಿಗಿಂತ ಭಿನ್ನವಾಗಿ ಚಿತ್ರಿಸಲ್ಪಟ್ಟಿವೆ. ಹಾಗಾಗಿ ತ.ರಾ.ಸು ಅವರ ಕಾದಂಬರಿಗಳಲ್ಲಿನ ಭಾಷೆ ವ್ಯಕಿನಿಷ್ಠವಷ್ಟೆ ಅಲ್ಲದೆ ವಸ್ತುನಿಷ್ಠವಾಗಿರುವುದು ಕಂಡು ಬರುತ್ತದೆ. ಉದಾ: 'ಕಂಬನಿಕುಯಿಲು' ಕಾದಂಬರಿಯಲ್ಲಿ ದುರ್ಗದ ಪ್ರಧಾನ ಸಚಿವನಾದ ಭುವನಪ್ಪನ ವರ್ಣನೆಯನ್ನು ಮಾಡುವಲ್ಲಿ ವೀರಭಾಷೆ ಬಳಸಿದ್ದಾರೆ. "ಸಂಯಮ ಸಾಧನೆಗಳಿಂದ ಪಟುವಾದ ಅವರ ಆರಡಿ ಉದ್ದದ ಭವ್ಯದೇಹ ಕೋಡುಗಲ್ಲನಂತೆ ಭದ್ರವಾಗಿತ್ತು. ವಿಶಾಲವಾದ ವಕ್ಷ, ಮೊಳಕಾಲವರೆಗೆ ಬರುವ ಬಲವಾದ ನೀಳವಾದ ತೋಳು, ಸಾತ್ವಿಕ ಕಳೆ ರಾರಾಜಿಸುವ ಶಾಂತಪ್ರಸನ್ನ ಮುಖಮುದ್ರೆ, ನೆರೆತ ಹುಬ್ಬಿನಡಿಯಲ್ಲಿ ಅರಳಿದ ಕಣ್ಣುಗಳು, ಹುಬ್ಬಿನ ನಡುವೆ ಹಣೆಯಗಲಕ್ಕೂ ಕುಂಕುಮ ಗಂಧ, ಕಿವಿಯಲ್ಲಿ ಜೋತುಬಿದ್ದ ವಜ್ರಕರ್ಣಕುಂಡಲಗಳು"[೨]. ಈ ರೀತಿ ವರ್ಣನಾತ್ಮಕವಾದ ಭಾಷೆ ಬಳಸಿ ಪ್ರಧಾನನೊಬ್ಬನ ವ್ಯಕ್ತಿತ್ವವನ್ನು ವರ್ಣಿಸಿದ್ದಾರೆ. ಇಂತಹ ಸಂದರ್ಭದಲ್ಲಿ ಗಂಡು ಭಾಷೆಯನ್ನು ಬಳಸಿದ್ದಾರೆ. ಇಲ್ಲಿ ಸಂಸ್ಕೃತ ಪದಪ್ರಯೋಗವಿದ್ದರೂ, 'ಬೆಳಕು ತಂದ ಬಾಲಕ' ಕಾದಂಬರಿಯಲ್ಲಿರುವಂತೆ ಇಲ್ಲ.

ಲಲಿತ ಗಂಭೀರ ಶೈಲಿಯ ಭಾಷೆಯನ್ನು 'ಚಂದವಳ್ಳಿಯ ತೋಟ' ಕಾದಂಬರಿಯಲ್ಲಿ ಬಳಸಿದ್ದಾರೆ. ಶಿಷ್ಟರೂಪದ ಗಂಭೀರವಾದ ಭಾಷೆಯನ್ನು ಇಲ್ಲಿ ಬಳಸಿದ್ದಾರೆ. ತ.ರಾ.ಸು ಅವರ ಭಾಷೆಯ ಮತ್ತೊಂದು ವೈಶಿಷ್ಟ್ಯವೆಂದರೆ ನೇರನುಡಿ. ಅನ್ಯಾಯ, ಅತ್ಯಾಚಾರ, ಶೋಷಣೆಗಳನ್ನು ಕಂಡಾಗಲಂತೂ ಅವರ ಭಾಷೆಗೆ ಎಲ್ಲಿಲ್ಲದೆ ತೀಕ್ಷ್ಣತೆ ಬರುತ್ತದೆ. ಸಮಾಜದ ನೈತಿಕ ಬದುಕಿನ ವ್ಯಕ್ತಿಯ ಹುಳುಕುಗಳನ್ನು ನೇರವಾಗಿ ಹೇಳುವುದು, ತ .ರಾ.ಸು ಅವರ ಸ್ವಭಾವ, ಒಂದು ರೀತಿಯಲ್ಲಿ ತ.ರಾ.ಸು ಅವರು ಬಂಡಾಯ ಸಾಹಿತಿ. ಅವರ ನೇರ ಬಂಡಾಯದ ನುಡಿಗಳೇ ಇದಕ್ಕೆ ಸಾಕ್ಷಿ. ನೇರ ನುಡಿ ವ್ಯಂಗ್ಯಗಳಲ್ಲಿ ಅಪಾರವಾದ ಸಾಮಾಜಿಕ ಕಳಕಳಿಯಿದೆ. ಅಪಾರವಾದ ಜೀವನ ಪ್ರೀತಿ ಮಾನವೀಯ ಮೌಲ್ಯಗಳು ಅಲ್ಲಿ ಕಂಡುಬರುತ್ತವೆ.

'ಮಸಣದಹೂವು' ಕಾದಂಬರಿಯಲ್ಲಿ ವೇಶ್ಯಾಸಮಸ್ಯೆ ಕುರಿತು ಚರ್ಚಿಸುವಾಗ, ಕಾನೂನಿನಿಂದ ಈ ಸಮಸ್ಯೆ ನಿವಾರಿಸುವುದರ ಪೂರ್ವಪರ ಕುರಿತು ಡಿ.ಎಸ್.ಪಿ. ಯಿಂದ ಈ ರೀತಿ ಹೇಳಿಸುತ್ತಾರೆ. 'ಕಾನೂನಿದೆ ಆದರೆ ಅದು ಇದ್ದರೂ ಸತ್ತ ಹಾಗೆ' (ಮಸಣದ ಹೂವು

ಪು.೨೮೭) ಸಮಾಜಕ್ಕೆ ಅಂಟಿಕೊಂಡ ಅನಿಷ್ಟಪದ್ಧತಿಗಳಲ್ಲಿ ವೇಶ್ಯಾಸಮಸ್ಯೆಯೂ ಒಂದು. ಇದನ್ನು ನಿರ್ಮೂಲನೆ ಮಾಡಬೇಕೆಂದು ತ.ರಾ.ಸು ಹೀಗೆ ಹೇಳುತ್ತಾರೆ.

"ವೇಶ್ಯಾವೃತ್ತಿ ನಿರ್ಮೂಲನೆಯಾಗಬೇಕು– ಬನ್ನಿ ಹಾಗಾದರೆ, ಅದಕ್ಕೆ ಬುನಾದಿಯಾಗಿ ಧರ್ಮ, ಈ ಬಂಡವಾಳಶಾಹಿ, ಈ ವಿಷಮ ಸಮಾಜವ್ಯವಸ್ಥೆ. ಅರಸೊತ್ತಿಗೆ, ಈ ಸಾಮ್ರಾಜ್ಯಶಾಹಿ ಎಲ್ಲಕ್ಕೂ ಬೆಂಕಿ ಹಚ್ಚಿ ಏಳಿ" (ಮಸಣದ ಹೂ, ಪು.೩೭೦) ಮುಂದುವರೆದು ಸ್ತ್ರೀಸ್ವಾತಂತ್ರ್ಯ ಕುರಿತು ಹೇಳುವ ಮಾತೆಂದರೆ.

"ಸ್ತ್ರೀಸ್ವಾತಂತ್ರ್ಯ ಕುರಿತು ನಡೆಯುವ ಚರ್ಚೆ ಅನಗತ್ಯ ಸ್ತ್ರೀಸ್ವಾತಂತ್ರ್ಯ ಸಮಸ್ಯೆ ತೀರಬೇಕೆಂದರೆ, ಈ ಹಳೆಯ ಜಗತ್ತಿಗೆ ಬೆಂಕಿ ಹಚ್ಚಿ ಹೊಸ ಜಗತ್ತ ಕಟ್ಟಬೇಕು. ಪ್ರೇಮ, ಸ್ನೇಹ, ಸಂಸಾರ ಎಲ್ಲವೂ ಈಗಿನ ಸಮಾಜದ ರೀತಿಯಲ್ಲಿ ಬರೀ ಬೇಡಿಗಳಂತೆ" (ಬಿಡುಗಡೆಯ ಬೇಡಿ ಪು.೧೯೯) ಈ ರೀತಿ ಯಾವುದೇ ತರಹ ಅಳುಕಿಲ್ಲದೆ ನೇರ ನುಡಿಗಳನ್ನು ತಮ್ಮ ಕಾದಂಬರಿಗಳ ಭಾಷೆಯಲ್ಲಿ ಬಳಸಿದ್ದಾರೆ. ಹಾಗಾಗಿ ಇವರ ಭಾಷೆಯಲ್ಲಿ ಬಂಡಾಯದ ನೇರ ನುಡಿಗಳೂ ಪ್ರಯೋಗಿಸಲ್ಪಟ್ಟಿವೆ.

ತ.ರಾ.ಸು ಅವರ (ಭಾಷೆಯ ಮತ್ತೊಂದು ವೈಶಿಷ್ಟ್ಯವೆಂದರೆ ವಾಕ್ಯರಚನಾಕ್ರಮ, ವಾಕ್ಯರಚನೆಯಲ್ಲಿ ಕರ್ತೃಪದ ಮೊದಲಿದ್ದು ಕ್ರಿಯಾಪದ ಕೊನೆಯಲ್ಲಿ ಬರುವುದು ಕನ್ನಡದ ವ್ಯಾಕರಣಕ್ರಮ. ಆದರೆ ಇವರ ವಾಕ್ಯರಚನೆಯಲ್ಲಿ ಕ್ರಿಯಾಪದ ಮೊದಲಿಗೆ ಬಂದು ಕೊನೆಯಲ್ಲಿ ಕರ್ತೃಪದ ಕಂಡುಬರುತ್ತದೆ) ಉದಾ: ಎಂದು ಹರಕೆ ಹೊರುವವನಂತೆ ಹೇಳಿದ ಪರಶುರಾಮನಾಯಕ (ದುರ್ಗಾಸ್ತಮಾನ) ಎನ್ನುತ್ತಿದ್ದಳು ಮೆಹರ್ , ತಾಯಿ ಆ ಪ್ರಶ್ನೆಯನ್ನು ಕೇಳಿದಾಗ (ವಿಜಯೋತ್ಸವ) ಹೀಗೆ ತ.ರಾ.ಸು ಅವರು ವಾಕ್ಯರಚನೆಯಲ್ಲಿ ಕ್ರಿಯಾಪದಗಳನ್ನು ಬಳಸುವಾಗ ವೈಶಿಷ್ಟ್ಯತೆಯನ್ನು ಮೆರೆದಿದ್ದಾರೆ. ಈ ರೀತಿ ತ.ರಾ.ಸು ಅವರು ಉತ್ತಮ ಗುಣಲಕ್ಷಣಗಳಿಂದ ಕೂಡಿದ, ಪ್ರಬುದ್ಧವಾದ, ವೈಶಿಷ್ಟ್ಯ ಪೂರ್ಣವಾದ ಭಾಷೆಯನ್ನು ತಮ್ಮ ಕಾದಂಬರಿಗಳಲ್ಲಿ ಬಳಸಿದ್ದಾರೆ.

## ೭.೩ ತ.ರಾ.ಸು ಅವರ ಕಾದಂಬರಿಗಳ ತಂತ್ರ :

ತ.ರಾ.ಸು ಅವರ ಕಾದಂಬರಿಗಳಲ್ಲಿ ವೈವಿಧ್ಯಮಯವಾದ ವಸ್ತುವನ್ನು ಕಾಣುವಂತೆ ತಂತ್ರದಲ್ಲಿಯೂ ವೈವಿಧ್ಯತೆಯನ್ನು ಗುರುತಿಸಬಹುದು. ಇದಕ್ಕೆ ನಿದರ್ಶನವೆಂಬಂತೆ ತ.ರಾ.ಸು ಅವರು ತಮ್ಮ ಕಾದಂಬರಿಗಳಿಗೆ ವಸ್ತುವನ್ನು ಬಳಸಿರುವುದು ಅಷ್ಟೇ ಅಲ್ಲದೆ ಸಹಜವಾದ ಅಭಿವ್ಯಕ್ತಿ ತಂತ್ರವನ್ನು ತಮ್ಮ ಕಾದಂಬರಿಗಳಲಿ ಪ್ರಯೋಗಿಸಿದ್ದಾರೆ. ಇಂತಹ ತಂತ್ರದ ಬಳಕೆಯಿಂದಾಗಿ ಕೆಲವು ಕಾದಂಬರಿಗಳು ಯಶಸ್ಸನ್ನು ಕಂಡರೆ ಕೆಲವು ಕಾದಂಬರಿಗಳು ಪೇಲವವಾಗಿರುವುದೂ ಉಂಟು.

ತಂತ್ರವೆಂದರೆ ಕಾದಂಬರಿಯ ವಸ್ತುವನ್ನು ಅಭಿವ್ಯಕ್ತಿಸುವ ಸಂಘಟಿಸುವ ವಿಧಾನ. ಕುತೂಹಲ ಮೂಡಿಸುವ ರೀತಿಯಲ್ಲಿ ಕಥೆ ಹೇಳುವ ರೀತಿಯನ್ನು ಸಾಮಾನ್ಯ ಅರ್ಥದಲ್ಲಿ ತಂತ್ರವೆಂದು ಹೇಳಬಹುದು. ಪ್ರತಿಭಾವಂತನಾದ ಲೇಖಕ ಉತ್ತಮವಾಗಿ ಕಥೆಯನ್ನು ಕಟ್ಟುವ ಮೂಲಕ ತಂತ್ರವನ್ನು ಬಳಸುತ್ತಾನೆ. ವಸ್ತುವಿನ ಆಯ್ಕೆ ಮತ್ತು ಕಥೆ ಹೇಳುವ ರೀತಿ ಹಾಸುಹೊಕ್ಕಾಗಿ ಬೆರೆತಾಗ ಕಾದಂಬರಿ ಕಲಾತ್ಮಕವಾಗಿ ಮೂಡಿಬರಲು ಸಾಧ್ಯ. ಇದು ವಿಮರ್ಶಾ ವಲಯದಲ್ಲಿ ಬಹುಚರ್ಚಿತವಾದ ವಿಷಯವಾಗಿದೆ. ತಂತ್ರ ಎನ್ನುವ ಪದ ಯಾವ ನೆಲೆಗಟ್ಟಿನಲ್ಲಿ ಬಳಕೆಯಾಗುತ್ತಿದೆಯೆಂಬುದಕ್ಕೆ ವಿಮರ್ಶಕರು ತಮ್ಮದೇ ಆದ ರೀತಿಯಲ್ಲಿ ವಿವರಣೆ ನೀಡುತ್ತಾರೆ. ಮಾರ್ಕ್ ಶೋರರ್ ಎಂಬಾತ "ತಂತ್ರವೆಂದರೆ ಲೇಖಕನ ಸಾಮಗ್ರಿಯಾದ ಅನುಭವ ತನ್ನ ಬಗ್ಗೆ ಅರ್ಥವನ್ನು ಸೂಚಿಸಲು, ಹಾಗೂ ಕೊನೆಯದಾಗಿ ವಸ್ತುವನ್ನು ಬೆಲೆಕಟ್ಟಲು ಇರುವ ಏಕಮಾತ್ರ ಸಾಧನ ಸಂಖ್ಯೆ?"[೩] ಎಂದಿದ್ದಾನೆ. ಶೋರಾರ್ ಹೇಳುವಂತೆ ಒಂದು ಕೃತಿಯ ವಸ್ತು ವಿಶ್ಲೇಷಣೆ ಅದರ ತಂತ್ರವಿಶ್ಲೇಷಣೆಯೇ ಆಗಿರುತ್ತದೆ. ಅಂದರೆ ವಸ್ತು ಮತ್ತು ತಂತ್ರ ಕೃತಿಯಲ್ಲಿ ಅವಿನಾಭವ ಸಂಬಂಧವನ್ನು ಹೊಂದಿರುತ್ತವೆ. ಉತ್ತಮವಾದ ತಂತ್ರ ಉತ್ತಮವಾದ ವಸ್ತುವಿಗೆ ಸಮವೆಂಬುದು ಶೋರರ್ ಹೇಳಿಕೆಯಿಂದ ತಿಳಿಯುತ್ತದೆ. ಒಂದು ಕೃತಿಯ ವಸ್ತು ವಿಶ್ಲೇಷಣೆಯೆಂದರೆ ತಂತ್ರದ ವಿಶ್ಲೇಷಣೆಯೆಂದೇ ಅರ್ಥ. ಮಹತ್ತರವಾದ ವಸ್ತುವಿದ್ದರೂ ಅದನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸದಿದ್ದರೆ ಆ ಕೃತಿ ಸೋಲುತ್ತದೆ. "ವಸ್ತುವಿನಲ್ಲಿ ಅಡಕವಾಗಿರುವ ಮೌಲ್ಯಗಳನ್ನು ಬೆಲೆಕಟ್ಟಿ, ಅವುಗಳ ಬಗ್ಗೆ ತನ್ನ ಬೆಲೆಯುಳ್ಳ ಧೋರಣೆಗಳನ್ನು ಪ್ರಕಟಿಸುವ ಅನುಕೂಲವನ್ನು ಲೇಖಕ ತಂತ್ರದ ಮೂಲಕವೇ ಸಾಧಿಸಿಕೊಳ್ಳಬೇಕಾಗುತ್ತದೆ. ಎಂದರೆ ವಸ್ತುವಿನ ಪೂರ್ಣ ಅಭಿವ್ಯಕ್ತಿ ತಂತ್ರವೇ ಎಂದಾಗುತ್ತದೆ"[೪] ಎಂದು ಶೋರರ್ ಅಭಿಪ್ರಾಯಪಟ್ಟಿದ್ದಾರೆ.

ಒಂದು ಕೃತಿಯ ಯಶಸ್ಸು ಆ ಕೃತಿಯಲ್ಲಿ ಬಳಕೆಯಾಗುವ ತಂತ್ರದ ಮೇಲೆ ನಿಂತಿರುತ್ತದೆ. ಸಾಧಾರಣವಾದ ವಸ್ತುವಿದ್ದರೂ ತಂತ್ರದಿಂದ ಆ ಕೃತಿ ಯಶಸ್ವಿಯಾಗುತ್ತದೆ. ಉತ್ತಮವಾದ ವಸ್ತುವಿದ್ದರೂ ಕೃತಕವಾದ ತಾಂತ್ರಿಕ ವಿಧಾನದಿಂದ ಆ ಕೃತಿ ಸೋಲಬಹುದು. ವಸ್ತು ಮತ್ತು ತಂತ್ರಗಳೆರೆಡೂ ಪೂರಕವಾಗಿದ್ದರೂ ವಸ್ತುವಿಗನುಗುಣವಾದ ತಂತ್ರವನ್ನು ಬಳಸುವ ಕಲೆಗಾರಿಕೆ ಲೇಖಕನಿಗಿರಬೇಕು. ಪ್ರತಿಭಾವಂತ ಲೇಖಕನಲ್ಲಿ ವಸ್ತು ಮತ್ತು ತಂತ್ರಗಳೆರೆಡೂ ಪ್ರತ್ಯೇಕಿಸಲಾರದ ರೀತಿಯಲ್ಲಿ ಬೆರೆತಿರುತ್ತವೆ. ತಂತ್ರ ಸಹಜವಾಗಿ ಕಾದಂಬರಿಯಲ್ಲಿ ಒಡಮೂಡದಿದ್ದರೆ ತಂತ್ರದ ಸಿದ್ಧ ಚೌಕಟ್ಟಿಗೆ ವಸ್ತುವನ್ನು ಅಳವಡಿಸುವ ಪ್ರಯತ್ನದಲ್ಲಿ ಸೋಲಬಹುದು.

"ಕಾದಂಬರಿ ತಂತ್ರಕ್ಕಾಗಿ ನಾವು ಬಲು ಸಂಕಟಪಡುವಂತೆ ಕಾಣುತ್ತದೆ" ಎಂದು ಕಾರಂತ ಪ್ರಪಂಚದಲ್ಲಿ ತಮ್ಮ ಕಾದಂಬರಿಗಳ ವಿಮರ್ಶೆ ನೋಡಿ ಶಿವರಾಮ ಕಾರಂತರು ಹೇಳಿದ ಅಭಿಪ್ರಾಯವಿದು. ಕಾದಂಬರಿ ಬರೆಯುವ ಲೇಖಕ ತಂತ್ರವನ್ನು ಕುರಿತಂತೆ ಆಲೋಚಿಸುವುದು ಸತ್ಯ. ಈ ಹಿಂದೆ ವಿಮರ್ಶೆ ಇಲ್ಲದೇ ಇದ್ದ ಸಂದರ್ಭದಲ್ಲಿಯೂ ಕಾದಂಬರಿ ಪ್ರಕಾರ ಬೆಳೆದು ಬಂದಿದೆ. ಆದರೆ ಕಾದಂಬರಿ ತರಹದ ಬಗ್ಗೆ ಸರಿಯಾದ ರೀತಿಯ ವಿಮರ್ಶೆಯೇನೂ

ಬೆಳೆದುಬರಲಿಲ್ಲ. ಆ ತರಹದ ವಿಮರ್ಶೆ ಬೆಳೆದು ಬಂದಿದ್ದರೆ ಆಯಾ ಸಂದರ್ಭದ ಸಾಹಿತ್ಯದ ಮೌಲ್ಯ ವಿವೇಚನೆ ನಡೆಯುತ್ತಿತ್ತು. ಹಾಗೆ ನೋಡುವುದಾದರೆ ಹೊಸಗನ್ನಡ ಸಾಹಿತ್ಯ ಸಂದರ್ಭದಲ್ಲಿ ವಿಮರ್ಶೆ ಪ್ರಕಾರ ಬೆಳೆದು ಬಂದಿದ್ದು ತೀರಾ ಇತ್ತೀಚಿಗೆ. ನವ್ಯದಿಂದ ಇಚೆಗೆಂದರೂ ಅತಿಶಯೋಕ್ತಿಯಾಗಲಾರದು. ಕಾದಂಬರಿ ಪ್ರಕಾರ ಇತ್ತೀಚೆಗೆ ತಂತ್ರನಿಷ್ಠವಾಗಿ ಬೆಳೆದು ಬರುತ್ತಿರುವುದನ್ನು ಗಮನಿಸಬಹುದಾಗಿದೆ. ಆದಕಾರಣ ಕಾದಂಬರಿಕಾರರು ಇತ್ತೀಚೆಗೆ ತ್ರಂತ್ರದ ಬಗ್ಗೆ ಹೆಚ್ಚಿನ ಆಸಕ್ತಿ ತಳೆಯುತ್ತಿದ್ದಾರೆ. ಆದರೂ ಕೂಡ ಕಾರಂತರ ಮಾತನ್ನ ಒಪ್ಪುವುದಾದರೆ ಹಿಂದೆ ಬರಹಗಾರರ ಸಂಖ್ಯೆಯೇ ಕಡಿಮೆ ಇದ್ದಾಗ, ಅಂತಹ ಬರಹಗಾರರು ಬರೆದದ್ದೇ ಶ್ರೇಷ್ಠವೆಂದು ಒಪ್ಪುವಂತಹ ದಿನಮಾನದಲ್ಲಿ ತಂತ್ರ ಅಷ್ಟೊಂದು ಮುಖ್ಯವೆನಿಸುತ್ತಿರಲಿಲ್ಲ. ತ.ರಾ.ಸು ಅವರು ಬರಹವನ್ನೇ ವೃತ್ತಿಯಾಗಿ ಸ್ವೀಕರಿಸಿದ್ದರಿಂದ ಅನೇಕ ಕಾದಂಬರಿಗಳು ತಂತ್ರ ಮತ್ತು ಧೋರಣೆಯಲ್ಲಿ ಸೋತಿವೆ. ಆದರೂ ಕೂಡ ಇವರ ಅನೇಕ ಕಾದಂಬರಿಗಳು ಯಶಸ್ವಿಯಾಗಿರುವುದು ತಂತ್ರದ ಬಳಕೆಯಿಂದಲೇ.

ಹೊಸಗನ್ನಡದ (ಗದ್ಯಸಾಹಿತ್ಯ) ಮುಂಗೋಳಿ ಮುದ್ದಣ್ಣ ತನ್ನ ಬರಹದಲ್ಲಿ ನಾವಿನ್ಯತೆಯನ್ನು ಮೆರೆದಿದ್ದಾನೆ. ಹೊಸಗನ್ನಡದ ಗದ್ಯಸಾಹಿತ್ಯದ ತಂತ್ರ ಮುದ್ದಣ್ಣನಿಗೆ ಸಿದ್ಧಿಸಿತ್ತು. "ಭಾಷೆ ಹಳೆಗನ್ನಡವಾದರೂ ಸಾಹಿತ್ಯಕ್ಕೊಂದು ಹೊಸರೂಪ, ಹೊಸ ದಾರಿಗಳನ್ನು ಕೊಡಬೇಕೆಂದು ಮುದ್ದಣ್ಣ ನಿಶ್ಚಯಿಸಿದ್ದ. 'ರಾಮಾಶ್ವಮೇಧ' ಅವನ ಕೃತಿಗಳಲಿ ಶ್ರೇಷ್ಠವಾದುದು, ಮೆಚ್ಚುಗೆ ಮತ್ತು ವೈಶಿಷ್ಟ್ಯವನ್ನು ಪಡೆದ ಕೃತಿ. ಇದರ ಮೂಲಕ ಸಂಸ್ಕೃತದ ಪದ್ಮಪುರಾಣ, ಇದರಲ್ಲಿ ಕಥೆ ಹೇಳುವ ತಂತ್ರವು ಮುದ್ದಣ್ಣನ ಹೊಸತನ ಮತ್ತು ಗದ್ಯ ಸಾಹಿತ್ಯಕ್ಕೆ ಅವನ ಕೊಡುಗೆ. "ಮುದ್ದಣ್ಣ–ಮನೋರಮೆ ಎಂಬ ಕಲ್ಪಿತ ಪಾತ್ರಗಳ ಸಂಭಾಷಣೆಯೊಂದಿಗೆ ಕಥೆ ಮುಂದುವರಿಯುತ್ತದೆ. ಮುದ್ದಣ್ಣನ ಗದ್ಯ ಶೈಲಿ, ಭಾಷೆ, ಲಯಗಳು ಕನ್ನಡ ಸಾಹಿತ್ಯ ಪ್ರಪಂಚದಲ್ಲೆ ವಿಶಿಷ್ಟವಾದುದು"[೨]. ಎಂಬುದಾಗಿ ಡಾ.ರಂ.ಶ್ರೀ ಮುಗುಳಿಯವರು ಅಭಿಪ್ರಾಯಪಟ್ಟಿದ್ದಾರೆ. ಅಂದರೆ ಆರಂಭದ ಕಾದಂಬರಿಗಳಲ್ಲಿ ವಿಮರ್ಶೆೀಯು ಬೆಳೆಯದೇ ಇದ್ದಂತಹ ಸಂದರ್ಭದಲ್ಲಿಯೂ ತಂತ್ರ ಬಳಕೆ ಕುರಿತು ತಿಳಿಯಲು ಮುಗಳಿಯವರ ಹೇಳಿಕೆ ಪೂರಕವಾಗುತ್ತದೆ. ತಂತ್ರದ ಬಗ್ಗೆ ಲೇಖಕನೊಬ್ಬ ವಹಿಸುವ ಕಾಳಜಿ ಮತ್ತು ಅವನ ಕೌಶಲ್ಯ ವಸ್ತುವನ್ನು ಪರಿಣಾಮಕಾರಿಯಾಗಿಸಿ, ಓದುಗ ಅದರೊಂದಿಗೆ ಗಾಢವಾಗಿ ಆತ್ಮೀಯವಾಗಿ ತೊಡಗಿಸಿಕೊಳ್ಳುವಲ್ಲಿ ಸಾರ್ಥಕ್ಯವನ್ನು ಪಡೆಯಬೇಕು. ಈ ದಿಸೆಯಲ್ಲಿ "ಒಂದು ಒಳ್ಳೆಯ ಕಾದಂಬರಿಗೆ ತಂತ್ರವೇ ಇರುವುದಿಲ್ಲ ಅದರ ವಸ್ತುವೇ ತಂತ್ರವೂ"[೬].ಆಗಿರುತ್ತದೆ ಎನ್ನುವ ವಿಲಿಯಂ ಹೆನ್ರಿ ಅವರ ಅಭಿಪ್ರಾಯವನ್ನು ಸಮ್ಮತಿಸಬಹುದಾಗಿದೆ.

(ಒಟ್ಟಾರೆಯಾಗಿ ಯಾವ ರೀತಿ ಕತೆಯನ್ನು ಹೇಳಿದರೆ ವಸ್ತುವಿನ ಎಲ್ಲ ಸಾಧ್ಯತೆಗಳನ್ನು ದುಡಿಸಿಕೊಳ್ಳಲು ಸಾಧ್ಯವೆಂಬುದನ್ನು ಬರಹಗಾರನೊಬ್ಬ ಹಲವುಬಾರಿ ಯೋಚಿಸಬೇಕಾಗುತ್ತದೆ. ಸಹಜತೆಗಿಂತ ಇದು ಕಾದಂಬರಿಯ ಜೀವಾಳದ ಪ್ರಶ್ನೆ. ವಸ್ತುವಿಗೆ ತಕ್ಕ ತಾಂತ್ರಿಕವಾದ ಅಂಶಗಳ

ಬಳಕೆಯಾಗದಿದ್ದರೆ ಅದು ಓದುಗರಿಗೆ ಸಂಪೂರ್ಣವಾಗಿ ತೆರೆದುಕೊಳ್ಳುವುದಿಲ್ಲ. ಹಾಗಾದ್ದಾಗ ಬರಹಗಾರ ಹೇಳುವುದೇ ಬೇರೆ, ಕೃತಿಯಲ್ಲಿ ಸಂಭವಿಸುವುದೇ ಬೇರೆಯಾಗುವ ಸಾಧ್ಯತೆಯಿರುತ್ತದೆ. ಹೀಗೆ ತಂತ್ರದ ಅಭಿವ್ಯಕ್ತಿಯಲ್ಲಿ ನಾವಿನ್ಯತೆಯನ್ನು ಸಾಧಿಸಿದ್ದರೂ ಕೂಡ ತ.ರಾ.ಸು ಅವರ ಕೆಲವು ಕಾದಂಬರಿಗಳಲ್ಲಿ ತಂತ್ರದ ಸಾಮ್ಯತೆ ಕಂಡುಬರುತ್ತದೆ. 'ಮರುಳುಸೇತುವೆ', 'ಚಂದ್ರವಳ್ಳಿಯ ತೋಟ', 'ಹಂಸಗೀತೆ', 'ಪರಿಮಳದ ಉರುಳು', ,ಶಿಶುಹತ್ಯೆ,, ಹಾಗೂ 'ಚಕ್ರೇಶ್ವರ' ಮುಂತಾದ ಕಾದಂಬರಿಗಳ ತಂತ್ರ ಬಳಕೆಯಲ್ಲಿ ತ.ರಾ.ಸು ಅವರು ಸಿದ್ಧಚೌಕಟ್ಟೊಂದನ್ನು ಬಳಸಿದ್ದಾರೆ. ಆ ತರಹದ ಸಿದ್ಧಚೌಕಟ್ಟಿನಲ್ಲಿರುವ ಕೆಲವು ಅಂಶಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

೧) ಕಥಾ ಬೆಳವಣಿಗೆಗೆ ಮುನ್ನ ಉತ್ತಮ ಪುರುಷವಾಚಕ ವ್ಯಕ್ತಿ ಮುಖ್ಯವಾಗಿ ಅನ್ಯಪಾತ್ರದೊಂದಿಗೆ ಸಂಭಾಷಣೆ ನಡೆಸುವುದು.

೨) ಲೇಖಕರ ಕತೂಹಲ, ಅನ್ಯಪಾತ್ರ ಕಥೆಹೇಳುವಂತೆ ಪ್ರಚೋದಿಸುವುದು.

೩) ಅನ್ಯಪಾತ್ರ ಪ್ರಮುಖ ಪಾತ್ರಧಾರಿಯಾಗಿ, ಉತ್ತಮ ಪರುಷವಾಚಕ ಲೇಖಕ ಮರೆಯಾಗುವುದು.

೪) ಅನ್ಯವ್ಯಕ್ತಿ ಕಥಾವಾಚಕನಾಗಿ, ಲೇಖಕ ಶ್ರೋತೃವಾಗಿ ಪರಿಣಮಿಸುವುದು.

೫) ಶಿರೋನಾಮೆಯ ಅಡಿಯಲ್ಲಿ ಕಥಾಹಂದರದ ಪದರ ಬಿಚ್ಚಿಕೊಳ್ಳುವುದು.

ಪಾಶ್ಚಾತ್ಯ ಕಾದಂಬರಿಗಳನ್ನೋದಿಕೊಂಡ ಕನ್ನಡ ಕಾದಂಬರಿಕಾರರು ತಂತ್ರದ ನಾವಿನ್ಯತೆಯನ್ನು ತಮ್ಮ ಕಾದಂಬರಿಗಳಲ್ಲಿ ಪ್ರಯೋಗಿಸಿದರು. ತ.ರಾ.ಸು ಅವರೂ ಕೂಡ ಪಾಶ್ಚಾತ್ಯ ಕಾದಂಬರಿಗಳಿಂದ ಪ್ರೇರಿತರಾಗಿ ಕುತೂಹಲ ಕೆರಳಿಸುತ್ತಾ ಹೋಗುವ ತಂತ್ರವನ್ನು ತಮ್ಮ ಕಾದಂಬರಿಗಳಲ್ಲಿ ಬಳಸಿದ್ದಾರೆ. ತಂತ್ರದ ನಾವಿನ್ಯತೆಗೆ ಒಳಗಾದ ತ.ರಾ.ಸು ಅವರು ಪಾಶ್ಚಾತ್ಯ ಮಾದರಿಯ ತಂತ್ರವನ್ನು ಅನುಕರಿಸಿದ್ದಾರೆ. ಅಲ್ಲದೇ ಒಂದೇ ರೀತಿಯ ತಂತ್ರವನ್ನೊಳಗೊಂಡ ಅವರ ಕಾದಂಬರಿಗಳನ್ನು ಅವಲೋಕಿಸಿದಾಗ ಮೇಲೆ ಗುರುತಿಸಿರುವ ಅಂಶಗಳನ್ನು ಅವರ ಕಾದಂಬರಿಗಳಲ್ಲಿ ಕಾಣಬಹುದು. ತಂತ್ರ ಒಂದೇ ಆದರೂ ಕೆಲ ಕಾದಂಬರಿಗಳಲ್ಲಿ ವಿಶಿಷ್ಟವಾದ ಅಭಿವ್ಯಕ್ತಿ ಕ್ರಮವನ್ನು ಗುರುತಿಸಬಹುದು. ತ.ರಾ.ಸು ಅವರು ಹಲವು ಕಾದಂಬರಿಗಳಲ್ಲಿ ಬಳಸಿರುವ ಒಂದೇ ತಂತ್ರವನ್ನು ಕಾಣಲು ಸಾಧ್ಯವಿದೆ.

ತ.ರಾ.ಸು ಅವರು 'ಲುಕಿಂಗ್‌ಬ್ಯಾಕ್' ಅಥವಾ 'ಪ್ಲಾಷ್‌ಬ್ಯಾಕ್' ಅಂದರೆ (ಹಿನ್ನೋಟ) ತಂತ್ರವನ್ನು ಕೆಲವು ಕಾದಂಬರಿಗಳಲ್ಲಿ ಬಳಸಿದ್ದಾರೆ. ರನ್ನ ತನ್ನ ಗದಾಯುದ್ದದಲ್ಲಿ ಈ ತಂತ್ರವನ್ನು ಬಳಸಿದ್ದಾನೆ. ಇದನ್ನು ರನ್ನನು "ಸಿಂಹಾವಲೋಕನ" ಕ್ರಮವೆಂದು ಕರೆದುಕೊಂಡಿದ್ದಾನೆ. ಹದಿನೇಳು, ಹದಿನೆಂಟನೆಯ ದಿನದ ಕುರುಕ್ಷೇತ್ರ ಯುದ್ದದ ವರ್ಣನೆ ಮಾಡುತ್ತಲೆ ಹಿನ್ನೋಟ ತಂತ್ರ ಅಥವಾ ಸಿಂಹಾವಲೋಕನ ತಂತ್ರದ ಮೂಲಕ ಇಡೀ ಮಹಾಭಾರತದ ಕಥೆಯನ್ನು

ನೆನಪಿಸುತ್ತಾನೆ. ಈ ತರಹದ ತಂತ್ರವನ್ನೊಳಗೊಂಡ ತ.ರಾ.ಸು ಅವರ ಕಾದಂಬರಿಗಳೆಂದರೆ 'ಹಂಸಗೀತೆ', 'ಚಂದವಳ್ಳಿಯ ತೋಟ', ಹಾಗೂ 'ಶಿಲ್ಪಶ್ರೀ' ಮುಖ್ಯವಾದ ಕಾದಂಬರಿಗಳು.

'ಹಂಸಗೀತೆ' ಸಂಗೀತಗಾರನಾದ ಭೈರವಿ ವೆಂಕಟಸುಬ್ಬಯ್ಯನ ಸುತ್ತಲೂ ಹೆಣೆದಿರುವ ಕಥೆ. ಕಾದಂಬರಿಕಾರರಿಗೆ ಇಲ್ಲಿ ಸಂಗೀತಗಾರನೊಬ್ಬನ ಕಥೆಯನ್ನು ಹೇಳುವುದಷ್ಟೇ ಮುಖ್ಯವಲ್ಲ ಬದುಕಿನ ಕೆಲವು ಮೌಲ್ಯಗಳನ್ನು ಉಳಿಸುವುದೂ ಅಷ್ಟೇ ಮುಖ್ಯ. ಇಲ್ಲಿ ಉತ್ತಮ ಪುರುಷವಾಚಕ ಲೇಖಕನ ಕುತೂಹಲಕ್ಕಿಂತ ಆತನ ಪ್ರಯತ್ನ ಹಾಗೂ ಪರಿಶ್ರಮ ಮುಖ್ಯವಾಗುತ್ತದೆ. ಕಾದಂಬರಿಯುದ್ದಕ್ಕೂ ಲೇಖಕ ಒಬ್ಬ ಪಾತ್ರಧಾರಿಯಾಗಿ ಊರಿಂದ ಊರಿಗೆ, ಮನೆಯಿಂದ ಮನೆಗೆ ಹೋಗಿ ಕಥೆಯನ್ನು ಸಂಗ್ರಹಿಸುವುದು, ಆಯಾ ಪಾತ್ರಗಳು ತಮಗೆ ತಿಳಿದ ಅಲ್ಪಸ್ವಲ್ಪ ಕಥೆಯನ್ನು ನಿರೂಪಿಸುವುದು ಕಾದಂಬರಿಯ ವೈಶಿಷ್ಟ್ಯ. ಲಿಂಗಾಜೋಯಿಸರು ಮತ್ತು ಏಕನಾಥೇಶ್ವರಿ ದೇವಾಲಯದ ಪೂಜಾರಿ ವೀರಭದ್ರಪ್ಪ ವೆಂಕಟಸುಬ್ಬಯ್ಯನ ಬಗ್ಗೆ ಕಥೆ ಹೇಳುತ್ತಾ ಹೋಗುತ್ತಾರೆ. ಇಂತಹ ಸಂದರ್ಭದಲ್ಲಿ ವೆಂಕಟಸುಬ್ಬಯ್ಯನ ಬದುಕಿನ ಅನೇಕ ಪದರಗಳು ಓದುಗರ ಮುಂದೆ ಬಿಚ್ಚಿಕೊಳ್ಳುತ್ತಾ ಹೋಗುತ್ತವೆ. ವೆಂಕಟಸುಬ್ಬಯ್ಯನ ಹಾಡುಗಾರಿಕೆಯನ್ನು ಕಲ್ಪಿಸಿಕೊಳ್ಳುವಾಗ ರೋಚಕತೆ ಪ್ರಯೋಗವಾಗಿದೆ. "ಕೋಗಿಲೆ ಹಾಡು ಕೇಳ್ತಿಯಾ?" ಎಂದು ವಿದ್ಯಾರ್ಥಿಗಳ ಕಿವಿ ಹಿಂಡುತ್ತಿದ್ದ ಹಿನ್ನೆಲೆಯಲ್ಲಿ ಕೋಗಿಲೆಯ ಕೂಗಿಗೂ, ಕಿವಿ ನಿಮಿರಿಸುವ ವೆಂಕಟಸುಬ್ಬಯ್ಯನ ನಾದಾಸಕ್ತಿಯನ್ನು ಗೋಪಾಲಾಚಾರ್ಯರು ನಿರೂಪಿಸುತ್ತಾರೆ. ವೆಂಕಟಸುಬ್ಬಯ್ಯ ಸಂಗೀತ ಕಲಿತ ಸಾಹಸ ಮತ್ತು ಸಾಧನೆ ಗಾಥೆಗಳನ್ನು ಚಂದ್ರಸಾನಿಯ ಜೊತೆಗಿನ ಬದುಕಿನ ಘಟನೆಗಳ ಕಥೆಯನ್ನು ಹೇಳುವವರು ನಾಟಕ ಆಡಿಸುವ ಕುರುಮರಡಿಕೆರೆಯ ಚನ್ನಪ್ಪ ಮತ್ತು ವೇಶ್ಯಾಜೀವನ ನಡೆಸುವ ಪುಟ್ಟತಾಯಮ್ಮ. ವೆಂಕಟಸುಬ್ಬಯ್ಯನ ಕಥೆ ಹೇಳುವಾಗ ಚಿನ್ನಪ್ಪ ಮತ್ತು ಪುಟ್ಟತಾಯಮ್ಮ ಬಳಸುವ ಸಂಸ್ಕೃತ ಭೂಯಿಷ್ಠ ಭಾಷೆ ಅವರಿಬ್ಬರ ಸಾಂಸ್ಕೃತಿಕವಾದ ಮತ್ತು ಬೌದ್ಧಿಕವಲಯಕ್ಕೆ ದೂರವಾದದ್ದು. ಈ ಪಾತ್ರಗಳು ತಮ್ಮ ಸಾಂಸ್ಕೃತಿಕವಾದ ವಲಯವನ್ನು ಮೀರಿ ಲೇಖಕನ ಬೌದ್ಧಿಕವಾದ ವಲಯಕ್ಕೆ ಹತ್ತಿರವಾಗಿ ಮಾತನಾಡುತ್ತವೆ. ಕತೆ ಹೇಳುವ ಪಾತ್ರಗಳ ರೀತಿ, ನೀತಿ, ಸಾಂಸ್ಕೃತಿಕ ಪರಿಸರ ಹಿಂದೆ ಸರಿದು ಲೇಖಕರ ಭಾವೋದ್ದೀಪಕ ಶೈಲಿ ಕಂಗೊಳಿಸುತ್ತದೆ. ಹಾಗಾಗಿ ಹಂಸಗೀತೆ ತಂತ್ರದಲ್ಲಿ ಸೋಲುತ್ತದೆ.

ನಾಲಗೆ ಕತ್ತರಿಸಿಕೊಂಡ ವೆಂಕಟಸುಬ್ಬಯ್ಯನ ಕಥೆಯನ್ನು ತೊರೆಯೂರಿನ ಗೋವಿಂದಪ್ಪ ರೋಚಕವಾಗಿ ಹೇಳುತ್ತಾನೆ. ಕಾದಂಬರಿ ಮುಂದುವರೆದಂತೆಲ್ಲಾ ಕಥೆಹೇಳುವ ಪಾತ್ರದಾರಿಯಾದ ಲೇಖಕ ಮತ್ತು ಉಳಿದ ಪಾತ್ರಗಳು ಹಿಂದೆ ಸರಿದು ಕಥೆಯೊಂದೇ ಕಣ್ಮುಂದೆ ನಿಲ್ಲುತ್ತದೆ. ಇಲ್ಲಿನ ಪಾತ್ರಗಳು ಓದುಗರಲ್ಲಿ ಕಣ್ಣೀರು ಸುರಿಸುವಂತೆ ಮಾಡಿ ಭಾವುಕರನ್ನಾಗಿಸುತ್ತವೆ. "ಸಂಗೀತಗಾರನೊಬ್ಬನ ಬಾಲ್ಯಹಂದರದ ಮೇಲೆ ಹಿಂದಿನ ಮತ್ತು ಇಂದಿನ ಸಂಸ್ಕೃತಿಯನ್ನು ನಾನಿಲ್ಲಿ ಚಿತ್ರಿಸಲೆಳೆಸಿದ್ದೇನೆ. ಕಾದಂಬರಿಯ ಲೇಖನದಲ್ಲಿ ಬಳಸಿರುವ ತಂತ್ರಕ್ಕೆ ಅದು ಕಾರಣ"[2]

ಎಂದು ಕಾದಂಬರಿಕಾರರೇ ಮುನ್ನುಡಿಯಲ್ಲಿ ಹೇಳಿರುವ ಮಾತು ತಂತ್ರಕ್ಕಾಗಿಯೇ ತಂತ್ರವನ್ನು ಬಳಸಿದ್ದಾರೆಂದು ಹೇಳಬಹುದಾಗಿದೆ. ಹಾಗಾಗಿ 'ಹಂಸಗೀತೆ' ತಾಂತ್ರಿಕದೋಷದಿಂದ ಕೂಡಿದೆ ಆದರೂ ಕೂಡ ಸಶಕ್ತವಾದ ಬರವಣಿಗೆ ಬಳಸಿರುವುದರಿಂದ ಎಲ್ಲರ ಮೆಚ್ಚುಗೆಗೆ ಪಾತ್ರವಾಗಿದೆ.

'ಶಿಲ್ಪಶ್ರೀ' ಪ್ರಾಚೀನ ವ್ಯಕ್ತಿಗಳನ್ನು ಚಾರಿತ್ರಿಕವಾದ ಹಿನ್ನೆಲೆಯಲ್ಲಿ ನೋಡುವುದು. ಕೆಲವು ಸಂದರ್ಭ ಮತ್ತು ಸನ್ನಿವೇಶಗಳಲ್ಲಿ ಹಿಂದಿನ ಘಟನೆಗಳತ್ತ ತಿರುಗಿ ತದನಂತರ ಕಥೆಯನ್ನು ಮುಂದುವರೆಸಿಕೊಂಡು ಹೋಗುವ ತಂತ್ರವನ್ನು ಕಾಣುತ್ತೇವೆ. ಲೋಕಪ್ರಸಿದ್ಧವಾದ ಶ್ರವಣಬೆಳಗೊಳದ ಗೊಮ್ಮಟ ವಿಗ್ರಹವನ್ನು ಕೆತ್ತಿಸಿದ ಗಂಗರ ಮಂತ್ರಿ ಚಾವುಂಡರಾಯನನ್ನು ಕುರಿತದ್ದಾದರೂ ಕಾದಂಬರಿಯ ನಿಜವಾದ ನಾಯಕ ಬಾಹುಬಲಿಯೇ ಎಂದು ತಿಳಿದುಬರುತ್ತದೆ. ಚಾವುಂಡರಾಯ ನಾಯಕನಾದರೂ ಅವನ ಜೀವನ ಮತ್ತು ವ್ಯಕ್ತಿತ್ವಗಳ ನಿರೂಪಣೆ ತಂತ್ರದ ಮೂಲಕ ಪಂಪನ ಆದಿಪುರಾಣದಲ್ಲಿ ಚಿತ್ರಿತವಾಗಿರುವ ಭರತ-ಬಾಹುಬಲಿಯರ ಪ್ರಸಂಗ, ಚಾವುಂಡರಾಯನ ಉತ್ತರ ಜೀವನದ ಕಥಾನೇಯ್ಗೆಯ ಜೊತೆಗೆ ರನ್ನಕವಿಯ ಪೂರ್ವಜೀವನದ ವಿವರಗಳು, ಚಾವುಂಡರಾಯ ಇಪ್ಪತ್ತು ವರ್ಷದ ಯುವಕನಾಗಿದ್ದಾಗ ಒಮ್ಮೆ ಪಂಪನನ್ನು ಸಂಧಿಸಿದ್ದಂತೆ ಕಲ್ಪಿಸಿಕೊಂಡು ಕಥೆ ಕಟ್ಟಲಾಗಿದೆ. ಅಲ್ಲದೆ ಹತ್ತನೆ ಶತಮಾನದ ರಾಜಕೀಯದ ಸ್ಥೂಲವಾದ ಚಿತ್ರಣವೊಂದನ್ನು ಇಲ್ಲಿ ಪರಿಚಯಿಸುವುದು. ಮುಂತಾದ ಈ ಎಲ್ಲ ಘಟನೆಗಳು ಹಿನ್ನೋಟತಂತ್ರದ ಮೂಲಕ ಕಾದಂಬರಿಯಲ್ಲಿ ಕಲಾತ್ಮಕವಾಗಿ ಚಿತ್ರಿಸಲ್ಪಟ್ಟಿವೆ. ಕಾದಂಬರಿಯ ವಸ್ತುವಿನ ಗಟ್ಟಿತನಕ್ಕೆ ಈ ತಂತ್ರ ಪೂರಕವಾಗಿದೆ. ಕಾದಂಬರಿಯಲ್ಲಿ ಬಳಸಿರುವ ವಸ್ತು ಪರಿಣಾಮಕಾರಿಯಾದುದೆಂಬುದಕ್ಕೆ ಕಾದಂಬರಿಯಲ್ಲಿ ಬಳಕೆಯಾಗಿರುವ ತಂತ್ರವೇ ಮುಖ್ಯವಾದ ಕಾರಣವಾಗುತ್ತದೆ.

'ಚಂದವಳ್ಳಿಯ ತೋಟ' ಒಂದು ಗ್ರಾಮಜೀವನದ ಸುತ್ತಲೂ ಹೆಣೆಯಲ್ಪಟ್ಟಿರುವ ಕಾದಂಬರಿ. ಶಾಮಣ್ಣನ ಒತ್ತಾಯಕ್ಕೆ ಚಂದವಳ್ಳಿಗೆ ಬರುವ ನಿರೂಪಕ ಕರಿಯಪ್ಪನ ವಿಚಾರದಲ್ಲಿ ಕುತೂಹಲ ವ್ಯಕ್ತಪಡಿಸುವುದೇ ಕಥಾಬೆಳವಣಿಗೆಗೆ ಕಾರಣವಾಗುತ್ತದೆ. ಕಾದಂಬರಿಯಲ್ಲಿ ನಿರೂಪಕನೇ ಪಾತ್ರಧಾರಿಯಾಗಿ ಕಥೆ ಹೇಳುವ ತಂತ್ರ ತುಂಬಾ ವಿಶಿಷ್ಟವಾದುದು. ಉತ್ತಮ ಪುರುಷವಾಚಕದಲ್ಲಿ ಕತೆ ಆರಂಭವಾದರೂ ಶಾಮಣ್ಣ ಹೇಳುವನಾಗಿ, ಲೇಖಕ ಕೇಳುವನಾಗಿ ತಂತ್ರದ ಜೊತೆಗೆ ಸಂಭಾಷಣಾ ತಂತ್ರವನ್ನು ಅಳವಡಿಸಿಕೊಂಡಿರುವುದರಿಂದ ಕಥೆಯನ್ನು ಓದಿದ ಅನುಭವಕ್ಕಿಂತ ಕಣ್ಣಮುಂದೆ ನಡೆಯುವ ಅನುಭವವಾಗುತ್ತದೆ. ನಡೆದ ಘಟನೆಗಳಲ್ಲು ಕಥಾರೂಪದಲ್ಲಿ ಒಬ್ಬನೇ ವ್ಯಕ್ತಿ ಹೇಳದೆ ಶಾಮಣ್ಣ ಒಮ್ಮೆ ಕಾವೇರತ್ತೆ ಒಮ್ಮೆ ಹೇಳುತ್ತಾರೆ. ಕಥಾವಾಚಕರು ಇಬ್ಬರಾದರೂ ಹೇಳುವ ಧಾಟಿಯಲ್ಲಿ ಅಂತಹ ವ್ಯತ್ಯಾಸವೇನೂ ಕಂಡುಬರುವುದಿಲ್ಲ. ಕಥಾವಾಚಕರು ಕಥೆ ಹೇಳಲು ಆರಂಭಿಸಿದ ಅನಂತರ ಓದುಗನಿಗೆ ಲೇಖಕನನ್ನು ಬಿಟ್ಟು ಶಾಮಣ್ಣನಾಗಲಿ, ಕಾವೇರತ್ತೆಯಾಗಲಿ ಕಥೆ ಹೇಳುತ್ತಿದ್ದಾರೆಂದೆನಿಸುವುದೇ ಇಲ್ಲ. ಎಳೆ ಎಳೆಯಾಗಿ ಕಥೆ ಹೇಳುತ್ತಲೇ ಪ್ರತಿಯೊಬ್ಬ ವ್ಯಕ್ತಿಯ ಸ್ವಭಾವವನ್ನು ಸೂಕ್ಷ್ಮವಾದ

ಪ್ರಸಂಗಗಳನ್ನು ರಸವತ್ತಾಗಿ ನಿರೂಪಿಸುವಲ್ಲಿ ಕಷ್ಟವಾಗುತ್ತದೆ. ಇಲ್ಲಿ ಕತೆಯನ್ನು ಬೇರೆ ಯಾರೇ ಹೇಳಿದರೂ ಕಾದಂಬರಿಕಾರರೇ ಹೇಳಿದಂತೆ ಭಾಸವಾಗುತ್ತದೆ. ನಿರೂಪಣಾ ಕ್ರಮದ ಮಿತಿಯನ್ನು ಹೊರತುಪಡಿಸಿದರೆ ಹಿನ್ನೋಟ ತಂತ್ರವನ್ನು ಯಶಸ್ವಿಯಾಗಿ ಬಳಸಿರುವ ಕಾದಂಬರಿ ಚಂದವಳ್ಳಿಯತೋಟ.

ಒಂದೇ ಕೃತಿಯಲ್ಲಿ ಕಾಣುವ ಹಲವು ತಂತ್ರಗಳಿಗೆ ನಿದರ್ಶನ 'ಮರಳು ಸೇತುವೆ' ಕಾದಂಬರಿ. ಪತಿ–ಪತ್ನಿಯರ ಸರಸ ಸಂಭಾಷಣಾ ತಂತ್ರದೊಂದಿಗೆ ಕಾದಂಬರಿ ಆರಂಭವಾಗುತ್ತದೆ. ದೇವಾಲಯದ ಸ್ವತ್ತನ್ನು ಅಪಹರಿಸಲು ಯತ್ನಿಸುವವರಿಗೆ ಎಚ್ಚರಿಕೆಯನ್ನು ನೀಡಿರುವ ಶಾಸನಗಳನ್ನು ಓದಿಯಾದಮೇಲೆ–ಆ ವಿಷಯದ ಪೂರ್ವಾಪರ ಆಲೋಚನೆ ಮಾಡುವಾಗ ಹಿನ್ನೋಟ ತಂತ್ರವನ್ನು ಪ್ರಯೋಗಿಸಿದ್ದಾರೆ. ಈ ವೇಳೆಯಲ್ಲಿ ಕಾದಂಬರಿಕಾರರೆ ಮುಖ್ಯ ಪಾತ್ರವಾಗಿ ದೇವಸ್ಥಾನದ ಅವನತಿಯ ವಿಚಾರವನ್ನು ಅರಿಯುತ್ತಾರೆ. ಶಾಸನಗಳ ನೆಪದಿಂದ ಭೂತಕಾಲದ ನೆನಪುಗಳು, ಅದು ಮುಗಿದ ಅನಂತರ ವರ್ತಮಾನಕ್ಕೆ ತೆರೆದುಕೊಳ್ಳುವುದು. ಶಾಸನಗಳಲ್ಲಿನ ಶ್ಲೋಕಗಳ ಬಗ್ಗೆ ಚರ್ಚಿಸುವಾಗ ಶೀನಿಮಾಮನ ಆಗಮನದಿಂದ ಮತ್ತೆ ತಂತ್ರ ಬದಲಾಗುವುದು.

ಈ ರೀತಿ ಕಥೆ ಹೇಳುವ ಮತ್ತು ಕೇಳುವ ಪಾತ್ರಗಳು ಜೀವಂತಿಕೆಯಿಂದ ಓಡಾಡುವ ಅನುಭವವಾದರೂ ಕಥೆಯ ನಿರಂತರ ಓಟದಲ್ಲಿ ನಿಲುಗಡೆ ಕಂಡು ಬರುತ್ತದೆ. ಈ ತರಹದ ಆತ್ಮವೃತ್ತಾಂತ ತಂತ್ರ ತ.ರಾ.ಸು. ಅವರ ಬೇರೆ ಕಾದಂಬರಿಗಳಾದ ಹಂಸಗೀತೆ ಮತ್ತು ಚಂದವಳ್ಳಿಯ ತೋಟದಲ್ಲಿಯೂ ಕಂಡುಬರುತ್ತದೆ. ಹೀಗೆ ಒಂದೇ ಕಾದಂಬರಿಯಲ್ಲಿ ಕಾಣುವ ಹಲವು ತಂತ್ರಗಳು ಸೇರಿರುವುದರಿಂದ 'ಮರಳುಸೇತುವೆ' ಕಾದಂಬರಿಯ ಮೌಲ್ಯವನ್ನು ಹೆಚ್ಚಿಸಿವೆ.

'ಬಿಡುಗಡೆಯ ಬೇಡಿ' ಸ್ತ್ರೀಸ್ವಾತಂತ್ರ್ಯವನ್ನು ಬಿಂಬಿಸುವ ಕಾದಂಬರಿ. ವರ್ತಮಾನದಲ್ಲಿ ಆರಂಭವಾಗುವ ಕಾದಂಬರಿ ಪ್ರಭಾವತಿಯ ಹೋರಾಟದ ಬದುಕನ್ನು ಚಿತ್ರಿಸುವಲ್ಲಿ ಹಿನ್ನೋಟ ತಂತ್ರದ ಮೂಲಕ ಭೂತಕಾಲದ ನೆನಪನ್ನು ತರುತ್ತದೆ. ಕಾದಂಬರಿಯ ಮುಕ್ತಾಯವಾಗುವುದು ವಾಸ್ತವದ ಮೂಲಕ. ಕಾದಂಬರಿಕಾರರು ನಿರೂಪಣಾ ವಿಧಾನದಲ್ಲಿ ಕಾದಂಬರಿಗೆ ಮೆರುಗನ್ನು ಕೊಡುವಂತೆ ಪ್ರಭಾವತಿಯ ಸುಪ್ತ ಮನೋಲಹರಿಯನ್ನು ಚಿತ್ರಿಸುತ್ತಾರೆ. ಇಲ್ಲಿ ಬಳಸಿರುವ 'ಸುಪ್ತಮನೋಲಹರಿ ತಂತ್ರ' ಅತ್ಯಂತ ಪರಿಣಾಮಕಾರಿಯಾದುದು. "ಕಾದಂಬರಿಯ ರಚನೆಯಲ್ಲಿ, ನಿರೂಪಣಾ ವಿಧಾನದಲ್ಲಿ "ಸುಪ್ತ ಮನೋಲಹರಿ" ತಂತ್ರವನ್ನು ಅಳವಡಿಸಿಕೊಂಡಿದ್ದೇನೆ. ಕಾದಂಬರಿಯ ಉದ್ದಕ್ಕೂ ಇದು ಕಾಣದಿದ್ದರೂ ಕಾದಂಬರಿಯಲ್ಲಿ ಅಲ್ಲಲ್ಲಿ, ಮುಕ್ತಾಯದ ಘಟ್ಟದಲ್ಲಿ ಎದ್ದು ಕಾಣುತ್ತದೆ"[೮] ಎಂದು ಕಾದಂಬರಿಕಾರರೇ ಕಾದಂಬರಿಯ ಮುನ್ನುಡಿಯಲ್ಲಿ ಹೇಳಿದ್ದಾರೆ. ಈ ತಂತ್ರದಿಂದ ಕಾದಂಬರಿಯ ನಿರೂಪಣೆಗೆ ಬಿಗಿಬರುತ್ತದೆ ಅದಮುಷ್ಟಿಯೊದಗುತ್ತದೆ. ಪರಿಣಾಮ ರಮಣೀಯತೆಗೆ ಮೆರಗು ಬರುತ್ತದೆನ್ನುವ ಮಾತು ಕಾದಂಬರಿಯ ದೃಷ್ಟಿಯಲ್ಲಿ

ಸತ್ಯವಾದದ್ದೆ. ಕಾದಂಬರಿಕಾರರ ಈ ಪ್ರಯೋಗ ಪ್ರಿಯತೆಯ ತಂತ್ರ ಬಳಕೆ ಕೃತಿಯ ಯಶಸ್ಸಿಗೆ ಕಾರಣವಾಗಿದೆ.

ಇದಲ್ಲದೆ 'ಪಂಜರದ ಪಕ್ಷಿ', 'ಕಾಮಾಕ್ಷಿ' ಮತ್ತು 'ಒಮ್ಮೆನಕ್ಕನಗು' ಮುಂತಾದ ಕಾದಂಬರಿಗಳಲ್ಲೂ "ಸುಪ್ತಮನೋಪ್ರವಾಹ" ತಂತ್ರವನ್ನು ಬಳಸಲಾಗಿದೆ. 'ಕಾಮಾಕ್ಷಿ'ಯಲ್ಲಿ ಕಾಮಾಕ್ಷಿಯ ಮಾನಸಿಕ ಆಸೆ ಆಕಾಂಕ್ಷೆಗಳನ್ನು ಈ ತಂತ್ರದ ಮೂಲಕ ವಿವರಿಸುತ್ತಾ ಹೋಗುತ್ತಾರೆ.

ಅರ್ಧ ನಿದ್ರೆ, ಅರ್ಧ ಎಚ್ಚರದ ಮೂಲಕ ಅವಳ ಭಾವನೆಗಳನ್ನು ಪ್ರಸ್ತುತಪಡಿಸುವ ವಿಧಾನ ತುಂಬಾ ನೂತನ ತಂತ್ರ ಮುಂದಿನ ಕಾದಂಬರಿಗಳಲ್ಲಿ ಸಿದ್ಧಿಯನ್ನು ಸಾಧಿಸಿದೆ. 'ಆಕಸ್ಮಿಕ', ಅಪರಾಧಿ', 'ಪರಿಣಾಮ' ಕಾದಂಬರಿ ಮಾಲೆಯಲ್ಲೂ ಬಯಕೆ ಮತ್ತು ಭೀತಿಯನ್ನೊಳಗೊಂಡ ವ್ಯಕ್ತಿಯ ಮನದ (ಮೂರ್ತಿಯ) ಸುಪ್ತ ಆಸೆ ಆಕಾಂಶೆಗಳನ್ನು ಮನೋವಿಶ್ಲೇಷಣಾತ್ಮಕ ತಂತ್ರದ ಮೂಲಕ ವಿವರಿಸುತ್ತಾರೆ. ಇದೇ ರೀತಿ ತಂತ್ರ ಅಳವಡಿಸಿಕೊಂಡು ಬೆಳೆದ ಕಾದಂಬರಿಗಳೆಂದರೆ 'ಜೀತದ ಜೀವ', 'ಬೇಡದಮಗು', 'ಮನೆಗೆಬಂದ ಮಹಾಲಕ್ಷ್ಮಿ', 'ನಾಗರಹಾವು', 'ಒಂದುಗಂಡು ಎರೆಡು ಹೆಣ್ಣು', ಸರ್ಪಮತ್ಸರ ಕಾದಂಬರಿ ಮಾಲೆ ಮುಂತಾದುವು.

'ಪಂಜರದ ಪಕ್ಷಿ' ಯಲ್ಲಿ ಬೇರೆಲ್ಲಾ ಕಾದಂಬರಿಗಳಿಗಿಂತಲೂ ನೂತನವಾದ ತಂತ್ರವೊಂದನ್ನು ವಸ್ತುವಿನ ಆಯ್ಕೆಯಲ್ಲಿ, ನಿರೂಪಣೆಯಲ್ಲಿ ಬಳಸಿದ್ದೇನೆಂದು ಕಾದಂಬರಿಕಾರರೇ ಮುನ್ನುಡಿಯಲ್ಲಿ ಹೇಳಿದ್ದಾರೆ. ಕಾದಂಬರಿಗೆ ಅಳವಡಿಸಿರುವ ಹೊಸತಂತ್ರ "ಸುಪ್ತಚಿತ್ತಪ್ರವಾಹ ತಂತ್ರ". "ಒಬ್ಬ ವ್ಯಕ್ತಿ ಒಂದು ಕೆಲಸ ಮಾಡುವಾಗ, ಒಂದು ಮಾತನ್ನಾಡುವಾಗ ಆತನ ಸುಪ್ತಚಿತ್ತ ಅದಕ್ಕೆ ಸಂಬಂಧಿಸಿದಂತೆ ಬೇರೆ ವಿಷಯಗಳ ಚಿಂತನೆ ಮಾಡುತ್ತಿರುತ್ತದೆ ಎಂಬ ಮನೋವೈಜ್ಞಾನಿಕ ನಿಯಮವೇ ಈ ತಂತ್ರದ ತಳಹದಿ".[೯] ಮುನ್ನುಡಿಯಲ್ಲಿ ಕಾದಂಬರಿಕಾರರೆ ಹೇಳಿದ್ದಾರೆ. ಕಾದಂಬರಿಯಲ್ಲಿ ಕೋಮಲೆಯ ಸುಪ್ತ ಬಯಕೆಗೆ ಬಾಹ್ಯಕ್ರಿಯೆಯು ಪೂರಕವಾಗಿ ಕೆಲಸಮಾಡುತ್ತದೆ. ತನ್ನನ್ನೆ ತಾನು ಕೇಳಿಕೊಳ್ಳುವ, ತನ್ನನ್ನೆ ತಾನು ಪ್ರಶ್ನಿಸಿಕೊಳ್ಳುವ ಕೋಮಲೆಯ ಮನದ ತುಡಿತ, ಮಿಡಿತಗಳನ್ನು ತುಂಬಾ ಜಾಗರೂಕತೆಯಿಂದ ಸೆರೆಹಿಡಿದಿದ್ದಾರೆ. ಕಾದಂಬರಿಯ ವಸ್ತು ವಿಶಿಷ್ಟವಾದದ್ದೇನೂ ಅಲ್ಲ. ಘಟನೆಗಳು ಮತ್ತು ಸನ್ನಿವೇಶಗಳು ಅಷ್ಟೊಂದು ಪರಿಣಾಮ ಬೀರುವುದಿಲ್ಲ. ಆದರೂ ತಂತ್ರ ಪ್ರಯೋಗದಿಂದ ಇದು ಉತ್ತಮವಾದ ಕೃತಿ. ಶಿಶುದೈತ್ಯ ಕಾದಂಬರಿ 'ಆತ್ಮನಿವೇದನೆಯ' ತಂತ್ರದಿಂದ ಕೂಡಿರುವ ಕೃತಿ. ಇದರ ನಿರೂಪಣಾ ವಿಧಾನ ತುಂಬಾ ವಿಶಿಷ್ಟವಾದುದು. ಚಿಕ್ಕ ಕೃತಿಯಾದರೂ ಕಥೆ ಆರಂಭವಾಗುವುದೇ ಅರ್ಧಭಾಗದಿಂದ ಮುಂದಕ್ಕೆ

**೭.೪ ತ.ರಾ.ಸು. ಅವರ ಕಾದಂಬರಿಗಳ ಶಿರೋನಾಮೆಗಳ ಔಚಿತ್ಯ :**

ತ.ರಾ.ಸು. ಅವರು ತಮ್ಮ ಕಾದಂಬರಿಗಳ ಶಿರೋನಾಮೆಯಲ್ಲೇ ವೈಶಿಷ್ಟ್ಯವನ್ನು ಮೆರೆದಿದ್ದಾರೆ. ಶಿರೋನಾಮೆಯಡಿಯಲ್ಲಿ ಕಥಾಭಾಗಗಳನ್ನು ಹಂತ ಹಂತವಾಗಿ ಬರೆದಿರುವುದು ತ.ರಾ.ಸು. ಅವರ ವೈಶಿಷ್ಟ್ಯ ಇವರ ಯಾವುದೇ ಕಾದಂಬರಿಗಳ ತಲೆಬರಹ ಒಂದು ಹೊಸತನದಿಂದ ಕೂಡಿರುವುದನ್ನು ಕಾಣುತ್ತೇವೆ. ಕಾದಂಬರಿಯ ವಸ್ತುವನ್ನು ಸಮರ್ಥವಾಗಿ ಸಮರ್ಥಿಸುವ ಶೀರ್ಷಿಕೆಗಳು ಹೊಸತನಕ್ಕೆ ಒತ್ತುಕೊಟ್ಟಿವೆ. ಹಾಗಾಗಿ ತ.ರಾ.ಸು. ಅವರನ್ನು ಒಬ್ಬ ಸಮರ್ಥ ಕಾದಂಬರಿಕಾರ ಎಂದು ಕರೆಯಬಹುದು. ಇವರ ತಂತ್ರ ವೈವಿಧ್ಯಕ್ಕೆ, ವೈಶಿಷ್ಟ್ಯಕ್ಕೆ ಶಿರೋನಾಮೆಗಳು ತಕ್ಕ ನಿದರ್ಶನಗಳು. ಕನ್ನಡ ಕಾದಂಬರಿ ಪ್ರಕಾರದಲ್ಲಿ ತ.ರಾ.ಸು. ಅವರಷ್ಟು ಸಾರ್ಥಕತೆಯನ್ನು ಕಾದಂಬರಿಗೆ ಹೆಸರಿಸುವಲ್ಲಿ ಯಾರೂ ಪಡೆದಿರಲಿಲ್ಲ.

ವಿರೋಧಭಾಸದ ಪದಗಳನ್ನು ಸೇರಿಸಿ ಕಾದಂಬರಿಗೆ ಹೆಸರಿಡುವಲ್ಲಿ ತ.ರಾ.ಸು. ಅವರು ಹೆಚ್ಚಿನ ಆಸಕ್ತಿ ತಳೆದಿದ್ದಾರೆಂಬುದಕ್ಕೆ ನಿದರ್ಶನ 'ಬಿಡುಗಡೆಯಬೇಡಿ' ಕಾದಂಬರಿ. ಇಲ್ಲಿ ಬಿಡುಗಡೆಯನ್ನು ತಿಳಿಸುವ, ಸ್ತ್ರೀಸ್ವಾತಂತ್ರ್ಯ ಕುರಿತು ಹೇಳಿದ ಕಾದಂಬರಿಕಾರರು ಮತ್ತೆ ಬೇಡಿಯನ್ನು ಹಾಕುತ್ತಾರೆ. ಭಾರತೀಯ ನಾರಿಗೆ ಸ್ವಾತಂತ್ರ್ಯ ಕೂಡ ಒಂದು ರೀತಿಯ ಬಂಧನವೇ ಎಂಬುದನ್ನು ಚಿತ್ರಿಸುತ್ತಾರೆ. ಅದೇ ರೀತಿ 'ಮಸಣದ ಹೂವು'. ಹೂವು ಎಲ್ಲರಿಗೂ ಬೇಕು ಆದರೆ ಮಸಣದ ಹೂವನ್ನು ಯಾರೂ ಬಯಸುವುದಿಲ್ಲ. ಇಲ್ಲಿ ಬೇಕು, ಬೇಡ ಶಬ್ದಗಳ ಅರ್ಥ ದ್ವಂದ್ವದಿಂದ ಕೂಡಿರಬಹುದು. ಆದರೂ ವ್ಯಾಪಕವಾದ ಅರ್ಥ ಇಲ್ಲಿ ಕಂಡುಬರುತ್ತದೆ. ಒಳಗೊಳಗೆ ವೇಶ್ಯೆಯನ್ನು ಎಲ್ಲರು ಬಯಸುತ್ತಾರೆ ಆದರೆ ಬಹಿರಂಗದಲ್ಲಿ ಯಾರೂ ಬಯಸುವುದಿಲ್ಲ. ಈ ರೀತಿ ವೇಶ್ಯೆಯರ ನಿರರ್ಥಕ ಬದುಕಿನ ಸಂಕೇತವಾಗಿ 'ಮಸಣದ ಹೂವು' ಕಂಡುಬರುತ್ತದೆ.

ತ.ರಾ.ಸು.ಅವರ ಐತಿಹಾಸಿಕ ಕಾದಂಬರಿ 'ಸಿಡಿಲಮೊಗ್ಗು'. ಇಲ್ಲಿ ಸಿಡಿಲು ಮತ್ತು ಮೊಗ್ಗು ಎರಡೂ ವಿರೋಧಿ ಪದಗಳು. ವಿಷ್ಣುವರ್ಧನನ ಬಾಲ್ಯದ ನೆನಪನ್ನು ಸಂಕೇತಿಸುವುದು ಮೊಗ್ಗಾದರೆ, ಅವನ ಪ್ರತಿಭಟನೆ ಪ್ರಕ್ರಿಯೆಗಳು ಸಿಡಿಲಾಗಿ ಧ್ವನಿಸುತ್ತವೆ. ಅದೇ ರೀತಿ 'ರಾಜ್ಯದಾಹ' ಅಧಿಕಾರದ ದಾಹವನ್ನು ಕುರಿತದ್ದು. 'ದುರ್ಗಾಸ್ತಮಾನ' ತ.ರಾ.ಸು. ಅವರಿಗೆ ಕೀರ್ತಿ, ಗೌರವ ತಂದುಕೊಟ್ಟ ಕೃತಿ. ಹನ್ನೊಂದರಿಂದ ಹನ್ನೆರೆಡು ಜನ ಪಾಳೆಯಗಾರರ ಆಳ್ವಿಕೆ ಕೊನೆಯಾಗುತ್ತದೆ, ದುರ್ಗವೆಂದರೆ ಕೋಟೆ, ಅಸ್ತಮಾನ ವೆಂದರೆ ಅಸ್ತಂಗತವಾಗು, ಮುಳುಗಿಹೋಗು ಎಂದರ್ಥ. ಚಿತ್ರದುರ್ಗದ ಕೋಟೆಯನ್ನು ಹೈದರಾಲಿ ವಶಪಡಿಸಿಕೊಳ್ಳುವುದರ ಮೂಲಕ ಮದಕರಿನಾಯಕನನ್ನು ಸೆರೆಹಿಡಿಯುತ್ತಾನೆ. ನಾಯಕನ ಆಳ್ವಿಕೆ ಕೊನೆಗೊಳ್ಳುವುದರ ಮೂಲಕ ದುರ್ಗಾಸ್ತಮಾನವಾಗುತ್ತದೆ ಎಂಬ ಶೀರ್ಷಿಕೆಯಂತೂ ತುಂಬಾ ಔಚಿತ್ಯಪೂರ್ಣವಾದುದು.

'ಮರಳುಸೇತುವೆ' ಅಂತರ ಉಸುಕಿನಲ್ಲಿ (ಮರಳು) ಸೇತುವೆ ಕಟ್ಟಲಾಗುವುದಿಲ್ಲವೆಂಬುದು ಹದಗೆಟ್ಟ ಬದುಕಿನ ಸಂಕೇತವಾಗಿ ಮರಳು, ಸೇತುವೆ ಕಂಡುಬರುತ್ತವೆ.'ಪರಿಮಳದ ಉರುಳು'

ಇಲ್ಲಿ ಪರಿಮಳ ಕಾಮದ ಪ್ರತೀಕವಾದರೆ 'ಉರುಳು' ಭಯದ ಸಂಕೇತ. ಪ್ರೇಮ ಅಥವಾ ಕಾಮ ಮಾನವ ಬದುಕಿನ ಜೀವಾಳವೆಂಬುದು ಸುಸ್ಪಷ್ಟ. 'ಗಾಳಿಮಾತು' ಗಾಳಿ ಇಲ್ಲಿ ಅದೃಶ್ಯದ ಸಂಕೇತ ಮಾತು ಇಲ್ಲಿ ವ್ಯಕ್ತದ ಸಂಕೇತ. ಎಷ್ಟೊ ಜನಗಳ ಬದುಕಲ್ಲಿ ಅವಶ್ಯಕವಾದ ವಿಷಯಗಳು ದುರಂತ ತಂದೊಡ್ಡುತ್ತವೆ. ಹಾಗೆಯೇ ಇಲ್ಲಿ ಗಾಳಿಮಾತು ಕನಕಳ ಆತ್ಮಹತ್ಯೆಗೆ ಕಾರಣವಾಗುತ್ತದೆ. 'ಶಿಶುದೈತ್ಯ', ಶಿಶು ಒಂದು ಭಾವದ ಸಂಕೇತವಾದರೆ ದೈತ್ಯ ರೌದ್ರಭಾವದ ಸಂಕೇತ, ಮತೀಯತೆ ಸಣ್ಣದಾಗಿ ಬೆಳೆದು ದೈತ್ಯರೂಪವನ್ನು ಪಡೆಯುತ್ತದೆ. ಬೆಂಕಿಯಬಲೆ' ಇಲ್ಲಿ ಬೆಂಕಿ ಬದುಕಿನ ಬವಣೆಯ (ಬಡತನ) ಸಂಕೇತ, ಬಲೆ ಬಂಧನದ ಸಂಕೇತ. ಬಡತನದ ಬವಣೆಗೆ ಸಿಲುಕಿರುವ ಶಾಲಾ ಉಪಾಧ್ಯಾಯನೊಬ್ಬ ಸಾಮಾಜಿಕವಾದ ಕ್ರೌರ್ಯಕ್ಕೆ ಹೇಗೆ ಸಿಲುಕುತ್ತಾನೆಂಬುದೇ ಬೆಂಕಿಯಬಲೆ.

'ನಾಲ್ಕುXನಾಲ್ಕು= ಒಂದು' ತುಂಬಾ ವಿಶಿಷ್ಟವಾದ ಶೀರ್ಷಿಕೆ. ಗಣಿತಶಾಸ್ತ್ರದ ಹಿನ್ನೆಲೆಯ ಶಿರೋನಾಮೆ. "ನಾಲ್ಕು" ಶಬ್ದ ನಾಲ್ಕುನೂರು ಹಸುಗಳನ್ನು ಸಂಕೇತಿಸುತ್ತದೆ. ಮುಂದುವರೆದು. "ನಾಲ್ಕು ಬ್ರಹ್ಮಜ್ಞಾನದ ನಾಲ್ಕು ಪಾದಗಳು. ಬ್ರಹ್ಮನ ಹದಿನಾರು ಕಲೆಗಳನ್ನು ನಾಲ್ಕು X ನಾಲ್ಕು ವಿಂಗಡಿಸಿ ಆ ಒಂದೊಂದು ಕಲೆಯನ್ನು ಕ್ರಮವಾಗಿ ೧) ಪ್ರಕಾಶ್‌ವಾನ್ ೨)ಅನಂತವಾನ್ ೩)ಜ್ಯೋತಿಷ್ಮಾನ್ ೪)ಆಯಾತನಮಾನ್ ಎಂದು ಕರೆಯಲಾಗಿದೆ. ನಾಲ್ಕುX ನಾಲ್ಕು ಗುಣಲಬ್ಧವಾದ ಹದಿನಾರು ಏಕೈಕ ಬ್ರಹ್ಮನನ್ನು ನಿರ್ದೇಶಿಸಿರುವುದರಿಂದ ತ.ರಾ.ಸು.ಅವರು ತಮ್ಮ ಕಾದಂಬರಿಯನ್ನು ನಾಲ್ಕು Xನಾಲ್ಕು =ಒಂದು' ಎಂದು ಕರೆದಿರುವುದು ಸಹ ಅತ್ಯಂತ ಮಾರ್ಮಿಕವಾದುದು"[೧೦] ಹಾಗೂ ತುಂಬಾ ಸಾಂಕೇತಿಕವೂ ಆಗಿದೆ. (ಅಲ್ಲದೆ ಕಥಾಭಾಗವನ್ನು ನಾಲ್ಕು ಪಾದಗಳಾಗಿ ವಿಂಗಡಿಸಿರುವುದೂ ಗಮನಿಸಬಹುದಾದ ಅಂಶವೇ ಆಗಿದೆ).

ಆಯಾ ಭಾಗದ ಕಥೆಯ ತಿರುಳನ್ನು ಸಂಕ್ಷಿಪ್ತವಾಗಿ ಹೇಳುವುದು. ಅರ್ಥಪೂರ್ಣವಾದ ಪದಗಳಲ್ಲಿ ಅಳವಡಿಸುವುದು ಒಂದು ಕಲೆ. ಈ ತರಹದ ಪದಗಳು ಅಥವಾ ಶಿರೋನಾಮೆಗಳು ಕಥೆ ಸಾಗುವುದರ ಪೂರ್ವಭಾವಿ ಸೂಚನೆಯೇ ಆಗುತ್ತದೆ. ಶಿರೋನಾಮೆಗಳಿಲ್ಲದಿದ್ದರೂ ಕಥೆಯ ಓಟಕ್ಕೆ ಯಾವುದೇ ಭಂಗಬರುವುದಿಲ್ಲ. ಆದರೆ ತ.ರಾ.ಸು.ಅವರ ಶಿರೋನಾಮೆಗಳು ಕಥಾಪ್ರವಾಹಕ್ಕೆ ವಿಶಿಷ್ಟ ಗತಿಯನ್ನು ತಿಳಿಸುತ್ತವೆ. ಇದುವರೆಗಿನ ಅವಲೋಕನದಿಂದ ತ.ರಾ.ಸು. ಅವರು ತಂತ್ರ ಪ್ರಯೋಗಶೀಲರೆಂಬುದು ಗೊತ್ತಾಗುತ್ತದೆ. ಹಿನ್ನೋಟ ತಂತ್ರ ಸುಪ್ತಮನೋಪ್ರವಾಹ ತಂತ್ರ, ಸಂಭಾಷಣೆ ಮುಂತಾದ ಹಲವು ತಂತ್ರಗಳನ್ನು ತಮ್ಮ ಕಾದಂಬರಿಗಳಲ್ಲಿ ಪ್ರಯೋಗಿಸಿದ್ದಾರೆ. ಒಂದೇ ಕಾದಂಬರಿಯಲ್ಲಿ ಹಲವು ತಂತ್ರಗಳನ್ನು ಬಳಸಿದ್ದಾರೆ. ಹಲವು ಕಾದಂಬರಿಗಳನ್ನು ಒಂದೇ ತಂತ್ರದಲ್ಲಿ ಬರೆದಿದ್ದಾರೆ. ಈ ತರಹದ ತಂತ್ರಬಳಕೆ ವೈವಿಧ್ಯಮಯವಾದುದು ಮತ್ತು ವಿನೂತನವಾದ ಪ್ರಯೋಗ. ಆದರೆ ಕೆಲವು ಸಂದರ್ಭದಲ್ಲಿ ಕೃತಕತೆಯೂ ಕಂಡುಬರುತ್ತದೆ.

ಒಟ್ಟಾರೆ ತ.ರಾ.ಸು. ಅವರು ಪ್ರತಿಭಾವಂತ ಕಾದಂಬರಿಕಾರರೆಂಬುದಕ್ಕೆ, ಅವರು ಬಳಸಿರುವ ವೈವಿಧ್ಯತೆಯಿಂದ ಕೂಡಿದ ತಂತ್ರವೇ ಸಾಕ್ಷಿ.

**೭.೫ ತ.ರಾ.ಸು. ಅವರ ಕಾದಂಬರಿಗಳ ಶೈಲಿ :**

ಬರಹಗಾರನೊಬ್ಬನ ಸಾಧನೆಯೆಲ್ಲವು ಅವನು ಬಳಸುವ ಭಾಷೆಯಲ್ಲಿ ಅಡಗಿರುತ್ತದೆ. ಒಂದೇ ಮನೋಧರ್ಮದ, ಒಂದೇ ಪರಂಪರೆಗೆ ಸೇರಿದ ಲೇಖಕರಲ್ಲಿಯೂ ವಿಭಿನ್ನ ದೃಷ್ಟಿಕೋನ, ಭಾಷೆ, ಶೈಲಿ ಬಳಕೆಯಾಗಿರುವುದು ಕಂಡುಬರುತ್ತದೆ. ಕವಿಪ್ರತಿಭೆಯಿಂದ ಹೊರಹೊಮ್ಮಿದ ಕೃತಿಯೊಂದು ಸಹಜವಾಗಿಯೇ ಆತನ ವೈಯಕ್ತಿಕತೆಯನ್ನು ಪ್ರತಿಬಿಂಬಿಸುತ್ತದೆ/ ನವೋದಯ ಪಂಥದಲ್ಲಿನ ಕವಿಗಳ ಆಶಯ, ಮನೋಧರ್ಮ, ವಸ್ತು ಒಂದೇ ಆದರೂ ಅವರಲ್ಲಿ ವೈಶಿಷ್ಟ್ಯತೆ ಕಾಣಲು ಸಾಧ್ಯವಿದೆ. ಲಲಿತ ಶೈಲಿ ಬಳಸಿದ ಕೆ.ಎಸ್.ನ. ಸಂಸ್ಕೃತಭೂಯಿಷ್ಠ ಭಾಷೆ ಬಳಸಿದ ಕುವೆಂಪು, ಜಾನಪದ ಸೊಗಡನ್ನು ಮೈಗೂಡಿಸಿಕೊಂಡಿದ್ದ ಬೇಂದ್ರೆ ಮುಂತಾದವರಲ್ಲಿ ವೈಯಕ್ತಿಕ ಶೈಲಿ ಗುರುತಿಸಬಹುದು.) ಅದೇ ರೀತಿ ಪ್ರಗತಿಶೀಲ ಪಂಥದಲ್ಲಿ ಕೃತಿ ರಚನೆಗೆ ತೊಡಗಿದ ತ.ರಾ.ಸು, ಕಟ್ಟೀಮನಿ, ನಿರಂಜನರ ಆರಂಭದ ಕೃತಿಗಳಲ್ಲಿ ವೈಶಿಷ್ಟ್ಯತೆ ಕಂಡುಬರುತ್ತದೆ. ತ.ರಾ.ಸು. ಅವರು ಭಾಷೆಯಲ್ಲಿ ನಾವಿನ್ಯತೆಯನ್ನು, ಶೈಲಿಯಲ್ಲಿ ಕುಶಲತೆಯನ್ನು ಪ್ರಯೋಗ ಮಾಡಿರುವುದನ್ನು ಕಾಣಬಹುದಾಗಿದೆ.

ಸಂಸ್ಕೃತದಲ್ಲಿ "ಗದ್ಯಂ ಕವೀನಾಂ ನಿಕಷಂ ವದಂತಿಃ" ಎಂಬ ನಾಣ್ಣುಡಿ ಉಂಟು. ಸಂಸ್ಕೃತದಲ್ಲಿ ಪದ್ಯರಚನೆಗಿಂತ ಗದ್ಯ ರಚನೆ ಕಷ್ಟವಾದದ್ದರಿಂದ ಮೇಲಿನ ಉಕ್ತಿ ಬಳಕೆಗೆ ಬಂದಿತು. ಕನ್ನಡದಲ್ಲಿ ಗದ್ಯರಚನೆ ಸುಲಭವಾದರೂ ಅದು ಬೆಳೆದು ಬಂದದ್ದು ತುಂಬಾ ತಡವಾಗಿ. "ಗದ್ಯದಲ್ಲಿ ಭಾವಕ್ಕಿಂತ ಭಾವನೆಗೆ, ಕಲ್ಪನೆಗಿಂತ ಆಲೋಚನೆಗೆ ಸಾರ್ವಭೌಮ ಪದವಿ ಸುಲಭವಾಗುವುದರಿಂದ ಭಾಷೆಯ ಗತಿ ಸಹಜವಾಗಿ ಸಾಂದ್ರೀಕರಣಕ್ಕಿಂತ ಸರಕೀರ್ಣತೆಯ ಕಡೆಗೆ ಸಾಗುತ್ತದೆ"[೧೧] ಆದ ಕಾರಣ ಬರಹಗಾರನೊಬ್ಬನಿಗೆ ಪದ ಬಳಕೆಯಲ್ಲಿ ಹೆಚ್ಚಿನ ಸಾಮರ್ಥ್ಯ ಮತ್ತು ಹಿಡಿತವಿರಬೇಕು. ಈ ಮಾತು ಗದ್ಯ ಪದ್ಯಗಳೆರಡಕ್ಕೂ ಅನ್ವಯಿಸುತ್ತದೆ. ಪ್ರತಿಭಾನ್ವಿತನಾದ ಲೇಖಕನ ಮನಸ್ಸಿನಲ್ಲಿ ಪದ ಮತ್ತು ಪದಸಮುಚ್ಚಯಗಳು ಮೂಡಿ ಬಂದಾಗ ಗದ್ಯವು ಪದ್ಯಕ್ಕಿಂತಲೂ ಉತ್ತಮವಾಗಿರುತ್ತದೆ. ಆಗ ಭಾಷೆಯ ದುಡಿಕೆ ಹೆಚ್ಚಿನದಾಗಿ ಸಾಧ್ಯವಾಗುತ್ತದೆ.

ಈ ರೀತಿ (ಭಾಷೆ ಮತ್ತು ಭಾವಗಳು ಒಂದುಗೂಡುವುದನ್ನು ಶೈಲಿ ಎಂದು ಕರೆಯಬಹುದು. ಶೈಲಿ ಕುರಿತಂತೆ ಭಾರತೀಯರಿಗಿಂತ ಪಾಶ್ಚಾತ್ಯರು ತುಂಬಾ ದೀರ್ಘವಾಗಿ ವಿಮರ್ಶೆ ಮಾಡಿದ್ದಾರೆ. ಶೈಲಿ ಕುರಿತಂತೆ ಎಸ್.ವಿ.ರಂಗಣ್ಣನವರು 'ಶೈಲಿಯ ಸ್ವರೂಪ' ಎಂಬ ಕೃತಿಯಲ್ಲಿ ಚರ್ಚಿಸಿದ್ದಾರೆ.)

ಶೈಲಿ ಕುರಿತಂತೆ ಮ್ಯಾಥ್ಯೂಅರ್ನಾಲ್ಡ್ ತಾನು ಹೇಳಬೇಕಾದುದನ್ನು ಕವಿ ಒಂದು ದೈವಿಕವಾದ ಉದ್ರೇಕಾವಸ್ಥೆಯಲ್ಲಿ ಮೇಲ್ಮೈಗೊಳಿಸಿ ರೂಪಾಂತರಗೊಳಿಸುತ್ತಾನೆ. ತನ್ಮೂಲಕ ಅದಕ್ಕೆ

ಗಾಂಭೀರ್ಯವೂ, ವೈಶಿಷ್ಟ್ಯವೂ ಕೂಡಿಕೊಳ್ಳುತ್ತದೆ. ಇದೇ ತನ್ನ ಅರ್ಥದಲ್ಲಿ ಶೈಲಿ" ಎಂದಿದ್ದಾನೆ. ಪೋಪ್ ಕವಿ "ಆಲೋಚನೆಗೆ ಮಹತ್ವ ನೀಡಿದ್ದರೆ ಮುಂದುವರೆದು ಕಾರ್ಲೈಲ್ "ಶೈಲಿ ಲೇಖಕನ ಅಂಗಿಯಲ್ಲಿ, ತೊಗಲು" ಎಂದಿದ್ದಾನೆ. ಮರ್‍ರೆ ಪ್ರಕಾರ "ಶೈಲಿ ಅವನ ದೇಹದ ಮಾಂಸ, ಮೂಳೆ ಮತ್ತು ರಕ್ತ"[೧೨] ವಾಗಿದೆ. ಆತ್ಮ ಮತ್ತು ದೇಹಕ್ಕಿರುವ ಸಂಬಂಧವೇ ಕಾವ್ಯದ ಭಾವಾಲೋಚನೆ ಮತ್ತು ಶೈಲಿಗೂ ಅವಿನಾಭವ ಸಂಬಂಧವುಂಟು. ಈ ಹೇಳಿಕೆಗಳಿಂದ ತಿಳಿಯುವುದೇನೆಂದರೆ ಬರಹಗಾರರಲ್ಲಿ ಅವರದೇ ಆದ ಲಕ್ಷಣಗಳನ್ನು, ವಿಭಿನ್ನ ಶೈಲಿ ಗುರುತಿಸಬಹುದಾಗಿದೆ.

ಭಾರತೀಯ ಕಾವ್ಯಮೀಮಾಂಸೆಯಲ್ಲೂ ಶೈಲಿ ಕುರಿತಂತೆ ಚರ್ಚೆ ನಡೆದಿದೆ. ರೀತಿಸಿದ್ಧಾಂತದ ಪ್ರತಿಪಾದಕನಾದ ವಾಮನ "ವಿಶಿಷ್ಟ ಪದರಚನಾ ರೀತಿಃ" ಎಂದಿದ್ದಾನೆ. "ರೀತಿ"ಗಿಂತ "ಶೈಲಿ" ಶಬ್ಧ ಅರ್ಥವತ್ತಾದುದು. ಏಕೆಂದರೆ "ಶೈಲಿ" ಪದ ಕವಿಯ ಶೀಲವನ್ನು, ಸ್ವಭಾವವನ್ನು ಸೂಚಿಸುತ್ತದೆ. ಅಂಥ ಕವಿಯ ಶೀಲವೇ ಕಾವ್ಯ ಶೈಲಿ ಎಂದು ಹೇಳಬಹುದಾಗಿದೆ. ಒಬ್ಬ ಲೇಖಕನ ಶೈಲಿಯು ಅವನು ಬಳಸುವ ಭಾಷೆಯನ್ನು ಅವಲಂಬಿಸಿರುತ್ತದೆ. ಒಂದೇ ಭಾಷೆಯನ್ನು ಬೇರೆ ಬೇರೆ ಬರಹಗಾರರು ಬಳಸಿದರೂ ಅಲ್ಲಿ ಅವರದೇ ಆದ ವೈಶಿಷ್ಟ್ಯತೆ ಇರುವುದು ಸಹಜ. ಇಂತಹ ಶೈಲಿಯನ್ನು ಅಧ್ಯಯನದ ಅನುಕೂಲಕ್ಕಾಗಿ ಸರಳ ಶೈಲಿ, ಸಾಲಂಕೃತ ಶೈಲಿ, ಮಹಾಶೈಲಿ, ಭವ್ಯಶೈಲಿ ಎಂಬುದಾಗಿ ವಿಂಗಡಿಸಲಾಗಿದೆ. ಆದರೆ ಇವೆಲ್ಲವುಗಳನ್ನೂ ಮೀರಿ ಇರುವುದು ಸಹಜವಾದ ಕವಿಮನೋಧರ್ಮದಂತೆ ಶೈಲಿ ರೂಪುತಾಳುತ್ತದೆ.

'ಎಷ್ಟು ಮನೋಧರ್ಮದ ಕವಿಗಳಿದ್ದಾರೋ ಅಷ್ಟುಶೈಲಿಗಳಿವೆಯೆಂದು' ಕುಂತಕ 'ವಕ್ರೋಕ್ತಿಜೀವಿತ'ದಲ್ಲಿ ಹೇಳಿದ್ದಾನೆ.

ಇದುವರೆಗಿನ ಎಲ್ಲ ವಿವರಣೆಗಳನ್ನು ವಿಶ್ಲೇಷಿಸಿದಾಗ 'ಶೈಲಿ' ವ್ಯಕ್ತಿವಿಶಿಷ್ಟವಾದುದೆಂದು ತಿಳಿಯುತ್ತದೆ. ಆದ ಕಾರಣ ಶೈಲಿ ಒಬ್ಬರಿಂದ ಮತ್ತೊಬ್ಬರಿಗೆ ಭಿನ್ನವಾಗಿರುತ್ತದೆ. ಅಲ್ಲದೆ ತನ್ನದೆ ಆದ ರೂಪ, ವಿನ್ಯಾಸಗಳನ್ನು ಪಡೆಯುತ್ತಾ ಹೋಗುತ್ತದೆ. ಈ ಹಿನ್ನೆಲೆಯಲ್ಲಿ ತ.ರಾ.ಸು. ಅವರ ಶೈಲಿಯನ್ನು ಕುರಿತು ಅವಲೋಕಿಸಲಾಗಿದೆ.

ತ.ರಾಸು. ಅವರ ಶೈಲಿಯ ವೈಶಿಷ್ಟ್ಯತೆಯನ್ನು ಗುರುತಿಸಿದರೂ ಕೂಡ ಅವರ ಬರವಣಿಗೆಗೆ ಕೆಲವು ಮಿತಿಗಳಿದ್ದವು. ಕಾರಣ ಪ್ರಗತಿಶೀಲ ಪಂಥದ ಪರಂಪರೆಯೇ ಬರವಣಿಗೆಯನ್ನು ಸವಾಲಾಗಿ ಸ್ವೀಕರಿಸಿದ್ದರಿಂದ. ಪ್ರತಿಭಟನೆ, ಕಟ್ಟುಪಾಡುಗಳು ಅನಿವಾರ್ಯವಾಗಿ ಅವರ ಬರಹದಲ್ಲಿ ಕಾಣಿಸಿಕೊಂಡವುಏಕೆಂದರೆ ಪ್ರಗತಿಶೀಲರು ಬರೆಯಬೇಕಾಗಿದ್ದು ಮಧ್ಯಮ ವರ್ಗದವರ ಸಾಮಾಜಿಕ ಸಮಸ್ಯೆಗಳ ಬಗ್ಗೆ. ಅಲ್ಲದೆ ಇವರ ಬರವಣಿಗೆ ಸಾಮಾನ್ಯಜನರಿಗೆ ತಲುಪಬೇಕಾಗಿತ್ತು. ಆ ಕಾರಣದಿಂದ ಒಂದು ರೀತಿಯ ಬಿಕ್ಕಟ್ಟಿಗೆ ಸಿಲುಕಿದ್ದ ಪ್ರಗತಿಶೀಲರ ಮಿತಿಗಳು ಅವರ ಮೇಲೆ ಪ್ರಭಾವ ಬೀರಿರುವುದನ್ನು ಎಚ್.ಆರ್. ಕೋಮಲವಲ್ಲಿಯವರು ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳು ಒಂದು ಅಧ್ಯಯನ ಎನ್ನುವ ಮಹಾಪ್ರಬಂಧದಲ್ಲಿ ಈ ಕೆಳಗಿನಂತೆ ಗುರುತಿಸಿದ್ದಾರೆ.

೧) ಸಾಹಿತ್ಯವನ್ನು ಜನತೆಯ ಮಟ್ಟಕ್ಕೆ ತರಬೇಕೆನ್ನುವ ಆಕಾಂಕ್ಷೆ

೨) ಸಾಮಾನ್ಯರ ಕುಂದುಕೊರತೆಗಳನ್ನು ವಸ್ತುವಾಗಿಸಿಕೊಳ್ಳುವ ಉದ್ದೇಶ

೩) ವಾಸ್ತವಿಕತೆಗೆ ಬೆಲೆಕೊಡುವ ಉತ್ಸಾಹ

೪) ಕನ್ನಡ ಕಾದಂಬರಿ ಕ್ಷೇತ್ರವನ್ನು ಸಮೃದ್ಧಗೊಳಿಸುವ ಮಹಾದಾಕಾಂಕ್ಷೆ

೫) ಬದುಕಿಗಾಗಿಯೇ ಕೃತಿ ರಚಿಸಬೇಕಾದ ಅನಿವಾರ್ಯತೆ

೬) ಬರೆದೇ ಬದುಕುವಲ್ಲಿಯ ಆತುರತೆ

ಈ ಮಿತಿಗಳಿಂದಾಗಿ ಪ್ರಗತಿಶೀಲರಲ್ಲಿ ಸಹಜವಾದ ಪ್ರತಿಭೆ ಹೊರಹೊಮ್ಮಿದ್ದಕ್ಕಿಂತ ಹೊರಹೊಮ್ಮಿಸಿದ್ದೇ ಹೆಚ್ಚು. ಸಹಜತೆಗಿಂತ ಆತುರ, ಬರೆಯಬೇಕೆನ್ನುವ ಉತ್ಸಾಹ ಹೆಚ್ಚಿ ಬರವಣಿಗೆಯ ಇಂಪು, ಕಂಪುಗಳು ಕ್ಷೀಣಿಸಿದವು. ಹಾಗಾಗಿ ಪ್ರಗತಿಶೀಲರ ಆರಂಭದ ಕೃತಿಗಳೆಲ್ಲಾ ಒಂದೇ ರೀತಿಯ ಶೈಲಿಯಿಂದ ಕೂಡಿ, ಶೈಲಿ ಒಂದೇ ಅಚ್ಚಿನಲ್ಲಿ ಎರಕ ಹೊಯ್ದಂತೆ ತೋರುತ್ತವೆ. ಆರಂಭದ ಈ ಆವೇಶ ಕುಗ್ಗಿದಂತೆ ಬರವಣಿಗೆಯಲ್ಲಿ ಪಕ್ವತೆ ಕಂಡಿತು. ಭಾಷೆ ಮತ್ತು ಶೈಲಿ ದೃಷ್ಟಿಯಿಂದ ಅನಂತರದ ಕೃತಿಗಳಲ್ಲಿ ವೈವಿಧ್ಯತೆ ಮತ್ತು ನಾವಿನ್ಯತೆಯ ಪ್ರಯೋಗಳು ಕಂಡುಬರುತ್ತವೆ. ತ.ರಾ.ಸು. ಅವರ ಶೈಲಿಯನ್ನು ಅವಲೋಕನ ಮಾಡುವಾಗ ಈ ಅಂಶಗಳನ್ನು ಗಮನಿಸುವುದು ಸೂಕ್ತ.

ಪ್ರಗತಿಶೀಲ ಬರಹಗಾರರಿಗೆ ಇಷ್ಟೆಲ್ಲಾ ಮಿತಿಗಳಿದ್ದರೂ ತ.ರಾ.ಸು. ಅವರ ಶೈಲಿ ತನ್ನದೇ ಆದ ಲಕ್ಷಣಗಳಿಂದ ಕೂಡಿದೆ. "ನಿರರ್ಗಳತೆ, ಸ್ಪಷ್ಟತೆ ಹಾಗೂ ಓಜಸ್ಸು ಅವರ ಗದ್ಯ ಶೈಲಿಯ ಪ್ರಧಾನ ಲಕ್ಷಣಗಳು. ಪದವಿಟ್ಟಳುಪದೊಂದಗ್ಗಳಿಕೆಗೆ ಹೆಸರಾದವರು ಅವರು".[೧೩] ಈ ರೀತಿ ತ.ರಾ.ಸು. ಅವರ ಶೈಲಿಯ ವಿಶಿಷ್ಟತೆ ತಿಳಿಯಬಹುದು.

ತ.ರಾ.ಸು. ಅವರು ಕಾದಂಬರಿಗಳಲ್ಲಿನ ಭಕ್ತರನ್ನು ಚಿತ್ರಿಸುವಾಗ ಭಾವುಕ ಶೈಲಿ ಬಳಸಿದ್ದಾರೆ. ಅಂತಹ ಸಂದರ್ಭದಲ್ಲಿ ವಿವರಣಾತ್ಮಕವಾದ ಸಂಸ್ಕೃತ ಭೂಯಿಷ್ಠವಾದ ಮಾತುಗಳನ್ನು ಬಳಸುತ್ತಾರೆ. ಇವರ ಕಾದಂಬರಿಗಳಲ್ಲಿನ ಭಕ್ತರೆಲ್ಲರು ಸಾತ್ವಿಕ ಸ್ವಭಾವದವರು. ಅವರಲ್ಲಿ ಆರ್ತತೆ ಮತ್ತು ಮಾದವತೆ ಇದೆ. ದೇವಿ ವಿಗ್ರಹ ಕಂಡು ರೋಮಾಂಚನಗೊಂಡರೆ, ಸ್ತೋತ್ರಪಠಣದಲ್ಲಿ ನಿರರ್ಗಳವಾಗಿ, ಭಾವುಕರಾಗಿ, ಗಂಭೀರವಾಗಿ ಹಾಡುತ್ತಾರೆ. ಭಗವದ್ಗೀತೆ ಮತ್ತು ಶಂಕರಾಚಾರ್ಯರ ಸ್ತೋತ್ರಗಳನ್ನು ಸಾಂದರ್ಭಿಕವಾಗಿ ಉಪಯೋಗಿಸಿಕೊಂಡಿದ್ದಾರೆ. ಸ್ತೋತ್ರಪ್ರಿಯಾ ಹಿ ದೇವಾ: ಎಂದು ಹೇಳುವಂತೆ ದೇವರನ್ನು ಪೂಜಿಸುವ ಪಾತ್ರಗಳೆಲ್ಲಾ ಸೋತ್ರ ವಾಚನದಲ್ಲಿ ಪರಿಣಿತರು ಮತ್ತು ಅನುಭಾವಿಗಳೇ.ಇದು ಆ ಭಕ್ತರ ಉತ್ಸಾಹ ಮತ್ತು ನಿಷ್ಠೆಯನ್ನು ತಿಳಿಸುತ್ತದೆ. ಶಂಕರಾಚಾರ್ಯರಿಂದ ರಚಿತವಾದ ಶ್ಲೋಕವೊಂದನ್ನು ಪಠಿಸುವ ರೀತಿಯೆಂದರೆ

**'ನಮೇ ದ್ವೇಕ್ಷರಾಗೌನ ಮೇ ಲೋಭಮೋಹೌ**

**- - - - - - - - - - - - - - - - -**

**ನ ಧರ್ಮೋ ನ ಚಾರ್ಥೋ - - - - -**

**ಶ್ಚಿದಾನಂದ ರೂಪ ಶಿವೋಹಂ ಶಿವೋಹಂ :'**

ಸದಾಶಿವಶಾಸ್ತ್ರಿಗಳ ಮುಖ, ಆ ಶ್ಲೋಕಗಳನ್ನು ಪಠಿಸುತ್ತಿದ್ದಂತೆ ಅವರ ಮನಸ್ಸು ಆ ಶ್ಲೋಕಗಳ ಅರ್ಥವನ್ನು ಕುರಿತು ಚಿಂತಿಸುತ್ತಿತ್ತು.

ತ.ರಾ.ಸು. ಅವರ ಕಾದಂಬರಿಯ ಭಕ್ತರು ದೇವಿ ವಿಗ್ರಹವನ್ನು ಕಂಡಕೂಡಲೆ ಭಾವಪರವಶರಾಗುತ್ತಾರೆ. ತಮಗರಿವಿಲ್ಲದಂತೆಯೇ ಅವರ ಬಾಯಿಂದ ದೇವೀ ಸ್ತೋತ್ರ ಹೊರಹೊಮ್ಮುತ್ತದೆ. 'ಚಕ್ರೇಶ್ವರಿ' ಕಾದಂಬರಿಯಲ್ಲಿನ ಸಾಂಬಸದಾಶಿವಮೂರ್ತಿ ಆ ತಾಯಿಯ ವಿಗ್ರಹವನ್ನು ಭಾವಪರವಶನಾಗಿ ನಿಜವಾದ ತಾಯಿ ದರ್ಶನವಾದ ತೃಪ್ತಿಯಿಂದ ಹೇಳುತ್ತಾನೆ.

**'ಅತಿಮಧುರಚಾಪಹಸ್ತಾಂ ಅಪರಿಮಿತಾಮೋದಬಾಣಸೌಭಾಗ್ಯಂ/**

**ಅರುಣಾಂ ಅತಿಶಯಕರುಣಾಂ ಅಭಿನವಕುಲಸುಂದರೀಂವಂದೆ//'**

ಎಂದು ಹೇಳಿ ನಿಂತಿದ್ದರೂ ಆಕೆಯ ಪಾದಗಳಡಿಯಲ್ಲಿ ಮಲಗಿದ್ದಂತೆ ನಮಸ್ಕರಿಸಿದೆ"[೧೪] (ಶ್ರೀ ಚಕ್ರೇಶ್ವರಿ. ಪುಟ ೨೮) ಸಾಂಬಮೂರ್ತಿ ನೋಡಿದ್ದಾಯಿತೇನೋ ಎಂದು ಎಚ್ಚರಿಸಿದಾಗಲೇ ನನಗೆ ಮತಿ ತಿಳಿದಿದ್ದು.

'ನೋಡಿದೆ' ಎಂದೆ ವಿಗ್ರಹವನ್ನಷ್ಟೆ ಅಲ್ಲ, ಆ ತಾಯಿಯನ್ನು ನೋಡಿದಷ್ಟು ತೃಪ್ತಿಯಿಂದ ಇಂತಹ ಕಡೆಗಳಲ್ಲಿ ದೇವಿ ವಿಗ್ರಹವನ್ನು, ಅದರ ಸೌಂದರ್ಯವನ್ನು ವರ್ಣಿಸುವಾಗ ಭಾಷೆ ಸಂಸ್ಕೃತ ಬೂಯಿಷ್ಠವಾಗುತ್ತದೆ. .ಭಕ್ತರ ಅನುಭವಗಳನ್ನು ನಿರೂಪಿಸುವಾಗ ಶೈಲಿ ಭಾವುಕವಾಗುತ್ತದೆ. ಭಾವ ತನ್ಮಯತೆ ಹಾಗೂ ಭಾವ ಪರವಶತೆ ತ.ರಾ.ಸು. ಅವರ ಕಾದಂಬರಿಗಳಲ್ಲಿ ಸ್ಪಷ್ಟವಾಗಿ ಕಂಡು ಬರುತ್ತದೆ.

ಸ್ತ್ರೀಯರ ವರ್ಣನೆ ಮಾಡುವಾಗಲಂತೂ ತ.ರಾ.ಸು. ಅವರ ಶೈಲಿ ನಿರರ್ಗಳವಾಗಿ ಸಾಗುತ್ತದೆ. ಅಂಗಾಂಗಗಳ ವರ್ಣನೆ ಮಾಡುವಾಗಲಂತೂ ಓದುಗರ ಕುತೂಹಲ ಕೆರಳಿಸುತ್ತಾರೆ. ಒಂದಾದ ಮೇಲೊಂದರಂತೆ ವಿವರಗಳನ್ನು ಕೊಡುವಾಗ ಹೆಣ್ಣಿನ ಭವ್ಯವಾದ ಚಿತ್ರಣ ಕಣ್ಮುಂದೆ ಸುಳಿಯುತ್ತದೆ.

"ಅಚ್ಚ ಬಿಳಿಯ ಮೈಗೆ ಹತ್ತಿಕೊಂಡಂತೆ ಕಾಣುವ ತೆಳುವಾದ ರೇಶಿಮೆಯ ಸೀರೆಯನ್ನುಟ್ಟು, ಅದೇ ಬಣ್ಣದ, ಮೈಯನ್ನು ಮುಚ್ಚುವುದಕ್ಕಿಂತ ಹೆಚ್ಚಾಗಿ ಎತ್ತಿ ತೋರಿಸುವಂತೆ

ಹೊಲಿದ ರವಿಕೆಯನ್ನು ತೊಟ್ಟು ತುಂಬು ಯೌವ್ವನ, ಮೊಟವಾಗಿ ಬಳುಕುತ್ತಾ ನಡೆದು ಬಂದ ನೀಲಳನ್ನು ನೋಡಿ ತಟಕ್ಕನೆ ಶ್ರೀಕಂಠ ಜೋಯಿಸರು, ದಿನವೂ ಸಂಜೆ ದೇವಾಲಯಗಳಲ್ಲಿ ಓದುತ್ತಿದ್ದ ಕುಮಾರವ್ಯಾಸನ ಭಾರತದಲ್ಲಿ ಕೇಳಿದ ದ್ರೌಪದಿಯ ವರ್ಣನೆ ನೆನಪಾಯಿತು.[೧೫] (ಚದುರಂಗದ ಮನೆ ಪುಟ ೧೧೧)

ಸುಂದರವಾದ ಹೋಲಿಕೆಗಳು ಮತ್ತು ಶಬ್ದಗಳಲ್ಲಿ ಸ್ತ್ರೀಯ ಸೌಂದರ್ಯವನ್ನು ಸೆರೆಹಿಡಿಯಬಲ್ಲ ಶಕ್ತಿ ತ.ರಾ.ಸು. ಅವರ ಶೈಲಿಯಲ್ಲಿದೆ. ಎಷ್ಟು ವಿಧವಾಗಿ ವರ್ಣಿಸಿದರೂ ಕಡಿಮೆಯೇ. ಸ್ತ್ರೀವರ್ಣನೆಯಲ್ಲಿ ಭವ್ಯತೆಯನ್ನು, ದಿವ್ಯತೆಯನ್ನು ತಂದು, ಎಳೆಎಳೆಯಾಗಿ ವರ್ಣಿಸುವ ಕಲೆಗಾರಿಕೆಯಿಂದ ಮನಸ್ಸನ್ನು ಉದ್ರೇಕಿಸುವ, ಆದರೆ ಕೆರಳಿಸದಂತೆ ಗೌರವ ಭಾವದಿಂದ ನೋಡುವ ನಾವಿನ್ಯತೆ ಇವರ ಶೈಲಿಗಿದೆ.

"ಹಾವಿನ ಪೊರೆಯಷ್ಟು ತೆಳುವಾದ ಬಿಳಿಯ ರೇಶಿಮೆಯ ಸೀರೆಯುಟ್ಟು, ಅಷ್ಟೇ ತೆಳುವಾದ ಅದೇ ಬಣ್ಣದ ಕುಪ್ಪಸ ಧರಿಸಿ, ಮುತ್ತಿನ ಹಾರವೊಂದಲ್ಲ ಬೇರಾವ ಆಭರಣವೂ ಇಲ್ಲದೆ, ಮುಡಿಯ ಮಲ್ಲಿಗೆಯ, ಮೈಗೆ ತೊಡೆದ ನರುಗಂಪು ಬೀರುವ, ಅಮೃತ ಶಿಲೆಯಲ್ಲಿ ಕಡೆದ ವಿಗ್ರಹದಂತಿರುವ ಚಂದ್ರಸಾನಿಯಲ್ಲಿ ಅವರ ಕಣ್ಣು ಕೀಲಿಸಿತ್ತು. ತಿದ್ದಿದ ಕುಡಿಹುಬ್ಬು, ರುಚಿಗೆ ಹಚ್ಚಿ ಹೊಳೆವ ಅಗಲವಾದ ಮಿಂಚುಗಣ್ಣು, ಗುಲಾಬಿಯ ಬಣ್ಣದ ಮೃದುವಾದ ತುಟಿಯನ್ನು ದಿಟ್ಟಿಸಿ ನೋಡಿದರು. ರೇಶಿಮೆಯಷ್ಟು ಮೃದುವಾಗಿ ಸಡಿಲವಾಗಿ ಜಾರಿದ, ಕಪ್ಪಾಗಿ ಹೊಳೆವ ಕೇಶರಾಶಿಯನ್ನು ನೇವರಿಸಿದರು".[೧೪] (ಹಂಸಗೀತೆ ಪು.೧೬೨)

ತ.ರಾ.ಸು. ಅವರ ಕಾದಂಬರಿಗಳಲ್ಲಿನ ವರ್ಣನೆಗಳು ನಾವಿನ್ಯತೆಯಿಂದ ಕೂಡಿವೆ. ಇವರ ಕಾದಂಬರಿಗಳಲ್ಲಿ ಬರುವ ಸ್ತ್ರೀಯರೆಲ್ಲ ಸುಂದರಿಯರು ಇಂತಹ ಸೌಂದರ್ಯ ವರ್ಣಿಸುವಾಗ ಅರಸಿಕನೂ ರಸಿಕನಾಗುತ್ತಾನೆ. ಕುರೂಪಿ ಸ್ತ್ರೀಯರು ಇವರ ಕಾದಂಬರಿಗಳಲ್ಲಿ ಎಲ್ಲೂ ಕಂಡುಬರುವುದಿಲ್ಲ. ಸ್ತ್ರೀಯರ ವರ್ಣನೆಯ ಆವೇಶದಲ್ಲಿ ಉತ್ಸಾಹಭರಿತವಾದ ಶೈಲಿ ಕಾಣಿಸಿದರೆ ಅವರ ಸೌಂದರ್ಯ ನಿರೂಪಣೆಯಲ್ಲಿ ಸೌಮ್ಯವಾದ ಶೈಲಿ ಕಂಡುಬರುತ್ತದೆ. ಅಲ್ಲಲ್ಲಿ ಔಚಿತ್ಯ ಪೂರ್ಣವಾದ ಉಪಮೆಗಳನ್ನು ಬಳಸಿದ್ದಾರೆ. ಈ ರೀತಿ ಸ್ತ್ರೀಯರನ್ನು ವರ್ಣಿಸುವಾಗ ಹೋಲಿಕೆಗೆ ಸಿಕ್ಕದಿರುವ ವಸ್ತುವೇ ಇಲ್ಲ. ಅಂದರೆ ಒಬ್ಬೊಬ್ಬ ಸ್ತ್ರೀಯು ಸೌಂದರ್ಯದ ಅಧಿದೇವತೆಗಳಾಗುತ್ತಾರೆ.

ಪ್ರೇಮ, ಕಾಮಗಳನ್ನು ವರ್ಣಿಸುವಾಗ ಪ್ರೇಮ ತನ್ನ ಕೃಪೆಗೆ ಪಾತ್ರರಾದವರನ್ನು ಉದ್ಧಾರ ಮಾಡುತ್ತದೆ. ಕಾಮ ಪಾತಾಳಕ್ಕೆ ತಳ್ಳುತ್ತದೆ. ಚಂದ್ರಸಾನಿಯ ಸೌಂದರ್ಯವನ್ನು ಉತ್ಸಾಹದಿಂದ ವರ್ಣಿಸುವ ಕಾದಂಬರಿಕಾರರು ದುಃಖದ ತೀವ್ರತೆಯಲ್ಲಿ ಕಾಂತಿಹೀನವಾದ ಅವಳ ಸೌಂದರ್ಯವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತಾರೆ. ಚಂದ್ರಸಾನಿಯ ಸೌಂದರ್ಯವನ್ನು ಉತ್ಸಾಹದಿಂದ ವರ್ಣಿಸುವ ಕಾದಂಬರಿಕಾರರು ದುಃಖದ ತೀವ್ರತೆಯಲ್ಲಿಯೂ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

"ವಸಂತದ ಪ್ರಥಮ ಪ್ರಭಾತದಲ್ಲಿ ಅರಳಿ ಕಳಕಳಿಸುತ್ತಿದ್ದ ನವಕೋಮಲ ಪುಷ್ಪದಂತಿದ್ದ ಆಕೆಯ ಮೊಗ ಬಾಡಿ ಬೆಂಡಾಗಿತ್ತು. ಪ್ರಣಯ ಕಾಂತಿಯಿಂದ ಜೋಡಿ ಶುಕ್ರನಕ್ಷತ್ರದಂತೆ ಥಳಥಳಿಸುತ್ತಿದ್ದ ಆಕೆಯ ಕಣ್ಣುಗಳು ಬಿಸಿಲು ಸತ್ತ ಹಗಲಿನಂತೆ ಮಂಕಾಗಿದ್ದವು. ಮುಟ್ಟಿದರೆ ರಸ ಬರುವುದೇನೋ ಎಂಬ ಪಕ್ವ ಬಿಂಬಾ ಫಲದಂತಿದ್ದ ತುಟಿಗಳು, ಬೆಳ್ಳಗೆ ಬಿಳಿಚಿಕೊಂಡಿದ್ದವು".[೧೭] (ಹಂಸಗೀತೆ.ಪುಟ.೩೦)

ತ.ರಾ.ಸು.ಅವರು ಬಳಸಿರುವ ವರ್ಣನೆಗಳು ಅವರ ಶೈಲಿಗೆ ಮೆರುಗನ್ನು ತಂದುಕೊಡುತ್ತವೆ. ಅಂತಹ ವೇಳೆಯಲ್ಲಿ ಅವರ ಬರವಣಿಗೆ ಭಾರದಿಂದ ಸಾಗುತ್ತದೆ. ನಿರರ್ಗಳವಾದ ಶೈಲಿಗೆ ಗಟ್ಟಿತನವನ್ನು ಒದಗಿಸುತ್ತದೆಯೆಂದು ಹೇಳಬಹುದಾಗಿದೆ. ಇವರ ಪ್ರಕೃತಿ ವರ್ಣನೆಯಲ್ಲಿ ಈ ಅಂಶಗಳನ್ನು ಗುರುತಿಸಬಹುದಾಗಿದೆ.

"ಸೂರ್ಯ ಸುವರ್ಣರಥದಲ್ಲಿ ಕಡಲಕಡೆಗೆ ಇಳಿಯುತ್ತಿದ್ದ. ದಿಗಂತದಂಚಿನ ನೀಲಿಯ ತೆರೆಯಲ್ಲಿ ಕಡಲು ಸ್ಪಷ್ಟವಾಗಿ ಕಾಣುತ್ತಿರಲಿಲ್ಲ. ಬಂಗಾರದ ತಟ್ಟೆಯನ್ನು ಕಾಸಿ ರಕ್ತಲೇಪ ಮಾಡಿದ ಚಕ್ರದಂತಿದ್ದ ಸೂರ್ಯ, ಸೂರ್ಯಚಕ್ರ ಸುತ್ತಿ ಸುತ್ತಿ ಕಡಲಡಿಗೆ ಜಾರುತ್ತಿತ್ತು. ಇನ್ನೂ ಕಡಲು ಅಷ್ಟು ದೂರ ಇದೆ ಎನ್ನುವಾಗಲೆ ಸೂರ್ಯ ಊಹಾತೀತವಾದ ಉಜ್ವಲತೆಯಿಂದ ಸುತ್ತಲಾರಂಭಿಸಿದ".[೧೮] ಈ ತರಹದ ಸೂರ್ಯಾಸ್ತದ ವರ್ಣನೆ ಓದುಗರ ಕಲ್ಪನೆಗೂ ಮೀರಿದ್ದು. ಸೂರ್ಯನಲ್ಲಿ ಸೌಂದರ್ಯವನ್ನು ಕಾಣುವ ಪ್ರಯತ್ನ ಮಾಡಿದ್ದಾರೆ. ಸೂರ್ಯಾಸ್ತ ದೃಶ್ಯಾತ್ಮ ಅನುಭವ ನೀಡುತ್ತಾರೆ.

ತ.ರಾ.ಸು. ಅವರ ಶೈಲಿಗೆ ಹೆಚ್ಚಿನ ಸತ್ವವನ್ನು ತಂದುಕೊಡುವ ಅಂಶವೆಂದರೆ ಅವರು ಬಳಸಿರುವ ಗಾದೆಗಳು ಮತ್ತು ನುಡಿಗಟ್ಟುಗಳು. ಓದುಗರ ಮನಸ್ಸನ್ನು ಸೂರೆಗೊಂಡು ಅನುಭವದ ಆಳಕ್ಕಿಳಿದೊಯ್ಯುತ್ತವೆ. ಕಾದಂಬರಿಗಳಲ್ಲಿ ಬಳಸಿರುವ ಗಾದೆ ಮಾತುಗಳನ್ನು ಅವಲೋಕಿಸಿದರೆ ಅವರ ಶೈಲಿಯ ಪಕ್ವತೆ, ಹಾಗೂ ದೇಶೀಯ ಸೊಗಡು ಅರಿವಿಗೆ ಬರುತ್ತದೆ. ಜನಸಾಮಾನ್ಯರು ಬಳಸುವ ಆಡುನುಡಿ ದಿನಬಳಕೆಯಲ್ಲಿನ ಗಾದೆ ಮಾತುಗಳು ಇವರ ಶೈಲಿಯಲ್ಲಿ ಕಂಡು ಬರುತ್ತವೆ. "ತಾನು ಕಂಡ ಬದುಕನ್ನು ತನ್ನದೇ ಆದ ಭಾಷೆಯಲ್ಲಿ ಚಿತ್ರಿಸಬೇಕಾದರೆ ಕಾದಂಬರಿಕಾರನ ಕಿವಿ ತನ್ನ ಸುತ್ತಣ ಜನಭಾಷೆಯ ಬಗೆಗೆ ಸದಾ ತೆರೆದಿರಬೇಕಾಗುತ್ತದೆ. ಆ ಭಾಷೆಯ ನಾದ, ಲಯ, ಅರ್ಥ, ಧ್ವನಿ ಇವುಗಳ ಹರಹನ್ನು ಗುರುತಿಸಬಲ್ಲವನಾಗಿರಬೇಕು"[೧೯]. ತ.ರಾಸು ಅವರ ಕಾದಂಬರಿಗಳಲ್ಲಿ ಈ ಕಲೆ ಕಂಡುಬರುತ್ತದೆ. ಅವರು ಬಳಸಿರುವ ಗಾದೆಗಳು ಶೈಲಿಗೆ ಭಾರವೆನಿಸುವುದಿಲ್ಲ ಸಹಜವಾದ ಅಭಿವ್ಯಕ್ತಿಯಂತೆಯೇ ಕಂಡು ಬರುತ್ತವೆ. ತ.ರಾ.ಸು ಅವರ ಭಾಷಾಶೈಲಿಯ ಮೇಲೆ ಜನಪದರ ಪ್ರೇರಣೆಯಾಗಿರುವುದಕ್ಕೆ ಈ ಗಾದೆಗಳೇ ಸಾಕ್ಷಿ. ಇವು ಆಯಾ ಸಂದರ್ಭದ ಭಾವಪೋಷಣೆಗೆ ಸಹಕಾರಿಯಾಗುತ್ತವೆ. ತ.ರಾ.ಸು ಬಳಸಿರುವ ಅಂತಹ ಗಾದೆಗಳೆಂದರೆ.

## ಅನುಬಂಧ–೨

'ಮಾಡಿದೋರ ಪಾಪ ಆಡಿದೋರ ಬಾಯಲ್ಲಿ'

'ಮುಂಡೇನ ಹಸೆಗೆ ಕರಿ ಅಂದ ಹಾಗೆ'

'ಮೇಲೆ ಬಿದ್ದ ಸೂಳೆ ಮೂರು ಕಾಸಿಗೂ ಬೇಡಾಂತ'

'ಸೂಳೆ ಧರ್ಮಾಂದ್ರೆ ಪೂಜಾರಪ್ಪನೂ ಗುಡಿ ಹಿಂದೆ ಬಾ ಅಂದ್ನಂತೆ'

'ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ'

'ಹಳೇ ಗಂಡನ ಪಾದವೇ ಗತಿ'

"ಹಡೆದಮ್ಮ ಇದ್ದ ಹಾಗೆ ದಿಗಿಲಮ್ಮ ಎದ್ದು ಕುಣಿದಳು'

'ಸೂಳೆಯ ಪಾಪಕ್ಕೆ ಸನ್ಯಾಸಿಯನ್ನು ಶೂಲಕ್ಕೆ ಹಾಕಿದರು ಅನ್ನೋ ಹಾಗೆ'

ಈ ರೀತಿ ಜನಸಾಮಾನ್ಯರಲ್ಲಿ ಬಳಕೆಯಲ್ಲಿರುವ ಕೆಲವು ಗಾದೆ ಮಾತುಗಳು, ನುಡಿಗಟ್ಟುಗಳು ಇವರ ಎಲ್ಲ ಕಾದಂಬರಿಗಳಲ್ಲೂ ಒಂದಲ್ಲ ಒಂದು ರೀತಿಯಲ್ಲಿ ಬಳಸಲ್ಪಟ್ಟಿವೆ. ತ.ರಾ.ಸು ಅವರ ಶೈಲಿಗೆ ಸಮಕಾಲೀನ ಕಾದಂಬರಿಕಾರರ ಪ್ರಭಾವವೂ ಆಗಿದೆ. ಇವರ ಆರಂಭದ ಕಾದಂಬರಿಗಳ ಮೇಲೆ ಅ.ನ.ಕೃ ಅವರ ಪ್ರೇರಣೆಯಾಗಿದೆ. 'ಮಸಣದಹೂವು', 'ಬಿಡುಗಡೆಯ ಬೇಡಿ' ಮುಂತಾದ ಕಾದಂಬರಿಗಳು ಅ.ನ.ಕೃ ಶೈಲಿಯಿಂದ ಪ್ರೇರಿತ. ಆದರೆ, ಅ.ನ.ಕೃ ಅವರದು ಸರಳವಾದ ಶೈಲಿಯಾದರೆ, ತ.ರಾ.ಸು ಅವರದು ಅಲಂಕಾರಭರಿತವಾದ ನಿರರ್ಗಳವಾದ ಶೈಲಿ. ಅಪಾರವಾದ ಪದಸಂಪತ್ತು, ವೈವಿಧ್ಯತೆಯಿಂದ ಕೂಡಿದ ಘಟನೆಗಳ ಜೋಡಣೆ ಜನಸಾಮಾನ್ಯರ ನುಡಿಗಟ್ಟುಗಳ ಬಳಕೆಯಿಂದಾಗಿ ತ.ರಾ.ಸು ಅವರ ಶೈಲಿ ಆಕರ್ಷಣೀಯವಾಗಿದೆ, ಎಂಬುದನ್ನು ಅವರ ಅನೇಕ ಕಾದಂಬರಿಗಳಲ್ಲಿ ಕಾಣಬಹುದು. ಕೆಲವುವೇಳೆ ರಂಜನೆಯಿಂದಲೂ ಕೂಡಿರುತ್ತದೆ. ಇವರ ಶೈಲಿಯ ಯಶಸ್ಸಿಗೆ ಅವರು ಬಳಸುವ ಭಾಷಾ ಬಳಕೆಯೇ ಕಾರಣವಾಗುತ್ತದೆ.

## ಅಡಿಟಿಪ್ಪಣಿಗಳು :

೨) ಶ್ರೀಶೈಲ ಆರಾಧ್ಯ ಎಚ್.ಸಂ. : ಗಿರಿಮಲ್ಲಿಗೆ
ಪುಟ-೨೮೬

೧) ನಾರಾಯಣ ಕೆ.ವಿ. : ಬೇರು ಕಾಂಡ ಚಿಗುರು. ಪುಟ ೨೮೧

೩) ಗಿರಡ್ಡಿಗೋವಿಂದರಾಜ : ಕಾದಂಬರಿ: ವಸ್ತು ಮತ್ತು ತಂತ್ರ, ಪುಟ ೧೦

೪) ಅದೇ : ಪುಟ – ೧೦

೫) ಹರಿಕೃಷ್ಣಭರಣ್ಯ : ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ,
ಪುಟ ೪೯.

೬) ಕೃಷ್ಣಕುಮಾರ್. ಸಿ.ಪಿ. : ಸಾಹಿತ್ಯ ಪ್ರವೇಶ

೭) ಸುಬ್ಬರಾವ್ ತ.ರಾ : ಹಂಸಗೀತೆ.
ಪುಟ-೪೯

೮) ಸುಬ್ಬರಾವ್.ತ.ರಾ. : ಬಿಡುಗಡೆಯ ಬೇಡಿ, ಮುನ್ನುಡಿಮಾತು

೯) ಸುಬ್ಬರವ್.ತ.ರಾ. : ಪಂಜರದ ಪಕ್ಷಿ ಮುನ್ನುಡಿ ಮಾತು

೧೦) ಶ್ರೀ ಶೈಲ ಆರಾಧ್ಯ.ಎಚ್.(ಸಂ).: ಗಿರಿಮಲ್ಲಿಗೆ, ಪುಟ – ೨೨೩

೧೧) ಜವರೇ ಗೌಡ. ದೇ. : ಗದ್ಯಶೈಲಿ, ಪುಟ ೧೪

೧೨) ರಂಗಣ್ಣ ಎಸ್.ವಿ. : ಶೈಲಿ, ಭಾಗ-೧ ಪುಟ .೫

೧೩) ಕೃಷ್ಣರಾಯ. ಶಾ.ಮಂ. : ತ.ರಾ.ಸು. ಬದುಕು ಬರಹ. ಪುಟ.೬

೧೪)ಸುಬ್ಬರಾವ್ ತ.ರಾ : ಶ್ರೀ ಚಕ್ರೇಶ್ವರಿ. ಅಥವಾ ಬಯಸಿ ಬಂದ ಭಾಗ್ಯ
ಪುಟ ೨೮.

೧೫) ಸುಬ್ಬರಾವ್.ತ.ರಾ. : ಚದುರಂಗದ ಮನೆ, ಪುಟ ೧೧೧.

೧೬) ಸುಬ್ಬರಾವ್.ತ.ರಾ. : ಹಂಸಗೀತೆ. ಪುಟ ೧೬೨

೧೭) ಅದೇ : ಪುಟ-೩೦

೧೮) ಸುಬ್ಬರಾವ್.ತ.ರಾ. :ವಿಷಪ್ರಾಶನ. ಪುಟ-೮೪

೧೯) ಶಿವರುದ್ರಪ್ಪ ಜಿ.ಎಸ್. : ಗತಿಬಿಂಬ. ಪುಟ-೧೦೩

# ಅಧ್ಯಾಯ ೮

## ಉಪಸಂಹಾರ

ತ.ರಾ.ಸು ಅವರ ವಿಪುಲವಾದ ಸಾಹಿತ್ಯ ಸೃಷ್ಟಿಗೆ ಅವರ ಜೀವನಾನುಭವ ಮತ್ತು ಅವರು ಬೆಳೆದುಬಂದ ಪರಿಸರ ಮುಖ್ಯ ಕಾರಣ. ತ.ರಾ.ಸು ಅವರು ಕಾದಂಬರಿಕಾರರಷ್ಟೇ ಅಲ್ಲ ನಾಟಕ ಸಣ್ಣಕತೆ, ವಿಮರ್ಶೆ, ಅನುವಾದ ಕ್ಷೇತ್ರದಲ್ಲಿಯೂ ಪಳಗಿದವರೇ. ನನ್ನ ಸಂಶೋಧನಾ ಪ್ರಬಂಧದ ವ್ಯಾಪ್ತಿ ತ.ರಾ.ಸು ಅವರ ಕಾದಂಬರಿಗಳಲ್ಲಿನ ಸ್ತ್ರೀಸಂವೇದನೆ ಗುರುತಿಸುವುದಾಗಿರುವುದರಿಂದ ಇವರ ೫೩ ಸಾಮಾಜಿಕ ಕಾದಂಬರಿಗಳು, ೧೪ ಐತಿಹಾಸಿಕ ಕಾದಂಬರಿಗಳು, ೦೨ ಪೌರಾಣಿಕ ಕಾದಂಬರಿಗಳಲ್ಲಿ ಸ್ತ್ರೀಸಂವೇದನೆಯನ್ನು ಪ್ರಧಾನವಾಗಿ ಹೊಂದಿರುವ ಪಾತಿನಿಧಿಕವಾದ ಕಾದಂಬರಿಗಳನ್ನು ಮಾತ್ರ ಕುರಿತು ಸಂಶೋಧನೆ ಮಾಡಿರುತ್ತೇನೆ.

ಆಧುನಿಕ ಗದ್ಯಸಾಹಿತ್ಯದಲ್ಲಿ ಪ್ರಧಾನವಾಗಿ ಕಾದಂಬರಿಗಳು ರನಚೆಗೊಂಡವು. ಅದರಲ್ಲೂ ಪ್ರಗತಿಶೀಲ ಸಾಹಿತ್ಯ ಪಂಥದಲ್ಲಿ ಸಣ್ಣಕತೆ ಮತ್ತು ಕಾದಂಬರಿ ಪ್ರಕಾರಗಳು ವಿಪುಲವಾಗಿ ಬೆಳೆದು ಬಂದವು. ಈ ಹೊತ್ತಲ್ಲಿ ಕಾದಂಬರಿ ರಚಿಸಿದವರೆಲ್ಲ ಶೋಷಿತ ವರ್ಗ, ದಲಿತರ ಮತ್ತು ಮಹಿಳೆಯರ ಪರವಾದ ಧೋರಣೆ ತೆಳೆದಂತಹವರೇ ಅವರಲ್ಲಿ ಪ್ರಮುಖವಾಗಿ ಕಾದಂಬರಿಗಳನ್ನು ರಚಿಸಿದ ತ.ರಾ.ಸು ಅವರ ಕಾದಂಬರಿಗಳಲ್ಲಿನ ಬರವಗಯಲ್ಲಿನ ಸ್ತ್ರೀಸಂವೇದನೆ ಗುರುತಿಸುವ ಪ್ರಯತ್ನ ಮಾಡಿದ್ದೇನೆ.

ಪ್ರಗತಿಶೀಲ ಲೇಖಕರ ಧೋರಣೆಗೆ ಅನುಗುಣವಾದ ಕಾದಂಬರಿಗಳನ್ನು ತ.ರಾ.ಸು ಅವರು ರಚಿಸಿದ್ದಾರೆ. ಆದರೆ ತ.ರಾ.ಸು ಅವರ ಸಾಹಿತ್ಯ ಕುರಿತಂತೆ ಸಂಶೋಧನೆಗಳೇ ನಡೆದಿಲ್ಲವೆಂದು ಭಾವಿಸಿದರೆ ತಪ್ಪಾದಿತು. ಈ ಗಾಗಲೆ ನಾನು ಗಮನಿಸಿರುವಂತೆ ತ.ರಾ.ಸು ಅವರ ಸಾಹಿತ್ಯದ ಬಗ್ಗೆ ಮೂರು ಸಂಶೋಧನೆಗಳು ನಡೆದಿವೆ. ಈ ಮೂರು ಸಂಶೋಧನೆಗಳಲ್ಲಿ ತ.ರಾ.ಸು ಅವರ ಕಾದಂಬರಿಗಳಲ್ಲಿನ ಸ್ತ್ರೀಸಂವೇದನೆ ಕುರಿತಂತೆ ಸಂಶೋಧನೆ ನಡೆದಿಲ್ಲದಿರುವುದರಿಂದ ಪ್ರಸ್ತುತ ಸಂಶೋಧನಾ ಪ್ರಬಂಧದಲ್ಲಿ ನಾನು ತ.ರಾ.ಸು ಅವರ ಕಾದಂಬರಿಗಳಲ್ಲಿ ಸ್ತ್ರೀಸಂವೇದನೆ ಕುರಿತು ಸಂಶೋಧನೆ ಕೈಗೊಂಡಿದ್ದೇನೆ.

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಸ್ತ್ರೀಸಂವೇದನೆ ಗುರುತಿಸುವುದರ ಜೊತೆಗೆ ಕನ್ನಡದಲ್ಲಿ ಕಾದಂಬರಿ ಸಾಹಿತ್ಯದ ಸ್ವರೂಪ ಮತ್ತು ಬೆಳವಣಿಗೆಯಲ್ಲಿ ಸ್ತ್ರೀಸಂವೇದನೆ ಗುರುತಿಸಿದ್ದೇನೆ. ಆರಂಭದಲ್ಲಿನ ಅನುವಾದಿತ ಕಾದಂಬರಿಗಳು, ಸ್ವತಂತ್ರ ಸಾಮಾಜಿಕ ಕಾದಂಬರಿಗಳು, ಐತಿಹಾಸಿಕ ಕಾದಂಬರಿಗಳು, ಪೌರಾಣಿಕ ಕಾದಂಬರಿಗಳು, ಆರಂಭದ ಸ್ತ್ರೀಪ್ರಧಾನ ಕನ್ನಡ ಕಾದಂಬರಿಗಳು, ಪುರುಷ ಕಾದಂಬರಿಕಾರರಷ್ಟೇ ಅಲ್ಲದೆ ಮಹಿಳಾ ಕಾದಂಬರಿಗಾರ್ತಿಯರ ಮೇಲೆ ಬೆಳಕು ಚೆಲ್ಲುವ ಪ್ರಯತ್ನ ನನ್ನ ಸಂಶೋಧನಾ ಪ್ರಬಂಧದಲ್ಲಿ ನಡೆದಿದೆ. ಆರಂಭದ ಕಾದಂಬರಿಕಾರರಿಂದ

ಆರಂಭಿಸಿದ ನವೋದಯದ ಕೆಲವು ಮುಖ್ಯವಾದ ಕಾದಂಬರಿಕಾರರ ಕಾದಂಬರಿಗಳಲ್ಲಿನ ಸ್ತ್ರೀಸಂವೇದನೆಯನ್ನು ಗುರುತಿಸುವ ಪ್ರಯತ್ನ ಮಾಡಿದ್ದೇನೆ.

ಒಂದು ಸಾಹಿತ್ಯ ಪಂಥದಲ್ಲಿ ಹಲವರು ಕೃತಿ ರಚಿಸಿದರೂ ಅವರೆಲ್ಲರ ದೃಷ್ಟಿ ಮತ್ತು ಧೋರಣೆಗಳು ಬಿನ್ನವಾಗಿರುತ್ತವೆ. ಒಂದೇ ಮನೋಧರ್ಮದ ಕವಿಗಳು ಒಂದು ಸಾಹಿತ್ಯ ಪಂಥದಲ್ಲಿ ಕಂಡುಬರುವುದಿಲ್ಲ. ಈ ಹಿನ್ನೆಲೆಯಲ್ಲಿ ತ.ರಾ.ಸು ಅವರ ಸಮಕಾಲೀನ ಕಾದಂಬರಿಕಾರರಾದ ಅ.ನ.ಕೃ, ಬಸವರಾಜ ಕಟ್ಟೀಮನಿ, ನಿರಂಜನ, ಅನುಪಮ ನಿರಂಜನ ಮುಂತಾದವರ ಕಾದಂಬರಿಗಳಲ್ಲಿ ಸ್ತ್ರೀಸಂವೇದನೆ ಹಾಗೂ ತ.ರಾ.ಸು ಈ ಎಲ್ಲ ಕಾದಂಬರಿಕಾರರಿಗಿಂತ ಹೇಗೆ ಭಿನ್ನರೆಂಬುದನ್ನು ಕುರಿತು ಸಂಶೋಧನೆ ಮಾಡಿದ್ದೇನೆ. ಅಲ್ಲದೆ ತನ್ನ ಸಮಕಾಲೀನ ಕಾದಂಬರಿಕಾರರಿಗಿಂತ ತ.ರಾ.ಸು ಅವರು ಹೇಗೆ ವಿಶಿಷ್ಟರಾಗುತ್ತಾರೆಂಬುದು, ಹಾಗೂ ತ.ರಾ.ಸು ಅವರ ಬರವಣಿಗೆ ಮೇಲೆ ಪ್ರಭಾವ ಬೀರಿದ ಅಂಶಗಳನ್ನು ನನ್ನ ಸಂಶೋಧನಾ ಪ್ರಬಂಧದಲ್ಲಿ ಗುರುತಿಸುವ ಪ್ರಯತ್ನ ಮಾಡಿದ್ದೇನೆ.

ಪ್ರಗತಿಶೀಲ ಚಳವಳಿಯಲ್ಲಿ ಪ್ರಮುಖ ಕಾದಂಬರಿಕಾರರಾದ ತ.ರಾ.ಸು ಅವರ ಕಾದಂಬರಿಗಳಲ್ಲಿನ ಸ್ತ್ರೀಸಂವೇದನೆ ಗುರುತಿಸುವ ಸಂದರ್ಭದಲ್ಲಿಯೇ ಪ್ರಗತಿಶೀಲ ಚಳವಳಿಯ ಹುಟ್ಟು, ಬೆಳವಣಿಗೆ, ಜಾಗತಿಕ ಮಟ್ಟದಲ್ಲಿ ಪ್ರಗತಿಶೀಲ ಚಳವಳಿ ಜನ್ಮ ತಳೆದದ್ದು, ಅಲ್ಲದೇ ಭಾರತದಲ್ಲಿ ಪ್ರಗತಿಶೀಲ ಚಳವಳಿ ಅಂಕುರಿಸಿದ್ದನ್ನೂ ಗುರುತಿಸಿದ್ದೇನೆ. ಅನಂತರ ಕರ್ನಾಟಕದಲ್ಲಿ (ಕನ್ನಡ) ಪ್ರಗತಿಶೀಲ ಚಳವಳಿ ಆರಂಭ, ಅದರ ಉನ್ನತಿ ಮತ್ತು ಅವನತಿಗಳ ಬಗ್ಗೆ ಕೂಲಂಕಷವಾದ ಚರ್ಚೆ ಮಾಡಿದ್ದೇನೆ. ಅದೇ ರೀತಿ ಪ್ರಗಿಶೀಲರಿಗೆ ಅಸ್ತಿತ್ವವಾದದ ಪ್ರಭಾವವಾಗಿರುವುದನ್ನೂ ಅವಲೋಕಿಸಿದ್ದೇನೆ. ಪ್ರಗತಿಶೀಲ ಚಳವಳಿಯ ಏಳುಬೀಳುಗಳು ಅದರ ಅವನತಿ, ಈ ಚಳವಳಿ ಕ್ಷೀಣಿಸಲು ಕಾರಣಗಳು, ಪ್ರಗತಿಶೀಲ ಬರಹಗಾರರು ರಾಜಕೀಯ ಪಕ್ಷಗಳಲ್ಲಿ ಗಉರುತಿಸಿಕೊಂಡು ಅ.ನ.ಕೃ ಬಣ ಮತ್ತು ನಿರಂಜನರ ಬಣವೆಂದು ಎರೆಡು ಗುಂಪುಗಳಾದದ್ದನ್ನೂ ಗುರುತಿಸಿದ್ದೇನೆ. ಅನಂತರ ತ.ರಾ.ಸು ಅವರು ಅ.ನ.ಕೃ ಬಣದ ಮಂಜೂಣಿದಾರರಾಗಿ ಬರವಣಿಗೆಯಲ್ಲಿ ತಮ್ಮನ್ನು ತೊಡಗಿಸಿಕೊಂಡದ್ದನ್ನು ಸ್ಥೂಲವಾಗಿ ಗುರುತಿಸಿದ್ದೇನೆ.

ತ.ರಾ.ಸು ಅವರ ಕಾದಂಬರಿಗಳಲ್ಲಿ ಸ್ತ್ರೀಸಂವೇದನೆ ಗುರುತಿಸುವ ಸಂದರ್ಭದಲ್ಲಿಯೇ ಸ್ತ್ರೀಸಂವೇದನೆ ಮತ್ತು ಮಹಿಳಾ ಚಳವಳಿಗಳಬಗ್ಗೆ ಚರ್ಚೆಯಾಗಿರುವುದು, ಪ್ರಸ್ತುತ ಸಂವೇದನೆ ಎನ್ನುವ ವಿಷಯದ ಮೇಲಿನ ಚರ್ಚೆ, ಸ್ತ್ರೀವಾದ, ಸ್ತ್ರೀವಾದಿಗಳೆಂದರೆ ಯಾರು? ಎನ್ನುವುದರ ಬಗ್ಗೆ ಈ ಪ್ರಬಂಧದಲ್ಲಿ ಚರ್ಚಿಸಿದ್ದೇನೆ. ಇದರೊಟ್ಟಿಗೆ ಮಹಿಳಾ ಚಳವಳಿಗಳು ಹುಟ್ಟು, ಬೆಳವಣಿಗೆ, ಭಾರತದಲ್ಲಿ ಮತ್ತು ಕರ್ನಾಟಕದಲ್ಲೂ ಈ ಹಿನ್ನೆಲೆಯಲ್ಲಿ ರೂಪುಗೊಂಡ ಕಾದಂಬರಿಗಳ ಬಗ್ಗೆ ಅವಲೋಕನ ಮಾಡಿದ್ದೇನೆ. ಮಹಿಳಾ ಚಳವಳಿ ಮತ್ತು ತ.ರಾ.ಸು ಅವರ ಬರವಣಿಗೆ ಹಾಗೂ

ಅವರ ಕೃತಿಗಳಲ್ಲಿನ ಸ್ತ್ರೀ ಸಂವೇದನೆ ಗುರುತಿಸಿದ್ದೇನೆ. ಮಹಿಳಾ ಚಳವಳಿಗಳ ಹಿನ್ನೆಲೆಯಲ್ಲಿ ಬಂದ ಕನ್ನಡ ಕಾದಂಬರಿಗಳ ತಾತ್ತ್ವಿಕತೆಯನ್ನು ಅವಲೋಕನ ಮಾಡಿದ್ದೇನೆ.

ತ.ರಾ.ಸು ಅವರ ಕಾದಂಬರಿಗಳಲ್ಲಿನ ಸ್ತ್ರೀಸಂವೇದನೆ ಗುರುತಿಸುವುದರ ಜೊತೆಗೆ ಅವುಗಳ ವೈವಿಧ್ಯತೆ, ಪ್ರಾಯೋಗಿಕನೆಲೆ ಹಾಗೂ ತಾತ್ತ್ವಿಕತೆಯನ್ನೂ ಗುರುತಿಸಿದ್ದೇನೆ. ತ.ರಾ.ಸು ಅವರ ಹದಿನಾಲ್ಕು ಐತಿಹಾಸಿಕ ಕಾದಂಬರಿಗಳಲ್ಲಿ ಎಂಟು ಕಾದಂಬರಿಗಳು ಚಿತ್ರದುರ್ಗವನ್ನಾಳಿದ ಪಾಳೆಯಗಾರರ ಆಡಳಿತವನ್ನು ಕುರಿತಾದವು. ಇನ್ನುಳಿದ ಆರು ಕಾದಂಬರಿಗಳು, ಹೊಯ್ಸಳರ ಹಾಗೂ ಬೇರೆ ಬೇರೆ ರಾಜರ ಆಡಳಿತದ ಬಗ್ಗೆ ಬೆಳಕು ಚೆಲ್ಲುತ್ತವೆ ಚಿತ್ರದುರ್ಗದ ಪಾಳೆಯಗಾರರ ಆಡಳಿತ ಕುರಿತಂತೆ ಬಂರಿರುವ ಕಾದಂಬರಿಗಳ ಮಾಲೆಯಲ್ಲಿ ದಳವಾಯಿಗಳು ಮತ್ತು ನಾಯಕರ ಆಡಳಿತದ ಸಂಘರ್ಷದಲ್ಲಿ ಮಹಿಳೆ ತಳಯುವದಿಟ್ಟ ನಿಲುವು, ಆಡಳಿತದಲ್ಲಿ ಆಕೆಯ ಪಾತ್ರ ಹಾಗೂ ಸಹಗಮನ ಮತ್ತು ದತ್ತು ಸ್ವೀಕಾರದಂತಹ ಸಂದರ್ಭದಲ್ಲಿ ನಾಗತಿಯರು ತಗೆದುಕೊಳ್ಳುವ ದಿಟ್ಟ ನಿಲುವು, ಸೇಡಿನ ರಾಜಕಾರಣ ಮುಂತಾದ ಸ್ತ್ರೀಸಂವೇದನೆಗೆ ಸಂಬಂಧಿಸಿದ ಅಂಶಗಳನ್ನು ಗುರುತಿಸಿದ್ದೇನೆ ಅಲ್ಲದೆ. ಶತೃಸೇನೆ ಕೋಟೆ ಮುತ್ತಿದಾಗ ಶತೃಗಳಿಂದ ಕೋಟೆ ರಕ್ಷಿಸಿದ ವೀರ ವನಿತೆ ಒನಕೆ ಓಬವ್ವಳ ಧೈರ್ಯ ಮುಂತಾದ ಅಂಶಗಳನ್ನು ಗುರುತಿಸಿದ್ದೇನೆ.

ತ.ರಾ.ಸು ಅವರ 'ಹಂಸಗೀತೆ' ಕಾದಂಬರಿ ಐತಿಹಾಸಿಕ ಕಾದಂಬರಿಯಲ್ಲ ಚಾರಿತ್ರಿಕವಾದ ಘಟನೆಗಳು ಮತ್ತು ಟಿಪ್ಪುಸುಲ್ತಾನ್ ಹಾಗೂ ಐತಿಹಾಸಿಕ ನಗರ ಚಿತ್ರದುರ್ಗದ ವಿವರಗಳಿದ್ದ ಮಾತ್ರಕ್ಕೆ ಅದು ಐತಿಹಾಸಿಕ ಕಾದಂಬರಿ ಅಲ್ಲ. ಸ್ತ್ರೀಸಂವೇದನಾ ಪರವಾದ ಕಾದಂಬರಿ ಸಂಗೀತಗಾರನೊಬ್ಬನ ಹಾಗೂ ಕಲಾವಿದೆ ಚಂದ್ರಲೇಖೆಯ ಬದುಕನ್ನು ಕುರಿತದ್ದು ವೇಶ್ಯೆಯಾದರೂ ಕಲೆಗೆ, ಸಂಗೀತಕ್ಕೆ ಮನಸೋತು ತನ್ನನ್ನು ಅರ್ಪಿಸಿಕೊಳ್ಳುವ ತ್ಯಾಗಜೀವಿ. ಸ್ವತಃ ಕಾದಂಬರಿಕಾರರೇ ಹಂಸಗೀತೆ ಐತಿಹಾಸಿಕ ಕಾದಂಬರಿಯಲ್ಲವೆಂದು ಹೇಳಿಕೊಂಡಿದ್ದಾರೆ. ಈ ಅಂಶಗಳನ್ನು ನನ್ನ ಪ್ರಬಂಧದಲ್ಲಿ ಗುರುತಿಸಿದ್ದೇನೆ.

ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳು ಸ್ತ್ರೀಸಂವೇದನಾ ಪರವಾದ ಧೋರಣೆ ತಳೆದಿರುವ ಕಾದಂಬರಿಗಳು, ಇವರ ಸಾಮಾಜಿಕ ಕಾದಂಬರಿಗಳಲ್ಲಿನ ಸ್ತ್ರೀಯರು ಬಡತನದಲ್ಲಿ ಸಿಲುಕಿರುವವರು ವೇಶ್ಯಾ ಸಮಸ್ಯೆಗೆ, ಲೈಂಗಿಕ ದೌರ್ಜನ್ಯಕ್ಕೆ ಪುರುಷಸಮಾಜದ ಹಿಂಸೆಗೆ ಸಿಲುಕಿರುವವರು. ಸಂಪ್ರದಾಯವನ್ನು ಧಿಕ್ಕರಿಸಿ ಆಧುನಿಕತೆ, ಸ್ತ್ರೀಸ್ವಾತಂತ್ರ್ಯ ಬಯಸುವ ಸ್ತ್ರೀಯರು. ಕೌಟುಂಬಿಕ ವಾತಾವರಣದಲ್ಲಿ ನೆಮ್ಮದಿಯ ಬದುಕನ್ನು ನಡೆಸುವವರು, ಅತೃಪ್ತಿ ಕಾಮಸಮಸ್ಯೆಗೆ ಸಿಲುಕಿರುವವರು. ಶ್ರೀಮಂತಿಕೆಯ ತೃಪ್ತ ಬದುಕಲ್ಲಿ ಲೈಂಗಿಕ ತೃಪ್ತಿಕಾಣದ ಅತೃಪ್ತ ಸ್ತ್ರೀಯರು. ನಗರ ಪ್ರದೇಶದ, ಗ್ರಾಮೀಣ ಬದುಕಿನ ಸ್ತ್ರೀಯರು, ಸಂಪ್ರದಾಯವನ್ನು, ಪರಂಪರೆಯನ್ನ ಮೀರಿದ ಸ್ತ್ರೀಯರು, ಉದ್ಯೋಗ ಹರಸಿ ನಗರಕ್ಕೆ ಬರುವ ಸ್ತ್ರೀಯರು, ಹೆಣ್ಣು ವಿದ್ಯೆ ಕಲಿಯುವುದು ಬೇಡವೆನ್ನುವ ಮನೋಭಾವದವರನ್ನೂ ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳಲ್ಲಿ ಗುರುತಿಸುವ ಪ್ರಯತ್ನ ಮಾಡಿದ್ದೇನೆ. ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳಲ್ಲಿನ

ಸ್ತ್ರೀಸಂವೇದನೆ ಹಾಗೂ ತ.ರಾ.ಸು ಅವರ ಸಮಕಾಲೀನ ಕಾದಂಬರಿಕಾರರ ಕಾದಂಬರಿಗಳಲ್ಲಿನ ಸ್ತ್ರೀಸಂವೇದನೆ ಗುರುತಿಸುವ ಪ್ರಯತ್ನ ಮಾಡಿದ್ದೇನೆ. ಜೊತೆಗೆ ಇವರ ಪೌರಾಣಿಕ ಕಾದಂಬರಿಗಳಲ್ಲಿನ ಸ್ತ್ರೀಯರು ಋಷಿ ಮುನಿಗಳ ಕೋಪಕ್ಕೆ ಗುರಿಯಾಗಿ ಸದಾ ಭಯದಲ್ಲಿ ಆತಂಕದಲ್ಲಿ ಬದುಕನ್ನು ದೂಡುವವರು ಪೌರಾಣಿಕವಾಗಿ ತಮ್ಮ ಬದುಕಿಗೆ ಅಂಟಿರುವ ಕಳಂಕವನ್ನು ತೊಡೆದು ಹಾಕಲು ಆಲೋಚಿಸುವ ಸ್ತ್ರೀಯರ ಮನಸ್ಥಿತಿಯನ್ನು ಈ ಪ್ರಬಂಧದಲ್ಲಿ ಗುರುತಿಸಲಾಗಿದೆ.

ಸಮೂಹ ಮಾಧ್ಯಮ ಮತ್ತು ಸಾಹಿತ್ಯ ಕೃತಿಗಳ ಸಂಬಂಧ ಬಸೆದದ್ದು ತೀರಾ ಇತ್ತೀಚಿಗೆಂದರೆ ತಪ್ಪಾಗಲಾರದು. ಒಂದು ಓದುವ ಕೃತಿಗಿಂತ ಕಿರುತೆರೆ ಕಂಡ ಕೃತಿಯೊಂದು ಪ್ರೇಕ್ಷಕರ ಮನಸ್ಸಿನ ಮೇಲೆ ತೀವ್ರವಾದ ಪರಿಣಾಮವನ್ನುಂಟುಮಾಡುತ್ತದೆ. ಸಮೂಹ (ದೃಶ್ಯ) ಮಾಧ್ಯಮಗಳಲ್ಲಂತೂ ಮಹಿಳೆಯರನ್ನು ತುಂಬಾ ಕೀಳಾಗಿ ಚಿತ್ರಿಸುವ ಪರಿಪಾಠ ಇತ್ತೀಚಿಗೆ ವೇಗವಾಗಿ ಬೆಳೆಯುತ್ತಿದೆ. ಸಿನೆಮಾ ಮಾಧ್ಯಮದಲ್ಲಿ ಮಹಿಳೆ ಚಿತ್ರಣ, ಭಾರತೀಯ ಚಿತ್ರರಂಗದ ಬೆಳವಣಿಗೆ, ಕನ್ನಡದಲ್ಲೂ ಚಲನಚಿತ್ರ ಮಾಧ್ಯಮ ಬೆಳೆದು ಬಂದದ್ದರ ಸ್ಥೂಲವಾದ ಪರಿಚಯವನ್ನ ಈ ಪ್ರಬಂಧದಲ್ಲಿ ಮಾಡಲಾಗಿದೆ.

ಕನ್ನಡ ಕಾದಂಬರಿಗಳು ಮತ್ತು ಚಲನಚಿತ್ರಗಳ ಬಗ್ಗೆ ಕೆಲವು ವಿವರಗಳನ್ನು ನೀಡಿದ್ದೇನೆ. ಆನಂತರ ಸ್ತ್ರೀಸಂವೇದನಾ ಪರವಾದ ತ.ರಾ.ಸು ಅವರ ಕಾದಂಬರಿಗಳು ಮತ್ತು ಚಲನಚಿತ್ರ ಕುರಿತಂತೆ ಈ ಸಂಶೋಧನಾ ಪ್ರಬಂಧದಲ್ಲಿ ಅವಲೋಕಿಸಿದ್ದೇನೆ.

'ನಾಗರಹಾವು' 'ಮಸಣದಹೂವು', 'ಆಕಸ್ಮಿಕ', 'ಬೆಂಕಿಯಬಲೆ' ಮುಂತಾದ ಕಾದಂಬರಿಗಳು ಚಲನಚಿತ್ರಗಳಾಗಿರುವುದನ್ನು ಸ್ವತಃ ವೀಕ್ಷಿಸಿ ಪ್ರೇಕ್ಷಕವರ್ಗ ಮತ್ತು ಸಮಾಜದ ಮೇಲೆ ಈ ಸಿನಿಮಾಗಳು ಬೀರಿರುವ ಪರಿಣಾಮವನ್ನು ಅವಲೋಕನ ಮಾಡಿದ್ದೇನೆ. ಹಾಗೂ ತ.ರಾ.ಸು ಮತ್ತು ಚಲನಚಿತ್ರ ಮಾಧ್ಯಮದ ಬಗ್ಗೆ ಗುರುತಿಸಿದ್ದೇನೆ.

ಪ್ರಗತಿಶೀಲ ಪಂಥತದಲ್ಲಿ ಕೃತಿ ರಚಿಸಿದ ತ.ರಾ.ಸು ಅವರು ತಮ್ಮ ಸಮಕಾಲೀನ ಕೃತಿಕಾರರಿಗಿಂತ ಭಿನ್ನವಾದ ಭಾಷೆಯನ್ನು ಬಳಸಿರುವುದರ ಅವಲೋಕನವನ್ನು ಮಾಡಲಾಗಿದೆ. ಇವರ ಕಾದಂಬರಿಗಳ ತಂತ್ರ, ಒಂದೇ ತಂತ್ರವನ್ನೊಳಗೊಂಡ ಹಲವು ಕಾದಂಬರಿಗಳನ್ನು ಕುರಿತು ಪರಿಶೀಲಸಿದ್ದೇನೆ. ಒಂದೇ ವಸ್ತುವನ್ನೊಳಗೊಂಡ ಹಲವು ಕಾದಂಬರಿಗಳು (ಕಾದಂಬರಿ ಮಾಲೆ), ಕಾದಂಬರಿಗಳ ಶಿರೋನಾಮೆಗಳ ಔಚಿತ್ಯ, ಇವರ ಸಮಕಾಲೀನ ಮತ್ತು ಆರಂಭದ ಕಾದಂಬರಿಗಳ ಭಾಷೆಯಲ್ಲಿನ ಸ್ತ್ರೀಸಂವೇದನೆ. ತ.ರಾ.ಸು ಅವರ ಕಾದಂಬರಿಗಳ ಭಾಷೆಯ ಸ್ತ್ರೀಸಂವೇದನೆ ಕುರಿತು ಅವಲೋಕನ ಮಾಡಲಾಗಿದೆ. ಅಲಂಕಾರಭರಿತವಾದ, ವರ್ಣನಾತ್ಮಕ, ಹೋಲಿಕೆಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

ತ.ರಾ.ಸು ಅವರ ಕಾದಂಬರಿಗಳನ್ನು ವಿವಿಧ ನೆಲೆಗಟ್ಟಿನಲ್ಲಿ ಅಧ್ಯಯನ ಮಾಡುವ ಸಾಧ್ಯತೆಗಳಿವೆ. ಐತಿಹಾಸಿಕ ಕಾದಂಬರಿಗಳನ್ನು ರಚಿಸುವಲ್ಲಿ ಸಿದ್ಧಹಸ್ತರಾದ ತ.ರಾ.ಸು ಅವರು ರಚಿಸಿರುವ ಐತಿಹಾಸಿಕ ಕಾದಂಬರಿಗಳನ್ನು ಕುರಿತಂತೆ ಸಂಶೋಧನೆ ಕೈಗೊಳ್ಳುವ ಸಾಧ್ಯತೆ ಇದೆ. ಒಟ್ಟು ಇವರ ಕಾದಂಬರಿಗಳು ಮತ್ತೊಂದು ಪ್ರಬಂಧದ ವಿಷಯವಾಗಬಹುದು. ತ.ರಾ.ಸು ಅವರ ಕಾದಂಬರಿಯೇತರ ಸಾಹಿತ್ಯ ಕೂಡ ಒಂದು ಸಂಶೋಧನಾ ಪ್ರಬಂಧದ ವಿಷಯವಾಗುವ ಸಾಧ್ಯತೆಯಿದೆ. ಪ್ರಗತಿಶೀಲರ ಅನಂತರದ ಕಾದಂಬರಿಕಾರರಲ್ಲಿ ತ.ರಾ.ಸು ಅವರ ಪ್ರೇರಣೆ ಮತ್ತು ಪ್ರಭಾವ ಕುರಿತು ಅಧ್ಯಯನ ಹಾಗೂ ದಲಿತ ಮತ್ತು ಬಂಡಾಯದಲ್ಲಿ ಪ್ರಗತಿಶೀಲರ ಧೋರಣೆ ಮತ್ತು ಸಾಮ್ಯತೆ ಗುರುತಿಸಬಹುದಾಗಿದೆ. ತ.ರಾ.ಸು ಅವರ ಕಾದಂಬರಿಯೇತರ ಕೃತಿಗಳ ವಿಶ್ಲೇಷಣೆ ನನ್ನ ಪ್ರಬಂಧದ ವ್ಯಾಪ್ತಿಗೆ ಹೊರತಾದುದರಿಂದ ಆ ಕೃತಿಗಳನ್ನು ಕುರಿತಾದ ಅಧ್ಯಯನವನ್ನು ನಾನು ಕೈಗೊಂಡಿರುವುದಿಲ್ಲ. ತ.ರಾ.ಸು ಅವರ ಕಾದಂಬರಿಗಳಲ್ಲಿನ ಸ್ತ್ರೀಸಂವೇದನೆಯನ್ನಷ್ಟೇ ಅವಲೋಕನ ಮಾಡುವ ಪ್ರಯತ್ನವನ್ನು ಈ ಸಂಶೋಧನಾ ಪ್ರಬಂಧದಲ್ಲಿ ಮಾಡಲಾಗಿದೆ.

# ಅನುಬಂಧ

**ಅನುಬಂಧ-೧**

ಓಬ್ಬವಳ ಮೂಲ ವಂಶ ವೃಕ್ಷ: ಸುವರ್ಣ ಜಾನಪದ ಸಂಪುಟ-೨ರಲ್ಲಿ ಪ್ರೊ.ಲಕ್ಷ್ಮಣ ತೆಲಗಾವಿ ಅವರು ಓಬವ್ವೆಯ ಮೂಲ ಕುರಿತು ಬರೆದ ಲೇಖನದಲ್ಲಿ ಕೊಟ್ಟಿರುವ ವಂಶವೃಕ್ಷ

**ಅನುಬಂಧ-೨**

ತ.ರಾ.ಸು ಅವರ ಕಾದಂಬರಿಗಳಲ್ಲಿ ಬಳಕೆಯಾಗಿರುವ ಗಾದೆ ಮಾತುಗಳು:

## ಗ್ರಂಥ ಋಣ :


| | | | |
|---|---|---|---|
| 1 | ಅನಂತನಾರಾಯಣ ಎಸ್ | ಹೊಸಹನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ ಡಿ.ವಿ.ಕೆ, ಮೂರ್ತಿ, ಮೈಸೂರು | 2000 (ನಾಲ್ಕನೆ ಮು) |
| 2 | ಅಮೂರ ಜಿ.ಎಸ್ | ಅ.ನ.ಕೃಷ್ಣರಾಯ ಸಾಹಿತ್ಯ ಆಕಾಡೆಮಿ, ರವೀಂದ್ರಭವನ, 35, ಫಿರೋಜಶಾಹ ರಸ್ತೆ, ನವದೆಹಲಿ | 1987 (ಮೊ.ಮು) |
| 3 | ಅಶೋಕ.ಟಿ.ಪಿ | ವಾಸ್ತವತಾವಾದ ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು | 1989 |
| 4 | ಅಶೋಕ.ಟಿ.ಪಿ | ಶಿವರಾಮಕಾರಂತರ ಎರಡು ಅಧ್ಯಯನಗಳು– ಅಕ್ಷರ ಪ್ರಕಾಶನ, ಹೆಗ್ಗೋಡು. (ಸಾಗರ), ಕರ್ನಾಟಕ | 1996 (ದ್ವಿಮು) |
| 5 | ಅಶೋಕ.ಟಿ.ಪಿ.(ಸಂ) | ಕಾರಂತರ ಮಂಥನ– ಕರ್ನಾಟಕ ಸಂಘ ಮತ್ತೂರು ದಕ್ಷಿಣ ಕನ್ನಡ | 1994 (ಮೊ.ಮು) |
| 6 | ಇಂದಿರಾ.ಆರ್. | ಮಹಿಳೆ, ಸಮಾಜ ಮತ್ತು ಸಂಸ್ಕೃತಿ ಪ್ರಸಾರಾಂಗ, ಕನ್ನಡ ವಿ.ವಿ.ಹಂಪಿ. | 2002 (ಮೊ.ಮು) |
| 7 | ಉಷಾ.ಎಂ | ಮಹಿಳಾಚಳವಳಿ ಮತ್ತು ಮಹಿಳಾ ವಿಷಯಗಳು ಪ್ರಸಾರಾಂಗ. ಕನ್ನಡ ವಿಶ್ವವಿದ್ಯಾಲಯ,ಹಂಪಿ | 2004 |
| 8 | ಕುವೆಂಪು | ಕಾನೂರು ಹೆಗ್ಗಡಿತಿ ಉದಯರವಿ ಪ್ರಕಾಶನ ವಾಣಿವಿಲಾಸಪುರಂ, ಮೈಸೂರು. | 2002 (ಹನ್ನೆರಡನೇ ಮುದ್ರಣ) |
| 9 | ಕುರ್ತುಕೋಟಿ. ಕೆ.ಡಿ | ಯುಗಧರ್ಮ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು, ವಿಶ್ವಕನ್ನಡ ಸಮ್ಮೇಳನ ಮೈಸೂರು | 1983 (ಮೊ.ಮು) |
| 10 | ಕೃಷ್ಣಯ್ಯ ಎಂ.ಎಚ್. (ಸಂ) ಸಿದ್ದಲಿಂಗಯ್ಯ ಜಿ.ಎಸ್. | ಸಾಲುದೀಪಗಳು ಕನ್ನಡ ಸಾಹಿತ್ಯ ಅಕಾಡೆಮಿ ನೃಪತುಂಗ ರಸ್ತೆ, ಬೆಂಗಳೂರು | 1990 (ಮೊ.ಮು) |

| | | | |
|---|---|---|---|
| 11 | ಕೃಷ್ಣರಾಯ.ಅ.ನ | ಸಜೀವಸಾಹಿತ್ಯ<br>ಮೈಸೂರು, ಗೀತಾಬುಕ್‌ಹೌಸ್. | 1965 |
| 12 | ಕೃಷ್ಣರಾಯ.ಅ.ನ.(ಸಂ) | ಪ್ರಗತಿ ಶೀಲ ಸಾಹಿತ್ಯ<br>ಪ್ರಗತಿಶೀಲ ಲೇಖಕರ ಸಂಘ,<br>ಬೆಂಗಳೂರು ಮತ್ತು ಕರ್ನಾಟಕ<br>ಸಾಹಿತ್ಯ ಮಂದಿರ, ಧಾರವಾಡ | 1944 |
| 13 | ಕೃಷ್ಣರಾಯ.ಅ.ನ (ಸಂ) | ಪ್ರಗತಿಶೀಲ ಲೇಖಕರ ಸಂಘ,<br>ಬೆಂಗಳೂರು<br>ಕರ್ನಾಟಕ ಸಾಹಿತ್ಯ ಮಂದಿರ,<br>ಧಾರವಾಡ | 1944 |
| 14 | ಕೃಷ್ಣರಾಯ.ಅ.ನ (ಸಂ) | ನನ್ನನ್ನು ನಾನೆ ಕಂಡೆ<br>ಡಿ.ವಿ.ಕೆ.ಮೂರ್ತಿ. ಮೈಸೂರು | 1960<br>(ದ್ವಿಮು) |
| 15 | ಕೃಷ್ಣರಾಯ.ಶಾ.ಮಂ (ಸಂ) | ರಸಚೇತನ<br>ಮಡಗಾಂವ,ಗೋವಾ, ಕನ್ನಡ ಸಂಘ. | 1970 |
| 16 | ಕೃಷ್ಣರಾಯ.ಶಾ.ಮಂ (ಸಂ) | ತ.ರಾ.ಸು. ಬದುಕುಬರಹ<br>ವಿಶ್ವಭಾರತಿ ಪ್ರಕಾಶನ<br>ಸ್ಟೇಷನ್ ರಸ್ತೆ, ಮಡಗಾಂವ್,ಗೋವಾ. | 1982 |
| 17 | ಕೃಷ್ಣಕುಮಾರ್ ಸಿ.ಪಿ | ಸಾಹಿತ್ಯಪ್ರವೇಶ<br>ಕರ್ನಾಟಕ ಸಹಕಾರಿ ಪ್ರಕಾಶನ<br>ಮಂದಿರ<br>ನಿಯಮಿತ ಜಾಮರಾಜ ಪೇಟೆ,<br>ಬೆಂಗಳೂರು-18 | 1974<br>(ದ್ವಿಮು) |
| 18 | ಕೋಮಲವಲ್ಲಿ.ಎಚ್.ಆರ್. | ತ.ರಾ.ಸು. ಅವರ ಸಾಮಾಜಿಕ<br>ಕಾದಂಬರಿಗಳು ಒಂದು ಅಧ್ಯಯನ<br>(ಪರಿಷ್ಕೃತ)<br>ಮಾರ್ಗದರ್ಶಕರು ಡಾ.ಕೆ.ಶ್ರೀಕಂಠ<br>(ಶ್ರೀಕಂಠ ಕೊಡಿಗೆ) ರೀಡರ್. ಕನ್ನಡ<br>ಭಾರತಿ ಕುವೆಂಪು. ವಿಶ್ವವಿದ್ಯಾನಿಲಯ<br>ಬಿ.ಆರ್.ಪಿ. ಶಿವಮೊಗ್ಗ.<br>(ಪಿ.ಎಚ್.ಡಿ.ಮಹಾಪ್ರಬಂಧ<br>ಅಪ್ರಕಟಿತ) | 1993 |

| | | | |
|---|---|---|---|
| 19 | ಗುಲ್ವಾಡಿ ವೆಂಕಟರಾವ್. | ಇಂದಿರಾಬಾಯಿ<br>ಕನ್ನಡ ಮತ್ತು ಸಂಸ್ಕೃತಿ<br>ನಿರ್ದೇಶನಾಲಯ<br>14-ಎ.ನೃಪತುಂಗರಸ್ತೆ<br>ಬೆಂಗಳೂರು | 1985 |
| 20 | ಗಿರಡ್ಡಿ ಗೋವಿಂದರಾಜ | ಕಾದಂಬರಿ: ವಸ್ತು ಮತ್ತು ತಂತ್ರ<br>ಬಾಪ್ಕೊ ಪ್ರಕಾಶನ.<br>ಮೈಸೂರು ರಸ್ತೆ, ಬೆಂಗಳೂರು-18 | 1976 |
| 21 | ಜವರೇಗೌಡ.ದೇ | ಗದ್ಯಶೈಲಿ<br>ಮೈಸೂರು.ಡಿ.ವಿ.ಕೆ.ಮೂರ್ತಿ. | 1978 |
| 22 | ಜವರೇಗೌಡ.ದೇ (ಸಂ)<br>ಸಿ.ಪಿ.ಕೆ | ಕಟ್ಟೀಮನಿ ಬದುಕು ಬರಹ<br>ಗೀತಾಬುಕ್‌ಹೌಸ್.ಮೈಸೂರು. | 1969 |
| 23 | ತೇಜಸ್ವಿನಿ ನಿರಂಜನ(ಸಂ)<br>ಸೀಮಂತಿನಿ ನಿರಂಜನ | ಸ್ತ್ರೀವಾದಿ ಸಾಹಿತ್ಯ ವಿಮರ್ಶೆ<br>ಕನ್ನಡ ಸಂಘ<br>ಕ್ರೈಸ್ಟ್‌ಕಾಲೇಜು, ಬೆಂಗಳೂರು | 1994<br>(ಮೊ.ಮು) |
| 24 | ಧರಣೀದೇವಿ ಮಾಲಗತ್ತಿ | ಸ್ತ್ರೀವಾದ ಮತ್ತು ಭಾರತೀಯತರ<br>ಚೇತನ್ ಬುಕ್‌ಹೌಸ್<br>ರೇಣುಕಾಚಾರ್ಯ ದೇವಸ್ಥಾನದ<br>ರಸ್ತೆ(ಲಕ್ಷ್ಮಿಟಾಕೀಸ್ ಹಿಂಭಾಗ)<br>ಮೈಸೂರು. | 1998<br>(ಮೊ.ಮು) |
| 25 | ನರಹಳ್ಳಿ ಬಾಲಸುಬ್ರಹ್ಮಣ್ಯ | ಅ.ನ.ಕೃ. ಮತ್ತು ಕನ್ನಡ ಸಂಸ್ಕೃತಿ<br>ಅಂಕಿತ ಪುಸ್ತಕ.53. ಶ್ಯಾಮಸಿಂಗ್<br>ಕಾಂಪ್ಲೆಕ್ಸ್<br>ಗಾಂಧಿಬಜಾರ್,<br>ಮುಖ್ಯರಸ್ತೆ,ಬಸವನಗುಡಿ<br>ಬೆಂಗಳೂರು. | 2006<br>(ಮೊ.ಮು) |
| 26 | ನಾಗರಾಜಪ್ಪ. ಕೆ.ಜಿ.(ಸಂ) | ಸಾಹಿತ್ಯ ಮತ್ತು ಸಾಮಾಜಿಕ<br>ನಿಲುವುಗಳು<br>ಕನ್ನಡ ಸಾಹಿತ್ಯ<br>ಅಕಾಡೆಮಿ,ಬೆಂಗಳೂರು | 1980<br>(ಮೊ.ಮು) |
| 27 | ನಾಗಭೂಷಣಸ್ವಾಮಿ.ಓ.ಎಲ್. | ವಿಮರ್ಶೆಯ ಪರಿಭಾಷೆ.<br>ಪರಿಸರ ಸಾಹಿತ್ಯ ಪ್ರಕಾಶನ<br>ಶಿವಮೊಗ್ಗ | 1983<br>(ಮೊ.ಮು) |
| 28 | ನಾಯಕ.ಹಾಮ | ಸಮೀಕ್ಷೆ.<br>ಮೈಸೂರು.ಗೀತಾಬುಕ್‌ಹೌಸ್. | 1967 |

| | | | |
|---|---|---|---|
| 29 | ನಾರಾಯಣ.ಕೆವಿ. | ಬೇರುಕಾಂಡ ಚಿಗುರು<br>ವಿವೇಕ ಪ್ರಕಾಶನ,ವಿಚಾರ ವೇದಿಕೆ,<br>ಕರ್ನಾಟಕ 436,14ನೇ ಮುಖ್ಯರಸ್ತೆ,<br>ಲಕ್ಕಸಂದ್ರ ಬಡಾವಣೆ ಬೆಂಗಳೂರು. | 1997<br>(ಮೊ.ಮು) |
| 30 | ನಿರಂಜನ | ಬುದ್ಧಿ ಭಾವ ಬದುಕು.<br>ಸ್ಪಂದನ ಪ್ರಕಾಶನ: ಬೆಂಗಳೂರು. | 1984 |
| 31 | ಪ್ರಭಾಕರ್.ನಾ.(ಸಂ) | ಸ್ನೇಹಸಮನ್ವಯ<br>ತ.ರಾ.ಸು. ಪ್ರತಿಷ್ಠಾನ<br>ಗಿರಿಕನ್ಯಕಾ, ಯಾದವಗಿರಿ<br>ಮೈಸೂರು | 1993<br>(ಮೊ.ಮು) |
| 32 | ಪ್ರಭಾಕರ್.ನಾ.(ಸಂ) | ಅ.ನ.ಕೃ.<br>ತ.ರಾ.ಸು.ಪ್ರತಿಷ್ಠಾನ<br>ಗಿರಿಕನ್ಯಕಾ,ಯಾದವಗಿರಿ<br>ಮೈಸೂರು. | 1997<br>(ಮೊ.ಮು) |
| 33 | ಪ್ರಹ್ಲಾದ ಅಗಸನಕಟ್ಟೆ | ದಲಿತ-ಬಂಡಾಯ ಮತ್ತು<br>ವಿಚಾರವಾದಗಳು<br>(ಪಿಎಚ್.ಡಿ ಸಂಶೋಧನಾ ಪ್ರಬಂಧ)<br>ಹರ್ಷ ಪ್ರಕಾಶನ.<br>ಮನೆ.ನಂ.6.ಬ್ಲಾಕ್.ನಂ.2<br>ಕಿಮ್ಸ್ ಕ್ವಾಟರ್ಸ್.ಹುಬ್ಬಳ್ಳಿ-22 | |
| 34 | ಪಾಟೀಲ.ಎಂ.ಎಸ್. | ತ.ರಾ.ಸು<br>ಸಾಹಿತ್ಯ ಅಕಾಡೆಮಿ, ರವೀಂದ್ರಭವನ<br>ರಸ್ತೆ,35 ಫಿರೋಜಶಾಹ ರಸ್ತೆ,<br>ನವದೆಹಲಿ. | 2008<br>(ಮೊ.ಮು) |
| 35 | ಪುಟ್ಟಣ್ಣ.ಎಂ.ಎಸ್. | ಮಾಡಿದ್ದುಣ್ಣೋಮಹಾರಾಯ<br>ಕಾವ್ಯಾಲಯ ಪ್ರಕಾಶನ:ಮೈಸೂರು | 1967<br>(ಮೊ.ಮು) |
| 36 | ಪ್ರೀತಿ ಶುಭಚಂದ್ರ | ಮಹಿಳಾ ಅಧ್ಯಯನದ ತಾತ್ತ್ವಿಕ<br>ನೆಲೆಗಳು ಮತ್ತು ಮಹಿಳಾ<br>ಚಳವಳಿಗಳು<br>ಪ್ರಸಾರಾಂಗ, ಕನ್ನಡ ವಿ.ವಿ.ಹಂಪಿ | 2002<br>(ಮೊ.ಮು) |
| 37 | ಬರಗೂರು<br>ರಾಮಚಂದ್ರಪ್ಪ(ಪ್ರ.ಸಂ) | ಕನ್ನಡ ಸಾಹಿತ್ಯದಲ್ಲಿ ಸ್ತ್ರೀಸಂವೇದನೆಯ<br>ಸ್ವರೂಪ ಕನ್ನಡ ಸಾಹಿತ್ಯ ಅಕಾಡೆಮಿ<br>ಕನ್ನಡಭವನ,ಜೆ.ಸಿ.ರಸ್ತೆ, ಬೆಂಗಳೂರು | 2006<br>(ದ್ವಿ.ಮು) |

| | | | |
|---|---|---|---|
| 38 | ಬಸವರಾಜ ಕಟ್ಟೀಮನಿ | ಜ್ವಾಲಾಮುಖಿಯ ಮೇಲೆ<br>ಶಾರದ ಪ್ರಕಟನಾಲಯ<br>ಮೈಸೂರು. | 1951 |
| 39 | ಬೆಳಗಲಿ.ದು.ನಿಂ | ಕನ್ನಡದಲ್ಲಿ ಕಾದಂಬರಿ ಸಾಹಿತ್ಯ<br>ಕರ್ನಾಟಕ ವಿಶ್ವವಿದ್ಯಾಲಯ,<br>ಧಾರವಾಡ | 1975<br>(ಮೊ.ಮು) |
| 40 | ಬೋಳಾರ ಬಾಬುರಾವ್ | ವಾಗ್ದೇವಿ. ಕನ್ನಡ ಮತ್ತು ಸಂಸ್ಕೃತಿ<br>ನಿರ್ದೇಶನಾಲಯ | 1985 |
| 41 | ಮಂಜುಳಾ ಹುಲ್ಲಹಳ್ಳಿ | ಕದಳಿಯ ಬನದೊಳಗೆ<br>ಸಿವಿಜಿ ಪಬ್ಲಿಕೇಷನ್ಸ್ , ಬೆಂಗಳೂರು | 2004<br>(ಮೊ.ಮು) |
| 42 | ಮದನ್‌ಲಾಲ್ ಮಧು<br>ಅನುವಾದ: ಪ್ರದಾನಗುರುದತ್ತ | ಗೋರ್ಕಿ ಮತ್ತು ಪ್ರೇಮ್‌ಚಂದ್<br>ಎರೆಡು ಅಮರ ಪ್ರತಿಭೆಗಳು.<br>ರಾದುಗ ಪ್ರಕಾಶನ, ಮಾಸ್ಕೊ.<br>ನವಕರ್ನಾಟಕ ಪಬ್ಲಿಕೇಷನ್ಸ್<br>ಪ್ರೈ.ಲಿ.ಬೆಂಗಳೂರು | 1988 |
| 43 | ಮಲ್ಲಿಕಾ ಘಂಟಿ | ಕನ್ನಡದಲ್ಲಿ ಮಹಿಳಾಸಾಹಿತ್ಯ ಒಂದು<br>ಅಧ್ಯಯನ, ಯುವಲೋಕ ಪ್ರಕಾಶನ.<br>ಶ್ರೀನಗರ ಧಾರವಾಡ | 1995<br>(ಮೊ.ಮು) |
| 44 | ಮಳಲಿವಸಂತಕುಮಾರ್<br>(ಸಂ), ಕೆ.ಭೈರವಮೂರ್ತಿ | ನಮ್ಮ ಕನ್ನಡ<br>(ಕನ್ನಡ ಯೋಧ.ನ.ನಾಗಲಿಂಗಸ್ವಾಮಿ<br>ಅಭಿನಂದನಾಗ್ರಂಥ ಸಮಿತಿ.<br>ಮೈಸೂರು) | 1991 |
| 45 | ಮಾಸ್ತಿವೆಂಕಟೇಶ<br>ಅಯ್ಯಂಗಾರ್ | ಪ್ರಸಂಗ.ಭಾಗ-1<br>ಜೀವನ ಕಾರ್ಯಾಲಯ, ಬೆಂಗಳೂರು | 1972 |
| 46 | ಮುಗಳಿ ರಂ.ಶ್ರೀ | ಕನ್ನಡ ಸಾಹಿತ್ಯ ಚರಿತ್ರೆ<br>ಸಾಹಿತ್ಯೋಪಾಸನೆ<br>ಮೈಸೂರು. ಶಾರದಮಂದಿರ | 1963<br>(ದ್ವಿ.ಮು) |
| 47 | ಮುಗಳಿ ರಂ.ಶ್ರೀ | ಕನ್ನಡ ಸಾಹಿತ್ಯ ಚರಿತ್ರೆ<br>ಉಷಾ ಸಾಹಿತ್ಯ ಮಾಲೆ | 1968 |
| 48 | ಮೂರ್ತಿ. ಡಿ.ವಿ.ಕೆ | ಜೀವನ ಮೌಲ್ಯಗಳು ಮತ್ತು ಸಾಹಿತ್ಯ<br>ಡಿ.ವಿ.ಕೆ.ಮೂರ್ತಿ.ಕೃಷ್ಣಮೂರ್ತಿಪುರ,<br>ಮೈಸೂರು | 1995<br>(ಮೊ.ಮು) |
| 49 | ಮೂರ್ತಿರಾವ್.ಎ.ಎನ್. | ಸಾಹಿತ್ಯ ಮತ್ತು ಸತ್ಯ<br>ಬೆಂಗಳೂರು.ಡಿ.ವಿ.ಕೆ.ಮೂರ್ತಿ | 1982. |

| | | | |
|---|---|---|---|
| 50 | ಯರವಿನ ತೆಲಿಮಠ.ಸಿ.ಆರ್. | ಪಾಶ್ಚಾತ್ಯ ವಾದಗಳು ಮತ್ತು<br>ಕನ್ನಡ ಸಾಹಿತ್ಯ ಸಂದರ್ಭ<br>ಪ್ರಸಾರಾಂಗ, ಕನ್ನಡ<br>ವಿಶ್ವವಿದ್ಯಾಲಯ,ಹಂಪಿ. | 2000<br>(ಮೊ.ಮು) |
| 51 | ರಂಗಣ್ಣ.ಎಸ್.ವಿ | ಶೈಲಿ ಭಾಗ-1<br>ಮೈಸೂರು, ಕಾವ್ವಾಲಯ | 1971<br>(ದ್ವಿಮು) |
| 52 | ರಂಗರಾಜ ವನದುರ್ಗ (ಸಂ)<br>ದೇವನಾಗೇಶ್ | ಬರಗೂರರ 'ಶಾಂತಿ ಚಿತ್ರ'<br>ಗೀತಾಂಜಲಿ ಪಬ್ಲಿಕೇಷನ್ಸ್<br>138,8ನೇ ಕ್ರಾಸ್,4ನೇಮುಖ್ಯರಸ್ತೆ<br>ಗೋವಿಂದರಾಜನಗರ, ಬೆಂಗಳೂರು. | 1993<br>(ಮೊ.ಮು) |
| 53 | ರಘುರಾಂ.ಎ. | ಆಕೃತಿ<br>ಸ್ವಾಗತ ಸಮಿತಿ<br>ಅಖಿಲ ಭಾರತ 68ನೆಯ ಕನ್ನಡ<br>ಸಾಹಿತ್ಯ ಸಮ್ಮೇಳನ ಬಾಗಲಕೋಟೆ. | 2000<br>(ಮೊ.ಮು) |
| 54 | ರಂಗರಾಜ ವನದುರ್ಗ (ಸಂ)<br>ದೇವನಾಗೇಶ್ | ಗೀತಾಂಜಲಿ ಪಬ್ಲಿಕೇಷನ್ಸ್<br>138,8ನೇ ಕ್ರಾಸ್,4ನೇಮುಖ್ಯರಸ್ತೆ<br>ಗೋವಿಂದರಾಜನಗರ, ಬೆಂಗಳೂರು. | 1993<br>(ಮೊ.ಮು) |
| 55 | ರಾಘವೇಂದ್ರರಾವ್.ಎಚ್.ಎಸ್ | ಪ್ರಗತಿಶೀಲತೆ<br>ಕನ್ನಡ ಸಾಹಿತ್ಯ<br>ಅಕಾಡೆಮಿ,ಬೆಂಗಳೂರು. | 1990 |
| 56 | ರಮೇಶ.ಬಿಜಿ. | ತ.ರಾ.ಸು<br>ದಿವ್ಯಚಂದ ಪ್ರಕಾಶನ<br>ನಂ.45 ಪಾಪಣ್ಣನ ತೋಟ.1ನೇ<br>ಮುಖ್ಯರಸ್ತೆ 2ನೇ ಅಡ್ಡರಸ್ತೆ. ಕರ್ನಾಟಕ<br>ಹೌಸಿಂಗ್‌ಬೋರ್ಡ್‌ಕಾಲೋನಿ 2ನೇ<br>ಹಂತ-ಬಸವೇಶ್ವರ ನಗರ ಬೆಂಗಳೂರು | 2003<br>(ಮೊ.ಮು) |
| 57 | ರಮೇಶ.ಜೆ.ಕೆ. | ಕನ್ನಡ ಪೌರಾಣಿಕ ಕಾದಂಬರಿಗಳು<br>ಪ್ರಸಾರಾಂಗ. ಕನ್ನಡ ವಿ.ವಿ.ಹಂಪಿ | 2003<br>(ಮೊ.ಮು) |

| | | | |
|---|---|---|---|
| 58 | ರಾಮಚಂದ್ರ ಚಿಂತಾಮಣಿಢೇರೆ (ಕನ್ನಡಕ್ಕೆ ವಿಠಲರಾವ್ ಗಾಯಕ್ವಾಡ್) | ಲಜ್ಜಾಗೌರಿ<br>ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ | 2003 (ಮೊ.ಮು) |
| 59 | ರಮೇಶ ಚಂದ್ರದತ್ತ (ರಾಮಸ್ವಾಮಿ.ಚೆ.ಅಭಿನಂದನ ಗ್ರಂಥ) | ದ್ರಾವಿಡಸಿರಿ<br>ಡಾ.ಚೆ.ರಾಮಸ್ವಾಮಿ ಅಭಿನಂದನ ಸಮಿತಿ ಹಿರಿಯೂರು ಚಿತ್ರದುರ್ಗ ಜಿಲ್ಲೆ. | 2008 (ಮೊ.ಮು) |
| 60 | ಲಕ್ಕಪ್ಪಗೌಡ.ಎಚ್.ಜೆ.(ಪ್ರ.ಸಂ) | ಸುವರ್ಣ ಜಾನಪದ ಸಂಪುಟ-2<br>ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು. | 1998 |
| 61 | ಲೋಕೇಶ ಅಗಸನಕಟ್ಟೆ | ಕನ್ನಡ ಕಾವ್ಯ<br>ಸಮಾಜ ಸಂಸ್ಕೃತಿ.<br>ಆಲೋಕ ಪ್ರಕಾಶನ ;ದಶಮಿ',<br>ತರಳಬಾಳು<br>ಬಡಾವಣೆ ಚಿತ್ರದುರ್ಗ. | 2003 (ಮೊ.ಮು) |
| 62 | ವಾಸುದೇವಾಚಾರ್ಯಕೆರೂರು | ಇಂದಿರಾ<br>ಮೈಸೂರು, ಉಷಾಸಾಹಿತ್ಯಮಾಲೆ | 1980 (ದ್ವಿ.ಮು) |
| 63 | ವಿಜಯಶ್ರೀ.ಕೆ | ಕನ್ನಡ ಪತ್ರಿಕೆಗಳು ಮತ್ತು ಸಾಹಿತ್ಯ<br>ಕನ್ನಡ ವಿಶ್ವವಿದ್ಯಾಲಯ,ಹಂಪಿ | 2000 |
| 64 | ಮರಾಠಿಮೂಲ. ಮು.ಮ.ಜಗತಾಪ್ (ಸಿಕಂದರನ ಇತಿಹಾಸ) ಕನ್ನಡಕ್ಕೆ ಡಾ.ವಿಠಲರಾವ್ ಗಾಯಕ್ವಾಡ್ | ತಾರೀಖೆ-ಇಸ್ಕಂದರಿ<br>ಪ್ರಸಾರಾಂಗ, ಕನ್ನಡ,<br>ವಿ.ವಿ.ಹಂಪಿ | 2000 (ಮೊ.ಮು) |
| 65 | ಮರಾಠಿಮೂಲ.ಡಾ.ಅಶ್ವಿನಿ ಧೋಂಗಡೆ ಕನ್ನಡಕ್ಕೆ, ಡಾ.ವಿಠಲರಾವ್ ಗಾಯಕ್ವಾಡ್ | ಸ್ತ್ರೀವಾದಿ ವಿಮರ್ಶೆ<br>ಸ್ವರೂಪ ಮತ್ತು ಪರಿಕಲ್ಪನೆಗಳು<br>ಪ್ರಸಾರಾಂಗ, ಕನ್ನಡ ವಿ.ವಿ.ಹಂಪಿ. | 2001 (ಮೊ.ಮು) |
| 66 | ವಿಠಲರಾವ್ ಗಾಯಕ್ವಾಡ್ | ಕುವೆಂಪು ಸಾಹಿತ್ಯದಲ್ಲಿ ವೈಚಾರಿಕತೆ (ಸಂಶೋಧನಾ ಮಹಾಪ್ರಭಂಧ)<br>ಚೇತನಬುಕ್‌ಹೌಸ್,ಅಂಜನಾದ್ರಿ, ರೇಣುಕಾಚಾರ್ಯ ದೇವಸ್ಥಾನದ ರಸ್ತೆ. ಲಕ್ಷ್ಮಿಟಾಕೀಸ್ ಹಿಂಭಾಗ, ಮೈಸೂರು. | 2003 (ಮೊ.ಮು) |

| | | | |
|---|---|---|---|
| 67 | ಮೂಲಮರಾಠಿ:ದಿ.ಸೇತುಮಾಧವರಾವ್‌ಪಗಡಿ ಕನ್ನಡಾನುವಾದ, ವಿಠಲರಾವ್ ಗಾಯಕ್ವಾಡ್ | ಸೂಫಿ ಸಂಪ್ರದಾಯ ತತ್ವಜ್ಞಾನ ಮತ್ತು ಕಾರ್ಯ ಕನ್ನಡ ಪುಸ್ತಕ ಪ್ರಾಧಿಕಾರ ಕನ್ನಡಭವನ ಬೆಂಗಳೂರು. | 2004 (ಮೊ.ಮು) |
| 68 | ವೀರಭದ್ರಪ್ಪ.ಬಿ.ವಿ | ಭಾರತೀಯ ಮಹಿಳೆಯ ಸಾಂಸ್ಕೃತಿಕ ವಿಕಾಸ ಕನ್ನಡ ಸಾಹಿತ್ಯ ಪರಿಷತ್ತು. ಪಂಪ ಮಹಾಕವಿರಸ್ತೆ, ಚಾಮರಾಜಪೇಟೆ, ಬೆಂಗಳೂರು | 2006 (ಮೊ.ಮು) |
| 69 | ವಿವೇಕ ರೈ.ಬಿ.ಎ.(ಸಂ) | ಕನ್ನಡ ಕಾದಂಬರಿಯ ಮೊದಲ ಹೆಜ್ಜೆಗಳು ಮಂಗಳೂರು: ಕನ್ನಡ ವಿಭಾಗ.ಮಂಗಳೂರು.ವಿ.ವಿ. | 1987 |
| 70 | ಶಿವರುದ್ರಪ್ಪ.ಜಿ.ಎಸ್.(ಸಂ) | ಕಾದಂಬರಿಕಾರರಾಗಿ ಕಾರಂತ ಪ್ರಸಾರಾಂಗ, ಬೆಂಗಳೂರು, ವಿಶ್ವವಿದ್ಯಾನಿಲಯ | 1983 |
| 71 | ಶಿವರುದ್ರಪ್ಪ.ಜಿ.ಎಸ್. | ಪ್ರತಿಕ್ರಿಯೆ ಬೆಂಗಳೂರು.ಪುರೋಗಾಮಿ | 1982 |
| 72 | ಶಿವರುದ್ರಪ್ಪ.ಜಿ.ಎಸ್. | ಸಾಹಿತ್ಯ ಮತ್ತು ಸಾಮಾಜಿಕ ನಿಲುವುಗಳು ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು | 1989 |
| 73 | ಶಿವರುದ್ರಪ್ಪ.ಜಿ.ಎಸ್. | ಗತಿಬಿಂಬ ಮೈಸೂರು,ಸುರುಚಿ ಪ್ರಕಾಶನ | 1974 |
| 74 | ಶಿವರಾಮಕಾರಂತ.ಕೆ | ಸರಸಮ್ಮನ ಸಮಾಧಿ ಎಸ್.ಬಿ.ಎಸ್.ಪಬ್ಲಿಷರ್ಸ್,ಡಿಸ್ಟ್ರಿಬ್ಯೂಟರ್ಸ್ ರೈಲ್ವೆಪ್ಯಾರಲಲ್‌ರೋಡ್, ಕುಮಾರ್‌ಪಾರ್ಕ್,ಈಸ್ಟ್, ಬೆಂಗಳೂರು | 1994 (ಪ್ರ.ಮು) |
| 75 | ಶ್ರೀಕಂಠಕೂಡಿಗೆ | ಹೊಸಗನ್ನಡ ಕಥಾಸಾಹಿತ್ಯ-2 ಪ್ರಸಾರಾಂಗ.ಕುವೆಂಪು ವಿ.ವಿ. | 2006 (ಮೊ.ಮು) |
| 76 | ಶ್ರೀನಿವಾಸಮೂರ್ತಿ.ಪಿ.ಜಿ. | ಕನ್ನಡ ಚಿತ್ರರಂಗ ಕನ್ನಡ ಸಾಹಿತ್ಯ ಪರಿಷತ್ತು ಪಂಪಮಹಾಕವಿರಸ್ತೆ,ಚಾಮರಾಜಪೇಟೆ ಬೆಂಗಳೂರು. | 1995 (ಮೊ.ಮು) |
| | | | |

| | | | |
|---|---|---|---|
| 77 | ಶ್ರೀಪತಿ ಹಳಗುಂದ | ಕನ್ನಡ ಕಾದಂಬರಿಗಳಲ್ಲಿ ವೇಶ್ಯಾಜೀವನ<br>ಕನ್ನಡ ಸಾಹಿತ್ಯ ಪರಿಷತ್ತು ಪಂಪಮಹಾಕವಿರಸ್ತೆ,ಚಾಮರಾಜಪೇಟೆ ಬೆಂಗಳೂರು | 2008 (ಮೊ.ಮು) |
| 78 | ಶ್ರೀಮತಿ.ಎಚ್.ಎಸ್. | ಸ್ತ್ರೀವಾದ<br>ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ | 2003 (ಮೊ.ಮು) |
| 79 | ಶ್ರೀಶೈಲ ಆರಾಧ್ಯ.ಹೆಚ್(ಸಂ) | ಗಿರಿಮಲ್ಲಿಗೆ<br>(ತ.ರಾ.ಸು.ಸಂಸ್ಮರಣ ಸಂಪುಟ)<br>ತ.ರಾ.ಸು.ಸಂಸ್ಮರಣ ಸಂಪುಟ ಸಮಿತಿ.ಚಿತ್ರದುರ್ಗ | 1984 (ಮೊ.ಮು) |
| 80 | ಶೇಷಗಿರಿರಾವ್.ಎಲ್.ಎಸ್. | ಒಂದು ಸ್ವರ್ಣಮಹೋತ್ಸವ<br>ಸಹಚಿಂತನ, ಪ್ರಜಾಮತ. | 1986 |
| 81 | ಶೇಷಗಿರಿರಾವ್.ಎಲ್.ಎಸ್. | ಹೊಸಗನ್ನಡ ಸಾಹಿತ್ಯ ಚರಿತ್ರೆ<br>ಅಂಕಿತ ಪುಸ್ತಕ,ಬಸವನಗುಡಿ ಬೆಂಗಳೂರು | 2002 (ಪರಿಷ್ಕೃತ.ದ್ವಿ ಮು) |
| 82 | ಸರೋಜಾ.ಕೆ. | ಮಹಿಳೆ ಮತ್ತು ಸಮೂಹ ಮಾಧ್ಯಮಗಳು<br>ಪ್ರಸಾರಾಂಗ, ಕನ್ನಡ.ವಿ.ವಿ.ಹಂಪಿ. | 2004 (ಮೊ.ಮು) |
| 83 | ಸಿದ್ದಲಿಂಗಯ್ಯ ಜಿ.ಎಸ್. (ಸಂ), ಕೃಷ್ಣಯ್ಯ.ಎಂ.ಎಚ್ | ಸಾಲುದೀಪಗಳು<br>ಕನ್ನಡ ಸಾಹಿತ್ಯ ಅಕಾಡೆಮಿ ನೃಪತುಂಗ ರಸ್ತೆ, ಬೆಂಗಳೂರು | 1990 (ಮೊ.ಮು) |
| 84 | ಸುಜಾತ. ಎಚ್.ಎಸ್ | ಎಂ.ಎಸ್.ಪುಟ್ಟಣ್ಣ ಒಂದು ಅಧ್ಯಯನ<br>ಐಬಿಎಚ್.ಪ್ರಕಾಶನ ಗಾಂಧಿನಗರ, ಬೆಂಗಳೂರು | 1981 (ಮೊ.ಮು) |
| 85 | ಸುಬ್ಬರಾವ್.ತ.ರಾ. | ಕಂಬನಿಯ ಕುಯಿಲು<br>ಎಚ್.ವೆಂಕಟರಾಮಯ್ಯ ಅಂಡ್‌ಸನ್ಸ್. ವಿದ್ಯಾನಿಧಿ ಬುಕ್‌ಡಿಪೋ, ಮೈಸೂರು. | 1953 |
| 86 | ಸುಬ್ಬರಾವ್.ತ.ರಾ. | ಬೆಳಕು ತಂದ ಬಾಲಕ<br>ಗೀತಾಬುಕ್‌ಹೌಸ್<br>ನ್ಯೂ ಸ್ಟಾಚ್ಯು ಸರ್ಕಲ್, ಮೈಸೂರು. | 1971 (ದ್ವಿ.ಮು) |
| 87 | ಸುಬ್ಬರಾವ್.ತ.ರಾ. | ಸಿಡಿಲಮೊಗ್ಗು<br>ವಿದ್ಯಾನಿಧಿಬುಕ್‌ಡಿಪೋ, ಮೈಸೂರು-1 | 1973 (ದ್ವಿ.ಮು) |

| | | | |
|---|---|---|---|
| 88 | ಸುಬ್ಬರಾವ್.ತ.ರಾ. | ಬಯಕೆಯ ಬಂದಿ<br>ಸಾಹಿತ್ಯ ನಂದನ, ನಂ.9 ನೇ,ಇ<br>ವಿಭಾಗ.10.ಎ.ಮುಖ್ಯರಸ್ತೆ<br>ರಾಜಾಜಿನಗರ, ಬೆಂಗಳೂರು–10 | 1973<br>(ಮೊ.ಮು) |
| 89 | ಸುಬ್ಬರಾವ್.ತ.ರಾ. | ಯಕ್ಷಪ್ರಶ್ನೆ, ಗೀತಾಬುಕ್‌ಹೌಸ್,<br>ಮೈಸೂರು | 1986<br>(ಪು.ಮು) |
| 90 | ಸುಬ್ಬರಾವ್.ತ.ರಾ. | ಚದುರಂಗದ ಮನೆ<br>ಗೀತಾಬುಕ್‌ಹೌಸ್, ಮೈಸೂರು. | 1981 |
| 91 | ಸುಬ್ಬರಾವ್.ತ.ರಾ. | ಯಕ್ಷ ಪ್ರಶ್ನೆ<br>ಗೀತಾಬುಕ್‌ಹೌಸ್, ಮೈಸೂರು. | 1986<br>(ಪು.ಮು) |
| 92 | ಸುಬ್ಬರಾವ್.ತ.ರಾ. | ಪುರುಷಾವತಾರ<br>ಗೀತಾಬುಕ್‌ಹೌಸ್, ಮೈಸೂರು | 1986<br>(ಪು.ಮು) |
| 93 | ಸುಬ್ಬರಾವ್.ತ.ರಾ. | ಹಂಸಗೀತೆ<br>ಗೀತಾಬುಕ್‌ಹೌಸ್, ಮೈಸೂರು | 2001 |
| 94 | ಸುಬ್ಬರಾವ್.ತ.ರಾ. | ಮಸಣದ ಹೂವು<br>ಶಕುಂತಲಾ ನಾಗರಾಗ್<br>1066 ಕುಮಾರಸ್ವಾಮಿ ಬಡಾವಣೆ,<br>1ನೇಹಂತ 5ನೇ ಅಡ್ಡರಸ್ತೆ,<br>ಬೆಂಗಳೂರು–78 | 2003 |
| 95 | ಸುಬ್ಬರಾವ್.ತ.ರಾ. | ವಿಷಪ್ರಾಶನ<br>ಸಾಹಿತ್ಯ ನಂದನ<br>ನಂ.9 ನೇ,ಇ<br>ವಿಭಾಗ.10.ಎ.ಮುಖ್ಯರಸ್ತೆ<br>ರಾಜಾಜಿನಗರ ಬೆಂಗಳೂರು.–10 | 2004<br>(ಮೊ.ಮು) |
| 96 | ಸುಬ್ಬರಾವ್.ತ.ರಾ. | ಪರಿಮಳದ ಉರುಳು<br>ಓಂ ಶಕ್ತಿ ಪ್ರಕಾಶನ<br>748/12, 4ನೇ ವಿಭಾಗ<br>ರಾಜಾಜಿನಗರ ಬೆಂಗಳೂರು | 2005<br>(ಓಂ ಶಕ್ತಿ<br>ಪ್ರಕಾಶನದಲ್ಲಿ<br>ಮೊ.ಮು) |
| 97 | ಸುಬ್ಬರಾವ್.ತ.ರಾ. | ಅಕ್ಕಮ್ಮನ ಭಾಗ್ಯ, ಓಂ ಶಕ್ತಿ ಪ್ರಕಾಶನ,<br>748\12, 4ನೇ ವಿಭಾಗ<br>ರಾಜಾಜಿನಗರ, ಬೆಂಗಳೂರು | 1973<br>(ಮೊ.ಮು) |
| 98 | ಸುಬ್ಬರಾವ್.ತ.ರಾ. | ಪಂಜರದ ಪಕ್ಷಿ<br>ಓಂಶಕ್ತಿ ಪ್ರಕಾಶನ.748/12<br>58ನೇ ಕ್ರಾಸ್. 4ನೇಬ್ಲಾಕ್,<br>ರಾಜಾಜಿನಗರ,ಬೆಂಗಳೂರು | 2005 |

| | | | |
|---|---|---|---|
| 99 | ಸುಬ್ಬರಾವ್.ತ.ರಾ. | ರಕ್ತರಾತ್ರಿ<br>ವಿದ್ಯಾನಿಧಿ,ಬುಕ್ ಡಿಪೋ,ಮೈಸೂರು-1 | |
| 100 | ಸುಬ್ಬರಾವ್.ತ.ರಾ. | ತಿರುಗುಬಾಣ<br>ವಿದ್ಯಾನಿಧಿ ಬುಕ್‌ಡಿಪೋ,<br>ಮೈಸೂರು-1 | |
| 101 | ಹರಿಕೃಷ್ಣ ಭರಣ್ಯ | ಹೊಸಗನ್ನಡ ಸಾಹಿತ್ಯದ ಉಗಮ<br>ಮತ್ತು ವಿಕಾಸ ಪವರ್ ಪ್ರೆಸ್,<br>ಪುತ್ತೂರು, ದಕ್ಷಿಣಕನ್ನಡ | 1990 |
| 102 | ಸುಬ್ಬರಾವ್.ತ.ರಾ. | ಪ್ರಗತಿಶೀಲ ಸಾಹಿತ್ಯ ಭಾಷಣಮಾಲೆ<br>ಕನ್ನಡನುಡಿ, ಸಂಪುಟ.6, ಸಂಚಿಕೆ 42 | 1944 |
| 103 | ಸುಬ್ಬರಾವ್.ತ.ರಾ. | ಶ್ರೀ ಚಕ್ರೇಶ್ವರಿ ಅಥವಾ ಬಯಸಿಬಂದ<br>ಭಾಗ್ಯ ಗೀತಾಬುಕ್‌ಹೌಸ್, ಮೈಸೂರು. | 2001<br>(ದ್ವಿ.ಮು) |
| 104 | ಸುಬ್ಬರಾವ್.ತ.ರಾ. | ನಾಲ್ಕು×ನಾಲ್ಕು=ಒಂದು<br>ಗೀತಾಬುಕ್‌ಹೌಸ್,ಮೈಸೂರು. | 2001<br>(ತೃ.ಮು) |
| 105 | ಕನ್ನಡ ವಿಶ್ವಕೋಶ ಸಂಪುಟ-4 | 14-ಎ,ನೃಪತುಂಗ ರಸ್ತೆ,ಬೆಂಗಳೂರು.<br>ಕನ್ನಡ ಅಧ್ಯಯನ ಸಂಸ್ಥೆ<br>ಮೈಸೂರು ವಿಶ್ವವಿದ್ಯಾನಿಲಯ<br>ಪುಟ-464 | 1972 |

# ತ.ರಾ.ಸು ಅವರ ಕೃತಿಗಳು

**ಸಾಮಾಜಿಕ ಕಾದಂಬರಿಗಳು :**

೧ ಅಕ್ಕಮ್ಮನ ಭಾಗ್ಯ

೨ ಅಕಸ್ಮಿಕ

೩ ಅಪರಾಧಿ

೪ ಎಲ್ಲಾ ಅವನ ಹೆಸರಿನಲ್ಲೇ!

೫ ಎರಡು ಹೆಣ್ಣು ಒಂದು ಗಂಡ

೬ ಒಮ್ಮೆ ನಕ್ಕ ನಗು

೬ ಕಣ್ಣು ತರೆಯಿತು

೭ ಕೇದಿಗೆ ವನ

೮ ಕಾಮಾಕ್ಷಿ

೯ ಕಾರ್ಕೋಟಕ

೧೦ ಖೋಟಾನೋಟು!

೮ ಗಾಳಿಮಾತು

೯ ಗೃಹಪ್ರವೇಶ

೧೦ ಗ್ರಹಣ ಬಿಟ್ಟಿತು

೧೧ ಚದುರಂಗದ ಮನೆ

೧೨ ಜೀತದ ಜೀವ

೧೩ ನಾಗರಹಾವು

